# 95 years of trust .....




## Results in a Record-Breaking Performance!

## A total business of over Rs. 87,000 crore

The measure of perfection is **'how much better you are than yourself'.** We at Canara Bank have consistently raised the performance levels and the results for 2000-01 speak for themselves.

■ Total business of over **Rs. 87,000 crore.** ■ Deposits of over **Rs. 59,000 crore**, the **highest accretion** of **Rs. 11,000 crore** in our 95 year history. ■ Advances over **Rs. 28,000 crore**, an accretion of over **Rs. 4,500 crore**, once again **the highest** in our history. ■ We are poised to break the **Rs. 1,01,000 crore** barrier in business turnover during 2001-02.

**With your continued support and faith in us we will add more milestones on our path to success and glory.**

*Sobhagya*



**CANARA BANK**
(A Govt. of India Undertaking)
Head Office: 112, J.C. Road, Bangalore - 560 002.
Visit us at : www.canbankindia.com
***Serving to Grow, Growing to Serve.***



R.J. Kamath
*Chairman & Managing Director*

# ಹೊಸತು

ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ*
*ಕೆ. ಗಣೇಶ ಕೋಡೂರು, ರವಿಕುಮಾರ್ ಅಜ್ಜೀಪುರ, ಎನ್. ಆರ್. ಹೆಗ್ಡೆ ಬೊಮ್ಮನಹಳ್ಳಿ*
*ಮುಖಚಿತ್ರ : ದೇವಾಲಯ, ಖಜುರಾಹೋ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


**ವಾ**ಜಪೇಯಿ ಸರ್ಕಾರವು ಮೂರ್ಖತನದಿಂದ ಅಣುಬಾಂಬನ್ನು ಸಿಡಿಸಿ ದೇಶವನ್ನು ಪ್ರಪಾತದತ್ತ ಕೊಂಡೊಯ್ಯಲು ಆರಂಭಿಸಿ ಅನೇಕ ವರ್ಷಗಳು ಕಳೆದಿವೆ. ಅದರಿಂದ ದೇಶದ ರಕ್ಷಣಾ ಬಲ ಹೆಚ್ಚಿದ್ದಕ್ಕೆ ಯಾವ ಸೂಚನೆಯೂ ಇಲ್ಲ. ಬದಲಾಗಿ ಅಮೆರಿಕಾಕ್ಕೆ ಶರಣು ಹೋಗುವ ತುಚ್ಛ ಸಂಪ್ರದಾಯ ಹೊಸದಾಗಿ, ಆದರೆ ಅಗಾಧವಾಗಿ, ಬೆಳೆದಿದೆ. ಇದೊಂದು ರಾಷ್ಟ್ರೀಯ ಸರ್ಕಾರವೇ ಎಂಬ ಅನುಮಾನ – ಹತಾಶೆ ಹೆಚ್ಚುತ್ತಿದೆ. ಈಚೆಗೆ ನಮ್ಮ ದೇಶಕ್ಕೆ ಭೇಟಿ ನೀಡಿದ ಆರ್ಮಿಟೇಜ್ ಜೊತೆ ಕೇಂದ್ರ ಸರ್ಕಾರ ವ್ಯವಹರಿಸಿದ ರೀತಿ ವಾಕರಿಕೆ ಬರಿಸುವಂಥದು. ಬಾಂಬು ಸ್ಫೋಟಿಸಿದ ತರುವಾಯದಲ್ಲಿ ವಾಜಪೇಯಿ ಒಂದು ಪತ್ರ ಬರೆದು ತಮ್ಮ ಪ್ರತಿನಿಧಿಯೊಡನೆ ಲಂಡನ್, ಪ್ಯಾರಿಸ್, ಮುಂತಾದೆಡೆಗಳಿಗೆ ಕಳಿಸಿದ್ದುದರ ವಿವರಗಳು ಈಗ ಬಹಿರಂಗವಾಗಿವೆ. ಇಡೀ ದೇಶ ನಾಚಬೇಕಾದ ಸಂಗತಿ. ನಮ್ಮ ಪ್ರಧಾನಿಯ ಪ್ರತಿನಿಧಿ ಬ್ರಿಟನ್ನಿನ ಪ್ರಧಾನಿಯನ್ನು ಸಂಧಿಸಲು ಹಿಂದುಜಾ ಸೋದರರ ನೆರವು ಪಡೆಯಬೇಕಾಯಿತಂತೆ ! ಸರ್ಕಾರದ ಖಾಸಗೀಕರಣಕ್ಕೆ ಇದೊಂದು ಉದಾಹರಣೆ ಇರಬೇಕು. ಯೂರೋಪಿನ ಬೇರೆ ದೇಶಗಳಲ್ಲೂ ಇಂಥದೇ ನಾಜೂಕಯ್ಯರ ಸಹಾಯದಿಂದ ಆಯಾ ದೇಶಗಳ ಪ್ರಧಾನಿಗಳ ಭೇಟಿ ಸಿದ್ಧಿಸಿತೆಂದರೆ ನಮ್ಮ ದೇಶದ ಘನತೆ ಎಷ್ಟುಮಟ್ಟಿನದು ? ಅಂಗಲಾಚುವ ಶ್ವಾನದ ಸ್ಥಿತಿಯನ್ನು ನಮ್ಮ ರಾಷ್ಟ್ರಕ್ಕೆ ತಂದುಕೊಟ್ಟ ವಾಜಪೇಯಿ ಸರ್ಕಾರ ಅಪರಾಧ ಎಸಗಿದೆ. ಇದೊಂದಕ್ಕೇ ಸರ್ಕಾರದ ನೇತಾರರನ್ನು ಹೊರದೂಡಬೇಕು, ಬಂಧನದಲ್ಲಿರಿಸಬೇಕು ಎನಿಸುತ್ತದೆ. ಸರ್ಕಾರವನ್ನು ಹಿಂದುಜಾರಂತಹವರ ಅಧೀನ ಮಾಡಿದ್ದು ಅಪರಾಧವಲ್ಲದೆ ಮತ್ತೇನು ? ಇದೇ ಇವರ ರಾಷ್ಟ್ರೀಯ ಅಭಿಮಾನದ ಕುರುಹು !

ಬಾಂಬು ಸಿಡಿಸಿದ ಧೀರರು ಈಗ ಅಮೆರಿಕಾದ ಅಧ್ಯಕ್ಷರು ಉದಾರವಾಗಿ ನೀಡುವ ಛತ್ರಿಯ ಕೆಳಗೆ ನಿಂತು ಆತನನ್ನು ಓಲೈಸುವ ಸಲುವಾಗಿ ಮತ್ತೆ ದೇಶದ ಘನತೆಯನ್ನು, ಸ್ವಾತಂತ್ರ್ಯವನ್ನು ಅಮೆರಿಕಾಕ್ಕೆ ಒತ್ತೆ ಇಟ್ಟಿದ್ದಾರೆ. ಅಮೆರಿಕಾದ ಹೊಸ ಶಸ್ತ್ರ ನೀತಿಯನ್ನು ಸ್ವಾಗತಿಸಿರುವ ಏಕೈಕ ದೇಶ ಭಾರತ. ಮಿತ್ರರಾಷ್ಟ್ರಗಳು ಸಹ ಧಿಕ್ಕರಿಸಿರುವ ಆ ದುರ್ನೀತಿಯು ಅದ್ಭುತವಾದ್ದೆಂದು ಹೊಗಳಿ ಅಮೆರಿಕಾದ ಎಂಜಲಿಗಾಗಿ ಕಾದು ನಿಲ್ಲುವ ನಮ್ಮ 'ರಾಷ್ಟ್ರೀಯ' ನಾಯಕರಿಗೆ ನಮ್ಮ ಸಾರ್ವಭೌಮತ್ವ ಮತ್ತು ಸಂಸ್ಕೃತಿಗಳ ಬಗ್ಗೆ ಹೆಮ್ಮೆಯೂ ಇಲ್ಲ, ಗೌರವವೂ ಇಲ್ಲ. ಹೊಸ ಶಸ್ತ್ರ ನೀತಿಯು 'ದುಷ್ಟ' ರಾಷ್ಟ್ರಗಳನ್ನು ತಹಬಂದಿಗೆ ತರುವ ಉದ್ದೇಶ ಹೊಂದಿದೆಯೆಂಬ ಅಮೆರಿಕಾದ ದುರಹಂಕಾರದ ಮಾತನ್ನು ವಾಜಪೇಯಿ ಮಾನ್ಯ ಮಾಡಿದ್ದಾರೆ. ಈ ದುಷ್ಟರು ಯಾರೆಂದರೆ ಲಿಬ್ಯಾ, ಇರಾನ್, ಉತ್ತರ ಕೊರಿಯ, ಇತ್ಯಾದಿ ಚಿಕ್ಕ ರಾಷ್ಟ್ರಗಳು. ಅವನ್ನು ನಿಗ್ರಹಿಸಲು ಅಮೆರಿಕಾಕ್ಕೆ ಹೊಸ ಶಸ್ತ್ರನೀತಿ ಬೇಕೆ ? ಅಷ್ಟು ಆತಂಕ ಉಂಟುಮಾಡುವ ಶಕ್ತಿ ಈ ಚಿಕ್ಕ ರಾಷ್ಟ್ರಗಳಿಗಿದೆಯೆ ? ಒಂದು ಸಾವಿರ ಉತ್ತರ ಕೊರಿಯಾಗಳನ್ನು ನಾಶಮಾಡುವ ಶಕ್ತಿ ಈಗಾಗಲೇ ಅಮೆರಿಕಾಕ್ಕಿದೆ. ಹೀಗಿರುವಾಗ ಯಾವ ಸಮರ್ಥನೆಯೂ ಮೋಸದ ಮಾತೇ. ಇಂತಹ ಶುದ್ಧ ಸುಳ್ಳನ್ನು ಅಂಗೀಕರಿಸಿ ವಾಜಪೇಯಿ ನಮ್ಮ ರಾಷ್ಟ್ರವನ್ನು ಯಃಕಶ್ಚಿತ್ ರಾಷ್ಟ್ರವನ್ನಾಗಿಸಿದ್ದಾರೆ. ಇತಿಹಾಸ ಅವರ ಈ ಅಪರಾಧವನ್ನು ಎಂದಿಗೂ ಮನ್ನಿಸಲಾರದು. ನಮ್ಮ ದೇಶಕ್ಕೆ ಕುತ್ತುಂಟಾದರೆ ಅದು ಅಮೆರಿಕಾದಿಂದ ಸಂಭವಿಸುತ್ತದೆ; ನೆರೆ ರಾಷ್ಟ್ರಗಳಿಂದ ರಕ್ಷಿಸಿಕೊಳ್ಳಲು ಅಮೆರಿಕಾದ ಅಭಯಹಸ್ತದ ನಿರೀಕ್ಷಣೆ ತೀರಾ ಅಪಾಯಕಾರಿ. ಆರೇಳು ಸಾವಿರ ವರ್ಷಗಳ ಇತಿಹಾಸವಿರುವ ಭಾರತಕ್ಕೆ ಇದು ತಿಳಿಯಲಾಗದ ಅಂಶವಲ್ಲ.

ಇನ್ನು ಅಮೆರಿಕಾದ ನೈತಿಕ ವ್ಯಕ್ತಿತ್ವ ಎಂಥದು ? ಈ ತಿಂಗಳ ಎರಡು ಘಟನೆಗಳು ಇದಕ್ಕೆ ಸ್ಪಷ್ಟ ಉತ್ತರ ನೀಡುತ್ತವೆ: ಜಾಫರ್ ಪನಾಹಿ ಇರಾನಿನ ಖ್ಯಾತ ಚಲನಚಿತ್ರ ನಿರ್ದೇಶಕ. ಆತನಿಗೆ ಅಮೆರಿಕಾದ ಒಂದು ಸಂಸ್ಥೆಯು ಸ್ವಾತಂತ್ರ್ಯ ವೀರನೆಂಬ ಬಿರುದು ನೀಡಿದೆ. ಅವನ ಚಿತ್ರಗಳು ಅಮೆರಿಕಾದಲ್ಲಿ ಸಾಕಷ್ಟು ಪ್ರಶಂಸಿಸಲಾಗಿವೆ. ಹಾಂಕಾಂಗ್‌ನಿಂದ ದಕ್ಷಿಣ ಅಮೆರಿಕಾದ ಮಾಂಟಿವಿಡಿಯೋಗೆ ತೆರಳುವಾಗ ನ್ಯೂಯಾರ್ಕ್ ವಿಮಾನ ನಿಲ್ದಾಣದಲ್ಲಿ ಆತ ಎರಡು ಗಂಟೆಗಳ ಕಾಲ ಇದ್ದು ವಿಮಾನ ಬದಲಿಸಬೇಕಿತ್ತು. ಅಷ್ಟರಲ್ಲೇ ಅಮೆರಿಕಾದ ಪೊಲೀಸರು ಆತನನ್ನು ಬಂಧಿಸಿ, ಚಿತ್ರಹಿಂಸೆ ಕೊಟ್ಟು, ಅರ್ಜೆಂಟೈನಾಕ್ಕೆ ತೆರಳಿ ತನ್ನ ಚಿತ್ರಗಳ ಉತ್ಸವದಲ್ಲಿ ಪಾಲ್ಗೊಳ್ಳಲು ಆಗದಂತೆ ಹಾಂಕಾಂಗ್‌ಗೆ ಹೊರದೂಡಿದರು. ಅಮೆರಿಕಾ ಮಾನವ ಹಕ್ಕುಗಳನ್ನು ರಕ್ಷಿಸುವುದು ಹೀಗೆ. ಇರಾನಿನವನೆಂಬ ಒಂದೇ ಕಾರಣದಿಂದ ಈ ಕಲಾಕಾರನನ್ನು ಹೀನ ಅಪರಾಧಿ ಎಂಬಂತೆ ನಡೆಸಿಕೊಳ್ಳಲಾಯಿತು. ಅಮೆರಿಕಾದ ಕಲಾವಿದರು ಇನ್ನೂ ಇದನ್ನು ಧಿಕ್ಕರಿಸಿದಂತೆ ತೋರುವುದಿಲ್ಲ. ಇನ್ನೊಂದು ಘಟನೆ: ವಿಶ್ವಸಂಸ್ಥೆಯ ಮಾನವ ಹಕ್ಕು ರಕ್ಷಣಾ ಸಮಿತಿಗೆ ಹಾಗೂ ಮಾದಕ ದ್ರವ್ಯಗಳನ್ನು ನಿರ್ಬಂಧಿಸುವ ಸಮಿತಿಗೆ ನಡೆದ ಚುನಾವಣೆಗಳಲ್ಲಿ ಅಮೆರಿಕಾ ಸೋಲನ್ನನುಭವಿಸಿತು. ಪ್ರಜಾಪ್ರಭುತ್ವವೇ ತನ್ನ ಉಸಿರೆಂದು ಘೋಷಿಸಿಕೊಳ್ಳುವ ಅಮೆರಿಕಾ ಇದಕ್ಕೆ ಪ್ರತಿಕ್ರಿಯಿಸಿದ್ದು ವಿಶ್ವ ಪಾಳೆಗಾರನಂತೆ: ವಿಶ್ವಸಂಸ್ಥೆಗೆ ತಾನು ಕೊಡಬೇಕಾಗಿರುವ ಹಣವನ್ನು ಕೊಡುವುದಿಲ್ಲವೆಂದು ! ಚುನಾವಣೆಯಲ್ಲಿ ಸೋಲು ತನಗೆ ಅವಮಾನವೆಂದು ಈ ಪ್ರತಿಕ್ರಿಯೆ. ಹೀಗೆ ಸೋತವರೆಲ್ಲಾ ಪ್ರತಿಕ್ರಿಯಿಸಿದರೆ ವಿಶ್ವಸಂಸ್ಥೆ ಹೇಗೆ ಉಳಿಯುತ್ತದೆ ? ಅಂದರೆ, ತನ್ನ ವರ್ಚಸ್ಸಿನ ವರ್ಧನೆಗೆ ವಿಶ್ವವೆಲ್ಲಾ ತನ್ನ ಅಡಿಯಾಳಾಗಬೇಕೆಂಬುದು ಅಮೆರಿಕಾ ಸರ್ವಾಧಿಕಾರದ ನಿರೀಕ್ಷೆ. ತನ್ನ ತಾಳಕ್ಕೆ ಕುಣಿಯದಿದ್ದರೆ ವಿಶ್ವಸಂಸ್ಥೆಯೂ ಬೇಡ, ಪ್ರಜಾಪ್ರಭುತ್ವವೂ ಬೇಡ. ಇಂತಹ ಅಮೆರಿಕಾ ಸರ್ಕಾರದೊಡನೆ ಸಖ್ಯ ಇನ್ನೆಷ್ಟು ಸಿಹಿ ಇರಬೇಡ ! ನಾವು ಆಲೋಚಿಸಬೇಕಾದ ವಿಷಯ ಇದು.

* * *




ಸಂಪುಟ-೨ ಸಂಚಿಕೆ - ೧೧ ಜೂನ್ ೨೦೦೧

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೭೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**


## 'ನ್ಯಾಯ' ಪಡೆಯಲು ಪಡಿಪಾಟಲು

'ಭ್ರಷ್ಟಾಚಾರದ ರಾಣಿ' ತಮಿಳುನಾಡಿನಲ್ಲಿ ಕಿರೀಟಧಾರಣೆ ಮಾಡಿಕೊಂಡದ್ದು ಮಹತ್ವದ ಹಾಗೂ ಭಿನ್ನಾಭಿಪ್ರಾಯ ಮೂಡಿಸಿರುವ ವಿಷಯ. ಆಕೆ ಅಪರಾಧಿಯೋ ಅಲ್ಲವೋ ಎಂಬುದನ್ನು ತೀರ್ಮಾನಿಸಲು ನಮ್ಮ ನ್ಯಾಯಾಲಯಗಳ ವ್ಯವಸ್ಥೆಯಲ್ಲಿ ಹಲವು ವರ್ಷಗಳೇ ಹಿಡಿಯುತ್ತದೆ. ಲಲ್ಲೂ ಪ್ರಸಾದ್, ಅದ್ವಾನಿ, ಹಿಂದುಜಾ, ಸಲ್ಮಾನ್ ಖಾನ್, ಮುಂತಾದವರಿಗೆಲ್ಲಾ ಇದು ಅನ್ವಯಿಸುತ್ತದೆ. ನಮ್ಮ ಸರಾಸರಿ ಜೀವಿತಕಾಲ ಎಪ್ಪತ್ತು ವರ್ಷಗಳೆಂದು ಇಟ್ಟುಕೊಂಡರೆ ಆ ಪೈಕಿ ಒಂದು ಮೊಕದ್ದಮೆಯಲ್ಲಿ ಸುಮಾರು ಹತ್ತು ವರ್ಷ ಸವೆದುಹೋಗುತ್ತದೆ. ರಾಜಕೀಯದಲ್ಲೋ ಉದ್ಯಮದಲ್ಲೋ ತೊಡಗಿರುವವರು ಯಾವುದಾದರೂ ಒಂದು ಅಪರಾಧದ ಮೊಕದ್ದಮೆಯಲ್ಲಿ ಸಿಲುಕಿದರೆ ಶಿಕ್ಷೆಗೆ ಗುರಿಯಾಗಲು ಅಥವಾ ನಿರಪರಾಧಿಯೆಂದು ಸಾಬೀತಾಗಲು ಕನಿಷ್ಠ ಹತ್ತು ವರ್ಷಗಳ ಅವಧಿ ಬೇಕು ಎಂದಾಯಿತು. ಆ ಅವಧಿಯಲ್ಲಿ ಅವರು ಸುಮ್ಮನೆ ಕುಳಿತಿರುತ್ತಾರೆಯೆ ? ಕುಳಿತುಕೊಳ್ಳಬೇಕೆ ? ಜೀವಿತಕಾಲದ ಒಂದು ಭಾಗವನ್ನು ವೃಥಾ ದಂಡ ಮಾಡಿಕೊಳ್ಳುವುದು ಯಾರಿಗೂ ಸಲ್ಲದು. ಇನ್ನು ವಿಚಾರಣೆಯೇ ಇಲ್ಲದೆ ಕಾರಾಗೃಹಗಳಲ್ಲಿ ಬೆಂದುಹೋಗುತ್ತಿರುವವರ ಸಂಖ್ಯೆ ನಮ್ಮ ದೇಶದಲ್ಲಿ ಲಕ್ಷಗಟ್ಟಲೆಯೇ ಇದೆ. ಮೊಕದ್ದಮೆಗಳಿಂದ ಹೇಗೋ ತಪ್ಪಿಸಿಕೊಳ್ಳುವವರ ಸಂಖ್ಯೆಯೂ ಕಡಿಮೆಯೇನಿಲ್ಲ. ರಾಜಕೀಯ ಗಾಳಿ ಹೇಗೆ ಬೀಸುತ್ತದೆಯೆಂಬುದು ಈ ತಪ್ಪಿಸಿಕೊಳ್ಳುವಿಕೆಗೆ ಆಧಾರ. ಬರೋಡ ಡೈನಮೈಟ್ ಮೊಕದ್ದಮೆಯ ವೀರ ಜಾರ್ಜ್ ಫರ್ನಾಂಡೀಸ್, ಮಸೀದಿ ಧ್ವಂಸ ಮಾಡಿದ್ದರೆನ್ನಲಾದ ವೀರತ್ರಯರಾದ ಅದ್ವಾನಿ - ಉಮಾ - ಮುರಳಿಮನೋಹರ, ಸ್ಟಾಕುಗಳ ವ್ಯವಹಾರದಲ್ಲಿ ಕೋಟಿಗಟ್ಟಲೆ ಗುಳುಂ ಮಾಡಿದ ಹರ್ಷದ್ ಮುಂತಾದವರು ಮೊಕದ್ದಮೆಗಳನ್ನು ಎದುರಿಸದೆಯೇ ಪಾರಾಗಬಹುದು. ಅಂದರೆ ಅವರು 'ನಿರಪರಾಧಿ'ಗಳು. ಅವರ ಅಪರಾಧಗಳೇನಾದರೂ ಇದ್ದರೆ **ಔಪಚಾರಿಕವಾಗಿ** ಅವು 'ಅಪರಾಧ' ಎನಿಸಿಕೊಳ್ಳುವುದಿಲ್ಲ. ಆದ್ದರಿಂದ ಅವರು ಜೈಲಿಗೆ ಹೋಗುವ ಬದಲು ಮಂತ್ರಿಗಳಾಗಿರಬಹುದು. ಗಾಳಿ ಸರಿಯಾಗಿ ಬೀಸದಿದ್ದರೆ ಜಯಲಲಿತಾ, ಲಲ್ಲೂರಂತೆ ಅಪರಾಧಿಗಳೆಂಬ ಹಣೆಪಟ್ಟಿ ಧರಿಸಿಯೂ ಮಂತ್ರಿಗಳಾಗಬಹುದು. ಇಲ್ಲವೆ ಮಂತ್ರಿಯಾಗದೆಯೇ ಅಧಿಕಾರ ಚಲಾಯಿಸಬಹುದು. ಚಾಪೆ ಕದ್ದು ಜೈಲಿಗೆ ಹೋಗಿ ವಿಚಾರಣೆಗಾಗಿ ಹತ್ತು ವರ್ಷ ಕಾಯುವವರ 'ನಸೀಬು' ಇದರಿಂದ ತೀರಾ ಭಿನ್ನವಾದ್ದು. ಅವರು ಜೈಲಿನಲ್ಲೇ ಕೊಳೆಯಬೇಕು. ಅಲ್ಲೇ ನಿರವಯವಿಗಳಾಗಬೇಕು. ಅವರ ಬಗ್ಗೆ ನ್ಯಾಯಾಲಯಗಳಿಗೆ ಕನಿಕರ ಮೂಡುತ್ತದೆಯೇ ?

ನ್ಯಾಯದ ವಿತರಣೆ, ನ್ಯಾಯಾಂಗದ ಮರ್ಯಾದೆ, ನ್ಯಾಯಾಧಿಪತಿಗಳ ಘನತೆ, ಇತ್ಯಾದಿಗಳನ್ನು ಪರಾಮರ್ಶಿಸುವಾಗ ಇಂತಹ ವಿಪರ್ಯಾಸಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಅವಶ್ಯಕ. ಸಂವಿಧಾನದಲ್ಲಿ ಮಾನ್ಯತೆ ಪಡೆದ ಯಾವುದೇ ಅಂಗಸಂಸ್ಥೆಯ ಗೌರವವೂ ಗೌಣವಾಗಬಾರದೆಂಬುದು ನಿಜ; ಆದರೆ ಅಂತಹ ಪ್ರತಿಯೊಂದು ಸಂಸ್ಥೆಯೂ ಅದನ್ನು ಅರ್ಜಿಸಿಕೊಳ್ಳಬೇಕು. ಅಧಿಕಾರವನ್ನು ಚಲಾಯಿಸಿ, ಬೇರೆಯವರ ಬಾಯಿ ಮುಚ್ಚಿಸಿ, ಗೌರವವನ್ನು ಪಡೆದುಕೊಂಡರೆ ಮರೆಯಲ್ಲಿ ಗೌರವದ ಹರಣವಾಗುತ್ತಲೇ ಇರುತ್ತದೆ. ಜನಪ್ರತಿನಿಧಿಗಳಾಗಿ ಚುನಾಯಿತರಾಗಿ ಪಾರ್ಲಿಮೆಂಟಿನಲ್ಲಿ ಕೂಡುವ ಸದಸ್ಯರ ಕಾರ್ಯವೈಖರಿಯನ್ನು ವಿಮರ್ಶಿಸಿದರೆ ಅವರ ಗೌರವಕ್ಕೆ ಕುಂದುಂಟಾಗುವುದಿಲ್ಲ ಎಂದಾದರೆ, ಆ ಸೂತ್ರವು ಬೇರೆಲ್ಲಾ ಅಂಗಸಂಸ್ಥೆಗಳ ಕಾರ್ಯನಿರ್ವಾಹಕರಿಗೂ ಅನ್ವಯವಾಗುವುದು ಸೂಕ್ತವೆನಿಸುತ್ತದೆ. ನ್ಯಾಯಾಂಗಕ್ಕೆ ಸಲ್ಲಬೇಕಾದ ಮರ್ಯಾದೆಯು ಶಾಸಕಾಂಗ - ಕಾರ್ಯಾಂಗಗಳಿಗೂ ಯಥಾವಿಧಿ ಸಲ್ಲಬೇಕು; ಅವುಗಳಿಗಿಲ್ಲದ್ದು ನ್ಯಾಯಾಂಗಕ್ಕೂ ಅನವಶ್ಯಕವೇ ಆಗುತ್ತದೆ. ಭಾರತದ ಒಂದು ಪರಿಪಾಟವನ್ನು ವಿಮರ್ಶಿಸುತ್ತಾ ಎರಡು ಶತಮಾನಗಳ ಹಿಂದೆ ಕಾರ್ಲ್ ಮಾರ್ಕ್ಸ್ ಆಡಿದ್ದ ಒಂದು ಮಾತು ಮನನಯೋಗ್ಯವಾಗಿದೆ: ವೇದಗಳ ಪಾರಮ್ಯವನ್ನು ರಕ್ಷಿಸಲು ಅವನ್ನೋದುವ ಅವಕಾಶವನ್ನು ಹಲವು ಬಣಗಳಿಗೆ ನಿರಾಕರಿಸಲಾಗಿದೆಯೆಂಬುದು ಆ ಮಾತು. ಹೀಗೆ ಪಾರಮ್ಯವನ್ನು ಸಾಧಿಸಿಕೊಳ್ಳುವುದು ಆರೋಗ್ಯಕರವಲ್ಲ. ಪಾರದರ್ಶಕತೆಯನ್ನು ವೈಭವಿಸುವ ಇಂದಿನ ನಮ್ಮ ಸನ್ನಿವೇಶದಲ್ಲಂತೂ ಅದು ಸರ್ವಥಾ ಸಾಧುವಲ್ಲ. ನಿಂದನೆ ಮತ್ತು ವಿಮರ್ಶೆಗಳ ನಡುವೆ ವ್ಯತ್ಯಾಸವನ್ನು ಗುರುತಿಸಿಯೇ ನ್ಯಾಯಾಂಗದ ಪಾರಮ್ಯವು ಪ್ರತಿಷ್ಠಿತವಾಗಬೇಕೆಂಬುದು ತರ್ಕಬದ್ಧವಾಗಿದೆ. ನ್ಯಾಯಾಂಗವು ಸರ್ವಜ್ಞತ್ವದ ಆಗರವೆಂಬ ಭ್ರಾಂತಿಗೆ ಕೂಡ ಸೊಪ್ಪುಹಾಕುವ ಅವಶ್ಯಕತೆಯಿಲ್ಲ. ಕಾರ್ಯಾಂಗ-ಶಾಸಕಾಂಗಗಳು ಸೋತಾಗ ಅಥವಾ ನಿಷ್ಕ್ರಿಯವಾದಾಗ ನ್ಯಾಯಾಂಗವು ಚಟುವಟಿಕೆಯಿಂದ ಮಧ್ಯಪ್ರವೇಶ ಮಾಡಬೇಕಾಗುತ್ತದೆ ಎಂಬುದು ಸರಿಯಾದರೆ, ನ್ಯಾಯಾಂಗದಲ್ಲಿ ಅವೇ ಲಕ್ಷಣಗಳು ತೋರಿಬಂದರೆ ಯಾರು ಮತ್ತು ಹೇಗೆ ಮಧ್ಯಪ್ರವೇಶ ಮಾಡಬೇಕೆಂಬುದು ಕೇವಲ ಕುತೂಹಲದ ಪ್ರಶ್ನೆಯಾಗುವುದಿಲ್ಲ. ಪ್ರಜಾಪ್ರಭುತ್ವದಲ್ಲಿ ಅಂತಿಮವಾಗಿ ಜನ ಹಾಗೂ ಅವರ ಚುನಾಯಿತ ಪ್ರತಿನಿಧಿಗಳು ನಿರ್ಧಾರಕ ಅಂಶಗಳಾಗಬೇಕೆಂಬ ಅಪೇಕ್ಷೆಗೆ ಇದೇ ಬುನಾದಿ. ಸಂವಿಧಾನದಲ್ಲಿ ಅದು ಸ್ಪಷ್ಟವಾಗಿಲ್ಲದಿದ್ದರೆ ಈಗ ಅದನ್ನು ಸೇರಿಸಬೇಕು.

ಇದೆಲ್ಲದರ ಪ್ರಸ್ತಾಪಕ್ಕೆ ಸಂದರ್ಭ ಇಂದಿನ ಹಲವು ವಿದ್ಯಮಾನಗಳು. ದೆಹಲಿಯ ವಾಹನಗಳು ಸಿ ಎನ್ ಜಿ ತಂತ್ರವನ್ನು ಅಳವಡಿಸಿಕೊಳ್ಳಲೇಬೇಕು, ನರ್ಮದಾ ಆಂದೋಲನದ ನಾಯಕರು ನ್ಯಾಯಾಲಯದ ತೀರ್ಮಾನವನ್ನು ಅಪಹಾಸ್ಯಕ್ಕೆ ಗುರಿಮಾಡಿದ್ದಾರೆ, ಯಾವುದೋ ಪತ್ರಿಕೆಯು ದೆಹಲಿಯ ನ್ಯಾಯಾಧೀಶರನ್ನು ಕುರಿತಂತೆ 'ವಾಹ್ ಇಂಡಿಯ' ಎಂಬ ಲೇಖನವನ್ನು ಪ್ರಕಟಿಸಿದ್ದು ನ್ಯಾಯಾಂಗ ನಿಂದನೆ ಎನಿಸಿಕೊಳ್ಳುತ್ತದೆ, ಎಂಬಿತ್ಯಾದಿ ಪ್ರಮೇಯಗಳು ನಮ್ಮ ಮುಂದಿವೆ. ಪಾರ್ಲಿಮೆಂಟಿಗಿಂತಲೂ ಹೆಚ್ಚಿನ ಶ್ರೇಷ್ಠತೆ ಹಾಗೂ ಪುರಸ್ಕಾರ ಬೇರಾವ ಅಂಗಸಂಸ್ಥೆಗೂ ಇಲ್ಲವೆಂಬ ನೀತಿಯನ್ನು ಅನುಸರಿಸಿದಾಗ ಇಂತಹ ಪ್ರಶ್ನೆಗಳು ಉದ್ಭವಿಸುವುದಿಲ್ಲ. ದಿವಂಗತ ನಾಥಪೈ ಮೂರು ದಶಕಗಳ ಹಿಂದೆ ಇದನ್ನು ಮನಗಂಡು ಪಾರ್ಲಿಮೆಂಟಿನ ಆದ್ಯಸ್ಥಾನದ ಅಗತ್ಯದ ಬಗ್ಗೆ ಚರ್ಚೆ ಆರಂಭಿಸಿದ್ದರು. ಲೋಕಸಭೆಯ ಸದಸ್ಯರು ವೃಥಾ ಕಾಲಹರಣ ಮಾಡದೆ ದೇಶಕ್ಕೆ ಸಂಬಂಧಿಸಿದ ಗಹನ ಸಮಸ್ಯೆಗಳನ್ನು ಗಂಭೀರವಾಗಿ ಚರ್ಚಿಸಬೇಕೆಂದು ಹೇಳುವುದು

ಪಾರ್ಲಿಮೆಂಟಿನ ಗೌರವಕ್ಕೆ ಅಥವಾ ಹಕ್ಕಿಗೆ ಚ್ಯುತಿಯನ್ನೇನೂ ತರುವುದಿಲ್ಲವೆಂಬುದು ನಿಜವಾದರೆ, ನ್ಯಾಯಾಲಯದಲ್ಲಿ ನ್ಯಾಯಮೂರ್ತಿಗಳು ಕಾಲಕ್ಕೆ ಸರಿಯಾಗಿ ಬಂದು ಕೆಲಸದಲ್ಲಿ ನಿರತರಾಗಬೇಕೆಂದು ಹೇಳುವುದು ನ್ಯಾಯಾಲಯದ ಗೌರವಕ್ಕೆ, ಹಕ್ಕಿಗೆ ಚ್ಯುತಿಯನ್ನು ಹೇಗೆ ಉಂಟುಮಾಡೀತು ? ಹಾಗೆ ವಾದ ಬೆಳೆಸುತ್ತಾ ಹೋದರೆ ನಾಳೆ ಎಂತಹ ಪರಿಸ್ಥಿತಿ ಉದ್ಭವಿಸಬಹುದೆಂದರೆ ಯಾವ ನ್ಯಾಯಾಲಯದಲ್ಲಿ ಎಷ್ಟು ಮೊಕದ್ದಮೆಗಳು ಎಷ್ಟು ವರ್ಷಗಳಿಂದ ಇತ್ಯರ್ಥವಾಗದೆ ಉಳಿದಿವೆ ಎಂಬುದನ್ನು ಹೇಳಬಾರದಾಗುತ್ತದೆ. ಕೆಲವು ಮೊಕದ್ದಮೆಗಳ ಇತ್ಯರ್ಥಕ್ಕೆ ವೇಗದ ಹಾದಿ ಕಲ್ಪಿಸುವುದಾದರೆ, ಯಾವುದು ಅಂತಹ ಮೊಕದ್ದಮೆಯೆಂದು ಹೇಗೆ ನಿರ್ಧರಿಸುವುದು ? ಜಯಲಲಿತಾಳ ಮೊಕದ್ದಮೆ ಶೀಘ್ರವಾಗಿ ಇತ್ಯರ್ಥವಾಗಬೇಕೆಂದು ಒಬ್ಬರು ಅಪೇಕ್ಷಿಸಿದರೆ, ವಿಚಾರಣೆ ನಡೆಯದೆ ಜೈಲುಗಳಲ್ಲಿ ಕೊಳೆಯುತ್ತಿರುವ ಅಸಂಖ್ಯ ಕೈದಿಗಳ ಮೊಕದ್ದಮೆ ಶೀಘ್ರವಾಗಿ ಇತ್ಯರ್ಥವಾಗಬೇಕೆಂದು ಇನ್ನೊಬ್ಬರು ಅಪೇಕ್ಷಿಸುತ್ತಾರೆ, ಭಾರತ್ ಅಲ್ಯುಮಿನಂ ಕಂಪೆನಿಯನ್ನು ಬೇಕಾಬಿಟ್ಟಿ ಖಾಸಗಿಯವರಿಗೆ ವಹಿಸಿರುವ ದುರ್ನೀತಿಯನ್ನು ರದ್ದು ಮಾಡಬೇಕೆಂದು ದುಡಿಯುವ ಜನ ಹೂಡಿರುವ ಮೊಕದ್ದಮೆ ಮೊದಲು ಇತ್ಯರ್ಥವಾಗಬೇಕೆಂದು ಮತ್ತೊಬ್ಬರು ಆಗ್ರಹಪಡಿಸುತ್ತಾರೆ, ಮಸೀದಿ ಒಡೆದುಹಾಕಿದವರನ್ನು ಬೇಗನೆ ಕಾನೂನಿನ ಪ್ರಕಾರ ಶಿಕ್ಷಿಸಬೇಕೆಂಬ ಮೊಕದ್ದಮೆ ಎಲ್ಲಕ್ಕಿಂತ ಮೊದಲು ಇತ್ಯರ್ಥವಾಗಬೇಕೆಂದು ಮಗದೊಬ್ಬರು ಹೇಳುತ್ತಾರೆ. 'ವಾಹ್ ಇಂಡಿಯಾ' ಲೇಖನ ಪ್ರಕಟಿಸಿದ್ದ ಪತ್ರಿಕೆಯ ವಿರುದ್ಧದ ಮೊಕದ್ದಮೆಯಲ್ಲಿ ವಿಚಾರಣೆಯ ವಿವರಗಳನ್ನು ಪ್ರಕಟಿಸಕೂಡದೆಂಬ ನ್ಯಾಯಾಲಯದ ಆಜ್ಞೆಯನ್ನು ರದ್ದುಪಡಿಸಲು ಆಸಕ್ತರು ಕೆಲವರು ಮತ್ತೊಂದು ಮೊಕದ್ದಮೆಯನ್ನು ಹೂಡಬೇಕಾಗಿ ಬಂತೆಂಬುದನ್ನು ಮರೆಯಬಾರದು. ಅಂದರೆ, ನ್ಯಾಯಾಲಯಗಳ ಕಾರ್ಯಪದ್ಧತಿ ಪರಾಮರ್ಶೆಯ ಪರಿಧಿಯಿಂದ ಹೊರಗುಳಿಯಬೇಕೆಂದು ಹೇಳಲಾಗದ ಸನ್ನಿವೇಶ ನಮ್ಮದು.

ನ್ಯಾಯಾಂಗದಲ್ಲಿನ ನಿಷ್ಠೆ ಪ್ರಕಟವಾಗುತ್ತಿರುವುದರಲ್ಲಿ ನ್ಯೂನತೆ ಮತ್ತು ವೈಚಿತ್ರ್ಯ ಸಹ ಇಲ್ಲದಿಲ್ಲ. ಶ್ರೀರಾಮಚಂದ್ರ ಹುಟ್ಟಿದ್ದೆಲ್ಲಿ ಎಂಬ ಪೌರಾಣಿಕ ಪ್ರಶ್ನೆಗೆ ಮತ್ತು ಅಯೋಧ್ಯೆಯಲ್ಲಿ ರಾಮನ ದೇವಸ್ಥಾನವೊಂದಿದ್ದು ಅದನ್ನು ಹಿಂದೆಂದೋ ನಾಶಗೊಳಿಸಲಾಗಿತ್ತೇ ಎಂಬ ಉತ್ಖನನ ಶಾಸ್ತ್ರದ ಪ್ರಶ್ನೆಗೆ ನ್ಯಾಯಾಂಗದಿಂದ 'ಇದಮಿತ್ಥಂ' ಎನಿಸುವ ಉತ್ತರವನ್ನು ನಿರೀಕ್ಷಿಸಲಾಗುತ್ತಿದೆ. ಮುರಳಿ ಮನೋಹರ ಜೋಶಿಯವರ 'ವೈದಿಕ ಜ್ಯೋತಿಷ್ಯ'ವು ವೈದಿಕವೆ ಮತ್ತು ಅದು ವಿಜ್ಞಾನವೇ ಎಂಬ ಪ್ರಶ್ನೆಯನ್ನೂ ನಾಳೆ ನ್ಯಾಯಾಂಗವು ಬಗೆಹರಿಸಬೇಕಾಗಬಹುದು. ವೆಂಕಯ್ಯ ನಾಯ್ಡು ಎಂಬ ಗ್ರಾಮಾಂತರ ಅಭಿವೃದ್ಧಿ ಸಚಿವರ ಪ್ರಕಾರ ಅಗ್ನಿಹೋತ್ರವೆಂಬ ಯಜ್ಞಕ್ರಿಯೆಯು ಕೃಷಿಕ್ಷೇತ್ರದ ಉತ್ಪಾದನೆಯನ್ನು ಹೆಚ್ಚಿಸುತ್ತದೆ ಮತ್ತು ಮಹಾರಾಷ್ಟ್ರದ ಕೆಲವು ಹಳ್ಳಿಗಳಲ್ಲಿ ಮೋಹನ್ ಧಾರಿಯಾ ನೇತೃತ್ವದಲ್ಲಿ ಇದನ್ನು ಪ್ರಾಯೋಗಿಕವಾಗಿ ಸಾಧಿಸಲಾಗಿದೆ. ಇದು ಮೂರ್ಖತನದ ಪರಮಾವಧಿಯೆಂದು ನಿವೃತ್ತ ನ್ಯಾಯಾಧೀಶ ತಾರ್ಕುಂಡೆ ಸಿಡಿದೆದ್ದಿದ್ದಾರೆ. ಇವೆರಡರಲ್ಲಿ ಯಾವುದು ಸರಿಯೆಂಬುದನ್ನೂ ಮುಂದಿನ ದಿನಗಳಲ್ಲಿ ನ್ಯಾಯಾಂಗವು ತೀರ್ಮಾನಿಸಬೇಕಾದೀತು ! ದೆಹಲಿಯ ಸಿ ಎನ್ ಜಿ ಪ್ರಕರಣವನ್ನೇ ತೆಗೆದುಕೊಂಡರೆ ಆ ಕ್ಷೇತ್ರದ ಪರಿಣತರೆಲ್ಲಾ ಒಮ್ಮತದಿಂದ ಆ ತಂತ್ರಜ್ಞಾನವನ್ನು ಸ್ವೀಕರಿಸಿಲ್ಲ. ಅಂತಹ ಪರಿಣತರಿಗಿಂತಲೂ ನ್ಯಾಯಾಧೀಶರೊಬ್ಬರು ಹೆಚ್ಚಿನ ತಾಂತ್ರಿಕ ಕೌಶಲ್ಯವನ್ನು ಸಿದ್ಧಿಸಿಕೊಂಡಿದ್ದಾರೆಂದು ತಲೆದೂಗುವುದು ಆಗದ ಮಾತು. ಆದ್ದರಿಂದ ಇಂತಹ ವಿಷಯಗಳಲ್ಲಿ ನ್ಯಾಯಾಂಗದ ತೀರ್ಮಾನವೇ ಅಂತಿಮ, ಅದನ್ನು ಪ್ರಶ್ನಿಸುವುದು ನ್ಯಾಯಾಂಗಕ್ಕೆ ಅಗೌರವವೆನಿಸಿಕೊಳ್ಳುತ್ತದೆ, ಎಂಬ ನಿಲುವು ಹಾನಿಕರವಾಗುತ್ತದೆ. ಸ್ವತಃ ನ್ಯಾಯಾಂಗವೇ ಅದನ್ನು ಸಾರ್ವಜನಿಕರಿಗೆ ತಿಳಿಸಿಕೊಡಬೇಕಾಗಿ ಬಂದರೆ ಅದು ಸ್ವಾಗತಾರ್ಹವೇ ಆಗಿರುತ್ತದೆ.

ನಮ್ಮ ದೇಶದಲ್ಲಿ ಜನಗಳ ಸ್ಥಾನ ಹಿಂದಕ್ಕೆ ಸರಿಯುತ್ತಿದೆ, ಅವರ ಬುದ್ಧಿಮತ್ತೆಯನ್ನು ಹೀಗಳೆಯಲಾಗುತ್ತಿದೆ. ಈ ಪ್ರವೃತ್ತಿಯನ್ನು ಜನರೇ ಹಿಮ್ಮೆಟ್ಟಿಸಬೇಕು. ಚುನಾವಣಾ ಸಂದರ್ಭಗಳಲ್ಲಿ ಚುನಾವಣಾ ಆಯೋಗವು ವಿಧಿಸುವ ಅಬದ್ಧ ನಿಯಮಗಳು ಇದಕ್ಕೊಂದು ಉದಾಹರಣೆ. ಚುನಾವಣೆ ಘೋಷಿಸಿದ್ ನಂತರ ಒಂದು ರಸ್ತೆಯನ್ನು ಸಹ ರಿಪೇರಿ ಮಾಡಬಾರದು. ಏಕೆಂದರೆ, ಅದು ಆಮಿಷವನ್ನೊಡ್ಡಿದಂತೆ ಆಗುತ್ತದೆ ! ಅಂದರೆ, ಜನರು ತಮ್ಮನ್ನು ತಾವು ಮಾರಿಕೊಳ್ಳುವ ಪಾತಕಿಗಳು ಎಂದರ್ಥ. ಅದು ನಿಜವಲ್ಲವೆಂದು ಜನ ಚುನಾವಣೆಗಳಲ್ಲಿ ತೋರಿಸಿಕೊಟ್ಟರೂ ಚುನಾವಣಾ ನೀತಿಸಂಹಿತೆಯ ಪ್ರಕಾರ ಚುನಾವಣೆ ಘೋಷಿಸಿದ ಮೇಲೆ ಒಂದು ತಿಂಗಳು ಯಾವ ಅಭಿವೃದ್ಧಿ ಚಿಂತನೆಯೂ ಕೂಡದು. ಜನರೆಲ್ಲಾ ಪ್ರಜ್ಞಾಹೀನರು, ಯಾರೋ ಒಬ್ಬ ಅಧಿಕಾರಿ ಮಾತ್ರ ಜನಹಿತ ಕಾಯುವ ಸರ್ವಜ್ಞನೆಂಬ ಕುತ್ಸಿತ ಕಲ್ಪನೆ ಇದರಲ್ಲಡಗಿದೆ. ರಾಜಕೀಯ ಪಕ್ಷಗಳು ಅದನ್ನು ಮಾನ್ಯ ಮಾಡಬೇಕೆ ? ಪ್ರಜಾಪ್ರಭುತ್ವವೆಂದರೆ ಇವನ್ನೆಲ್ಲಾ ಒಳಗೊಂಡಂತೆ ಸರ್ವಾಂಗೀಣ ಚಿಂತನೆ ಅನಿವಾರ್ಯವಾಗಿ ಆಗಬೇಕು. ಆ ದಿಕ್ಕಿನಲ್ಲಿ ಮುನ್ನಡೆಯೋಣ. ಆಗ ತಾನೆ ಜನರು ನ್ಯಾಯವನ್ನು ದೊರಕಿಸಿಕೊಳ್ಳಲು ಸಮರ್ಥರಾಗುತ್ತಾರೆ, ಸುವ್ಯವಸ್ಥೆ ರಚಿಸಿಕೊಳ್ಳುತ್ತಾರೆ.

## ಚುನಾವಣಾ ಫಲಿತಾಂಶಗಳು

ನಮ್ಮ ಮಾಧ್ಯಮಗಳಿಗೆ ಚುನಾವಣೆಯೆಂದರೆ ಸುಗ್ಗಿ. ಏನೇನೋ ಸಮೀಕ್ಷೆಗಳನ್ನು ನಡೆಸಿ ತಮ್ಮ ವಿಶ್ಲೇಷಣಾ ವಿದ್ವತ್ತನ್ನು ಪ್ರದರ್ಶಿಸಲು ಸುಸಮಯ. ಫಲಿತಾಂಶ ಪ್ರಕಟವಾದಾಗ ತಮ್ಮ ಹಸಿ ಸುಳ್ಳುಗಳ ಸಮೀಕ್ಷೆಯ ಮೂರ್ಖತನ ಎಷ್ಟು ಗಾಢವಾಗಿ ಹೊರಬಂದರೂ ಅವು ಕುಗ್ಗುವುದಿಲ್ಲ, ಸಾಯುವುದಿಲ್ಲ. ಮತ್ತೆ ಮುಂದಿನ ಸಮೀಕ್ಷೆಗಾಗಿ ಕಾತುರದಿಂದ ಕಾಯುತ್ತವೆ. ವಿವಿಧ ಹಂತಗಳಲ್ಲಿ ನಡೆಯುವ ಈ ಸಮೀಕ್ಷೆಗಳು ಎಷ್ಟು ಖಾತರಿಯ ಧ್ವನಿ ಹೊಂದಿರುತ್ತವೆಂದರೆ ಇನ್ನು ಚುನಾವಣೆ ಅನಗತ್ಯ, ಸಮೀಕ್ಷೆಗಳನ್ನಾಧರಿಸಿ ಸರ್ಕಾರಗಳನ್ನು ರಚಿಸಿಬಿಡಬಹುದು, ಎಂಬಷ್ಟು. ನಮ್ಮ ಮಾಧ್ಯಮಗಳ ವಾನರ

*ಮುಂದಿನ ಪುಟಕ್ಕೆ......*

ತಿಂಗಳ ಪತ್ರಿಕೆ
**ಹೊಸತು**
ನೆನ್ನೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

*ಸಮಾಲೋಚಕ ಮಂಡಲಿ*

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಪಾರ್ಥಸಾರಥಿ
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಚಿ. ಶ್ರೀನಿವಾಸರಾಜು
ಸಿದ್ದನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

ಮೇ ತಿಂಗಳ ಹೊಸತು ಸಂಚಿಕೆಯಲ್ಲಿ ತಿಂಗಳ ಕಥೆಯಾದ ಸಾವಿನ ನೆರಳು, ರಾಕ್ಷಸನ ತೋಟ ಚೆನ್ನಾಗಿ ಮೂಡಿ ಬಂದಿವೆ. 'ದಡ್ಡ ಹೆಂಡತಿ ಲೇಸು ?' ಎಂಬ ಪ್ರಬಂಧ ಚೆನ್ನಾಗಿದೆ. ಸೈದ್ಧಾಂತಿಕ, ತತ್ವಶಾಸ್ತ್ರ, ವಿಡಂಬನೆ, ವಿಮರ್ಶೆ ಚೆನ್ನಾಗಿವೆ. ಜಿ. ಕೃಷ್ಣಮೂರ್ತಿಯವರು ಬರೆದ 'ನಂಬಿಕೆಗಳು' ಚೆನ್ನಾಗಿದೆ. ಪ್ರತಿ ತಿಂಗಳು ಇದೇರೀತಿ ಮೂಡಿಬರಲಿ.

*ಹೊಸಪೇಟೆ* — *ಶರಣು ಎಸ್. ದೇಸಾಯಿ, ದೇಜಪ್ಪ ಬಿ., ಸಂಗು ಎಮ್. ತೋಟದ*

*ಶಂಕರಾಚಾರ್ಯರ ಒಗಟುಗಳ ಬಗ್ಗೆ*

ಶ್ರೀ. ಬಿ. ವಿ. ವೀರಭದ್ರಪ್ಪ ಅವರ ಲೇಖನ ತುಂಬ ಚೆನ್ನಾಗಿದೆ. ಶಂಕರ ಮತಾನುಯಾಯಿಗಳಿಗೆ ಶಂಕರರು ಸ್ಥಾಪಿಸಿದ ಮಠಗಳು ಬೇಕೇ ವಿನಃ ಅವರ ತುಂಬಿದ ಕೊಡದಂತಿರುವ ಜ್ಞಾನ ನಿಧಿ ಬೇಡವಾಗಿತ್ತು. ತನಗೆ ನಿಜವಾದ ಅದ್ವೈತವನ್ನು ತಿಳಿಸಿಕೊಟ್ಟ ಚಂಡಾಲನೊಬ್ಬ ನಿಗೆ ವಿನೀತ ಭಾವ ತೋರ್ಪಡಿಸಿದ ಶಂಕರರು ಯತಿ ಶ್ರೇಷ್ಠರಾದರೂ, ಬಂಡಾಯ ಮನೋವೃತ್ತಿ ಇದ್ದರೂ ಸ್ವಾಮಿಗಳನ್ನು ಅಂಕುಶದಲ್ಲಿಡಲು ಧಾರ್ಮಿಕ ವಲಯ ಪ್ರಯತ್ನಿಸಿ ಗೆದ್ದಿತು. ಹಾಗಾಗಿ ಮೂವತ್ತೆರಡಕ್ಕೇ ಸಮಾಧಿಯಾದರೋ ಅಥವಾ ಸಮಾಧಿ ಮಾಡಲ್ಪಟ್ಟರೋ ?

ಚಂಡಾಲನನ್ನು ಗುರುವೆಂದ ಕೂಡಲೇ ಪುರೋಹಿತಶಾಹಿ ವರ್ಗಗಳೂ, ಧಾರ್ಮಿಕ ವಲಯಗಳು ಎಚ್ಚೆತ್ತು ಅವರಿಗೆ ಹಿತಶತ್ರುಗಳಾಗಿ ಅವರನ್ನೂ ನಿಗ್ರಹಿಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಇಂಥ ಅತ್ಯುತ್ತಮ ಲೇಖನವನ್ನು ನಿರ್ಭೀತಿಯಿಂದ ಪ್ರಕಟಿಸಿದ 'ಹೊಸತು'ವಿಗೂ ಲೇಖಕರಿಗೂ ವಂದನೆಗಳು.

*ಬೆಂಗಳೂರು* — *ಮೀನಾಕ್ಷಿ ಅಮ್ಮ*




ಶ್ರೀ ನಗರಗೆರೆ ರಮೇಶ್ ಅವರು 'ಗುರು ಡಾಟ್‌ಕಾಮ್' ಎಂಬ ತಮ್ಮ ಲೇಖನದಲ್ಲಿ (ಹೊಸತು ಸಂಚಿಕೆ-೧೧, ಸಂಪುಟ-೨) 'ಸದ್ಗುರುದರ್ಶನ್' ಸಂಚಾಲಕರಿಗೆ 'ಶಿಕ್ಷಣರತ್ನದ್ವಯ' ಎಂಬ ಪ್ರಶಸ್ತಿ ಬಂದಿರುವುದಾಗಿ ತಿಳಿಸಿದ್ದಾರೆ. ವಾಸ್ತವವಾಗಿ ಅದು 'ಪಾರ್ಟ್‌ಟೈಂ ಶಿಕ್ಷಣ ರತ್ನದ್ವಯ' ಎಂದಿರಬೇಕು. ಪ್ರಶಸ್ತಿ ವಿಜೇತರ ಬಗ್ಗೆ 'ಪಾರ್ಟ್‌ಟೈಂ ಶಿಕ್ಷಣರತ್ನ'ರುಗಳಿಂದ ಆಕ್ಷೇಪಣೆಗಳು ಬಂದಿದ್ದರಿಂದ ಈ ಸ್ಪಷ್ಟನೆ ನೀಡಬೇಕಾಯಿತು.

*ಕಾರ್ಯದರ್ಶಿ*
*ಪ್ರಶಸ್ತಿ ವಿತರಣಾ ಸಮಿತಿ*

ವೈಚಾರಿಕ ವಿಷಯಗಳಿಗೆ ಮೀಸಲಾದ 'ಹೊಸತು' ಪತ್ರಿಕೆ ಕನ್ನಡ ಪ್ರಕಾಶನ ಉದ್ಯಮದಲ್ಲಿ ಒಂದು ಹೊಸ ಜಾಡನ್ನು ಹಿಡಿದಿದೆ. ನಮ್ಮ ಸಮಾಜ ಈಗ ಮೂಢನಂಬಿಕೆ, ಮೂಢಾಚರಣೆಗಳಲ್ಲಿ ಎಷ್ಟು ಮುಳುಗಿಹೋಗಿದೆಯೆಂದರೆ ಅವುಗಳಿಂದ ಹೊರಬರುವ ಸಾಧ್ಯತೆಯೇ ಇಲ್ಲವೇನೋ ಎಂಬ ಶಂಕೆ ಮೂಡುತ್ತದೆ. ವೈಚಾರಿಕ ಲೇಖನಗಳಿಂದ ಈ ಮೌಢ್ಯವನ್ನು ಹೋಗಲಾಡಿಸಲು ಮಾಡಿರುವ ಘನ ಸಾಹಸವೇ 'ಹೊಸತು'. ಮೇ ಸಂಚಿಕೆಯಲ್ಲಿನ ಸಂಪಾದಕೀಯ, ನಾ. ದಿವಾಕರರ ಸಾಹಿತ್ಯ ಸಮ್ಮೇಳನದ ವಿಶ್ಲೇಷಣೆ, ಭೂಮಿಯನ್ನು ಕುರಿತ ತಿಳುವಳಿಕೆಯ ವೈಚಾರಿಕ ಲೇಖನ, ಭಾರತೀಯ ತತ್ವಜ್ಞಾನದ ಮೇಲೆ ಬೆಳಕು ಚೆಲ್ಲಿರುವ ಡಾ|| ಗೌರೀಶ ಕಾಯ್ಕಿಣಿಯವರ ಅನಿಸಿಕೆಗಳು - ಇವು ಮನೋಮಂಡಲವನ್ನು ಮುಸುಕಿರುವ ಅನೇಕ ಅವೈಚಾರಿಕ ಭಾವನೆಗಳನ್ನು ಕಿತ್ತುಹಾಕಲು ಸಹಾಯ ಮಾಡುತ್ತವೆ.

*ಬೆಂಗಳೂರು* — *ಡಾ|| ಟಿ. ಎಸ್. ಸಂಜೀವರಾವ್*

'ಹೊಸತು'ವಿನ ಏಪ್ರಿಲ್, ಮೇ ಸಂಚಿಕೆಗಳು ಸಿಕ್ಕಿವೆ... ಸಂಚಿಕೆ ಈಗ ಚೆನ್ನಾಗಿ ಬರ್‍ತಾ ಇದೆ.

*ಚೊಕ್ಕಾಡಿ* — *ಸುಬ್ರಾಯ ಚೊಕ್ಕಾಡಿ*

ಈ ಸಲದ 'ಹೊಸತು'ವಿನಲ್ಲಿ ತುಂಬ ಲೇಖನಗಳು ಉಪಯುಕ್ತವಾಗಿವೆ. ಚರ್ಚಾರ್ಹವಾಗಿವೆ. ಪತ್ರಿಕೆ ಕರ್ನಾಟಕದ ಬೇರೆಬೇರೆ ಭಾಗದ, ಸಮುದಾಯದ ಲೇಖಕರನ್ನು ಒಳಗೊಳ್ಳುತ್ತಲಿದೆ. ಇದು ಒಳ್ಳೇ ಸಂಗತಿ. ಕಾಯ್ಕಿಣಿ ಸಂದರ್ಶನವೂ ಚೆನ್ನಾಗಿದೆ.

*ಹಂಪಿ* — *ರಹಮತ್ ತರೀಕೆರೆ*

---

*ಹಿಂದಿನ ಪುಟದಿಂದ......*

ಪ್ರಜ್ಞೆಗೆ ಇದು ಇನ್ನೊಂದು ಸಾಕ್ಷಿ. ಅಮೇರಿಕಾದಲ್ಲಿ ಪಟಿಂಗರು ಇದನ್ನು ಮಾಡುತ್ತಿದ್ದಾರೆ. ಆದ್ದರಿಂದ ನಾವೂ ಮಾಡಬೇಕು ಮತ್ತು ಅವರ ಮಾದರಿಯಲ್ಲೇ ಮಾಡಬೇಕೆಂಬ ಶುದ್ಧ ದರಿದ್ರ ಪ್ರಜ್ಞೆಯ ಪರಿಣಾಮ ಇದು. ಮಾಧ್ಯಮಪತಿಗಳು ತಮಗೆ ಬೇಕಾದವರನ್ನು ಮೇಲೆತ್ತಲು ಬಳಸುವ ತಂತ್ರವೂ ಇದಾಗಿರುತ್ತದೆ.

ಯಾವುದೋ ಪಕ್ಷ ಸೋತಿತೆಂದರೆ ಬಹಳ ಸುಲಭವಾಗಿ ಗೊತ್ತಾಗುವ ಅಂಶವೆಂದರೆ ಜನ ಆ ಪಕ್ಷಕ್ಕೆ ಮತ ನೀಡಲಿಲ್ಲವೆಂಬುದು. ಅದಕ್ಕೆ ಸಂಶೋಧನೆ ಬೇರೆ ಕೇಡು ! ಏಕೆ ಮತ ಚಲಾಯಿಸಲಿಲ್ಲವೆಂಬ ಪ್ರಶ್ನೆ ಬಂದಾಗ ನಮ್ಮ ಮಾಧ್ಯಮ ಸಮೀಕ್ಷಾ ಪಟುಗಳು ಮರೆತಾದರೂ ಆಯಾ ಪಕ್ಷಗಳು ಪ್ರತಿಪಾದಿಸುವ ಹಾಗೂ ಅನುಸರಿಸುವ, ಸಾಮಾಜಿಕ-ಆರ್ಥಿಕ, ಸಾಂಸ್ಕೃತಿಕ ಧೋರಣೆಗಳನ್ನು ಚರ್ಚಿಸುವುದಿಲ್ಲ, ಅದೆಲ್ಲಾ ಅವರಿಗೆ ಗೌಣ. ಎಳಸು ಎಳಸಾಗಿ ಸುಮ್ಮನೆ 'ಆ್ಯಂಟಿ ಇನ್ಕಂಬೆನ್ಸಿ' ಎಂದೋ, ವೈಯಕ್ತಿಕ ಪ್ರಭೆ ಎಂದೋ ವ್ಯಾಖ್ಯಾನಿಸುವುದು ಇವರ ಪಾಂಡಿತ್ಯದ ಆಳದ ಸೂಚನೆ. ಮತಕಟ್ಟೆಗಳಿಂದ ಹೊರಬಂದ ಮತದಾರರನ್ನು ಸಂದರ್ಶಿಸಿದ ಮೇಲಂತೂ ಈ ಸಮೀಕ್ಷಕರ ದಿವ್ಯಚಕ್ಷುಸ್ಸಿಗೆ ಸಕಲವೂ ಗೋಚರಿಸಿಬಿಡುತ್ತದೆ. ಅಲ್ಲಲ್ಲಿ ಮೂರೋ ನಾಲ್ಕೋ ಸಾವಿರ ಮತದಾರರನ್ನು ಮಾತನಾಡಿಸಿ ಮಮತಾಗೆ ಇಷ್ಟು ಸೀಟು, ಬುದ್ಧದೇವನಿಗೆ ಇಂತಿಷ್ಟು, ಜಯಮ್ಮನಿಗೆ ಅಷ್ಟು, ಕರುಣಾಜನಕವಾಗಿ ಸೋಲುವ ವಾಜಪೇಯಿ ಬಂಧು ಕರುಣಾನಿಧಿಗೆ ಅಂತಷ್ಟು ಎಂದು ನಿಷ್ಪಕ್ಷವಾಗಿ ಘೋಷಿಸುತ್ತಾರೆ. ರಾಜ್ಯಪಾಲರುಗಳು ಅದರ ಆಧಾರದ ಮೇಲೆ ಸರ್ಕಾರ ರಚಿಸಲು ಕರೆ ಕೊಡದಿರುವುದು ಇವರಿಗೆ ಬೇಸರ ತರಿಸಿರಬೇಕು. ಆ ಸಮೀಕ್ಷೆಯ ಮೇಲೆ ದೂರ್ದರ್ಶನದ ಚಾನಲ್‌ಗಳಲ್ಲಿ ಅಗಾಧ ಚರ್ಚೆಗಳು ಬೇರೆ ! ಒಟ್ಟಿನಲ್ಲಿ, ಶುಷ್ಕ ಪಾಂಡಿತ್ಯದ ಬಾಲಿಶ ವಿಶ್ಲೇಷಣೆಗಳಿಂದ ಸಮಯ, ಹಣ, ಪತ್ರಿಕೆಗಳ ಪುಟಗಳು, ಎಲ್ಲಾ ಪೋಲಾಗುತ್ತಿವೆ. ಜನ ಈ ಸಮೀಕ್ಷಕರ ಮಾರ್ಗದರ್ಶನದಲ್ಲಿ ಮತ ಚಲಾಯಿಸದೆ ದಡ್ಡರಾಗಿ ವರ್ತಿಸುತ್ತಿದ್ದಾರೆಂಬ ಆರೋಪವನ್ನು ಕೆಲವು ಪಕ್ಷಗಳು ಮಾಡಿದರೆ ಏನೂ ಆಶ್ಚರ್ಯವಿಲ್ಲ. ಮಾಧ್ಯಮಾಧಿಪತಿಗಳನ್ನು ಚೆನ್ನಾಗಿ ಕೊಬ್ಬಿಸಿದ್ದು ವ್ಯರ್ಥವಾಯಿತಲ್ಲಾ ಎಂಬ ಕೊರಗು ಅವಕ್ಕೆ. ಅಲ್ಲದೆ, ತಮಗೆ ಮತ ಚಲಾಯಿಸದಿದ್ದವರೆಲ್ಲಾ ರಾಜಕೀಯ ಪ್ರಜ್ಞೆ ಇಲ್ಲದವರು, ಭ್ರಷ್ಟಾಚಾರದ ವಿರೋಧಿಗಳಲ್ಲದವರು, ಇತ್ಯಾದಿ, ಆ ಪಕ್ಷಗಳ ಕಲ್ಪನೆ. ಮತದಾರರನ್ನು ಮುಕ್ತವಾಗಿ ಬಿಟ್ಟು ಈ ಸಮೀಕ್ಷಾ ಪಟುಗಳು ತಮ್ಮ ಹುರುಳಿಲ್ಲದ ಕ್ಷುದ್ರ ನಾಟಕಗಳನ್ನು ನಿಲ್ಲಿಸುವ ದಿನ ಬೇಗ ಬರುವಂತಾಗಲಿ !

ಆಗ 'ಇನ್ಕಂಬೆಂಟ್' ಆಗಿದ್ದ ಬುದ್ಧದೇವನ ಪಕ್ಷ ಗೆದ್ದದ್ದು, ಆತನದೇ ಪಕ್ಷದ ನಾಯನಾರ್ ಸೋತಿದ್ದು, ಎಲ್ಲವನ್ನೂ ಅರ್ಥಮಾಡಿಕೊಳ್ಳಬಹುದು. ಸದ್ಯಕ್ಕೆ ತಾನು ಮುಖ್ಯಮಂತ್ರಿ ಆಗಿಯೇಬಿಟ್ಟೆನೆಂದು ಭಾವಿಸಿದ್ದ ಮಮತಾ ಈ ಸಮೀಕ್ಷಕರನ್ನು ತರಾಟೆಗೆ ತೆಗೆದುಕೊಳ್ಳಲು ಸಿದ್ಧರಿದ್ದಾರೆಯೇ ? ಅದರ ಬದಲು ಜ್ಯೋತಿಬಾಬು ವಿರುದ್ಧ ಮೆರವಣಿಗೆ ತೆಗೆಯುತ್ತಾರೆ ! ಮತದಾರರಿಗೆ ಎಂತಹ ಮನ್ನಣೆ !!

[signature]

# ಇದು ನಮ್ಮ ದೇಶ ! ಇವರು ನಮ್ಮವರು !

''ಹೊಸತು'' ಪತ್ರಿಕೆಯ ಫೆಬ್ರವರಿ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ಹಂಪಿ ಶಿವಾನಂದ ಆಶ್ರಮದ ಸದಾಶಿವಯೋಗಿಗಳ ಪರಿಚಯದೊಂದಿಗೆ ದೇವರು, ಧರ್ಮ, ಧರ್ಮಶಾಸ್ತ್ರ, ಪವಾಡ, ಪೂಜೆ, ಪ್ರಕೃತಿ-ಪುರುಷ ಸಂಬಂಧ, ಕಾಮ ಇತ್ಯಾದಿಗಳ ಕುರಿತು ಅವರ ಅನುಕರಣೀಯ ಹಾಗೂ ಖಚಿತ ವಿಚಾರಗಳನ್ನು ಓದಿ ಅತ್ಯಂತ ಪ್ರಭಾವಿತನಾಗಿದ್ದೇನೆ.

ಇಂದು ಬಹುಮಂದಿ ರಾಜಕೀಯ ಪುಢಾರಿಗಳಿಗೆ ದೇವರು, ಜ್ಯೋತಿಷ್ಯ, ವಾಸ್ತು, ಹಸ್ತ ಸಾಮುದ್ರಿಕ, ಜಾತಕ ಇತ್ಯಾದಿಗಳಲ್ಲಿ ಎಲ್ಲಿಲ್ಲದ ಶ್ರದ್ಧೆ, ನಂಬಿಕೆ, ಭಕ್ತಿ ಉಂಟಾಗಿ ಸಾಮಾನ್ಯ ಜನರೂ ಅವರನ್ನು ಅನುಕರಿಸುತ್ತಾ ಮಿತಿಮೀರಿದ ಧಾರ್ಮಿಕ ಕ್ರಿಯೆಗಳು ನಡೆಯುತ್ತಿರುವುದನ್ನು ಸರ್ವತ್ರ ಕಾಣುತ್ತಿದ್ದೇವೆ. ಸಂಸ್ಕೃತಿಯ ಲೇಪ ಇವುಗಳಿಗೆ ಹಚ್ಚಲ್ಪಡುತ್ತಿದೆ. ಅದೇ ಪ್ರಮಾಣದಲ್ಲಿ ಜ್ಯೋತಿಷಿಗಳ, ಠಕ್ಕು ಸಂನ್ಯಾಸಿಗಳ, ವಾಸ್ತುಶಾಸ್ತ್ರಜ್ಞರ ಹಾಗೂ ಪೂಜಾರಿಗಳ ಸಂಖ್ಯೆಯೂ ಹೆಚ್ಚುತ್ತಿರುವುದನ್ನು ಕಾಣಬಹುದು. ಎಲ್ಲವೂ ''ಗತಾನುಗತಿಕೋ ಲೋಕಃ ನ ಲೋಕಃ ಪಾರಮಾರ್ಥಿಕಃ'' ಎಂಬಂತೆ ನಡೆಯುತ್ತಿದೆ.

ಇದರ ಒಟ್ಟು ಪರಿಣಾಮವೆಂದರೆ ಇಂದು ಬೀದಿ ಬದಿಯಲ್ಲಿ ಮಾತ್ರವಲ್ಲ ರಾಷ್ಟ್ರೀಯ ಹೆದ್ದಾರಿಗಳ ಪಕ್ಕದಲ್ಲೂ ಮಂದಿರಗಳು, ಗುಡಿಗಳು ಎದ್ದುನಿಂತು, ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆ ಅಷ್ಟಿಷ್ಟಲ್ಲ. ದೇವಸ್ಥಾನ ಇದ್ದಮೇಲೆ ಭಕ್ತರು ಮಾತ್ರವಲ್ಲ, ಪಕ್ಕದಲ್ಲೇ ಹಣ್ಣು, ಕಾಯಿ, ಹೂ, ಅಗರಬತ್ತಿ ಇತ್ಯಾದಿ ಮಾರುವವರ, ಭಿಕ್ಷೆ ಬೇಡುವವರ ದೊಡ್ಡ ಸಂಖ್ಯೆಯೂ ಇದ್ದೇ ಇರುತ್ತದೆ.

ಇನ್ನು ಹುಟ್ಟಿದ ಮಕ್ಕಳಲ್ಲಿ ಶೇ. ೫೦ರಷ್ಟು ಮಕ್ಕಳು ಪೌಷ್ಟಿಕ ಆಹಾರವಿಲ್ಲದೆ ಪ್ರತಿವರ್ಷ ಸಾಯುತ್ತಿರುವ ಈ ದೇಶದಲ್ಲಿ ದೇವರ ಹೆಸರಿನಲ್ಲಿ ಸಾವಿರಾರು ಟನ್ ತುಪ್ಪ, ಜೇನು, ಹಾಲು, ಎಳನೀರು, ಗಂಧ, ವಜ್ರ, ಬಟ್ಟೆ, ಚಿನ್ನ, ಬೆಳ್ಳಿ, ನೋಟುಗಳ ಕಟ್ಟು ಇತ್ಯಾದಿಯನ್ನು ನಾವು ಹೋಮಕ್ಕೋ ಪೂಜೆಗೋ ಅರ್ಪಿಸುತ್ತಲೇ ಇರುತ್ತೇವೆ. ಹವಿರ್ಭಾಗಕ್ಕೆಂದು ಅನ್ನ, ಹಣ್ಣು, ತೆಂಗಿನಕಾಯಿ ಎಲ್ಲವೂ ದೊಡ್ಡ ಪ್ರಮಾಣದಲ್ಲಿ ಸಲ್ಲುತ್ತದೆ.

ಬಡವ ಊಟಕ್ಕೆ ಗತಿ ಇಲ್ಲದಿದ್ದರೂ ಮಂತ್ರವಾದಿಗೆ, ಪೂಜಾರಿಗೆ ದಕ್ಷಿಣೆ ಕೊಡಲು, ತೀರ್ಥಕ್ಷೇತ್ರಕ್ಕೆ ಹೋಗಲು ದೇವರಿಗೆ ಕಾಣಿಕೆ ಹಾಕಲು ಹಿಂದೆ ಮುಂದೆ ನೋಡುವುದಿಲ್ಲ. ಕೆಲವರು ಸಾಲ ಮಾಡಿಯಾದರೂ ಪ್ರತಿ ತಿಂಗಳು ದೂರದ ಊರಿನಲ್ಲಿರುವ ತನ್ನ ಇಷ್ಟ ದೇವತೆಯ ದರ್ಶನಕ್ಕೆ ಹೋಗುತ್ತಾರೆ. ಹೋಗದಿದ್ದರೆ ಏನೋ ಗಂಡಾಂತರ ಬರುತ್ತದೆ ಎಂಬ ಭಯ ಅವರಿಗೆ.

ನವರಾತ್ರಿ ಬಂತೆಂದರೆ ಶಕ್ತಿ ದೇವತೆಯ ಹೆಸರಿನಲ್ಲಿ ಅತ್ಯಂತ ಪೌಷ್ಟಿಕ ಆಹಾರವಾದ ಔಷಧೀಯ ಗುಣವುಳ್ಳ ಬೂದುಕುಂಬಳಕಾಯಿಗಳನ್ನು ಲೆಕ್ಕವಿಲ್ಲದಷ್ಟು ಮಣ್ಣು ಪಾಲು ಮಾಡುತ್ತಾರೆ. ಅದಕ್ಕೆ ರಕ್ತದ ಲೇಪವೂ ಆಗಾಗ್ಗೆ ಉಂಟು.

ಇತ್ತೀಚೆಗೆ ಅತ್ಯಂತ ಪ್ರಬುದ್ಧವಾದ ದೇವಸ್ಥಾನವೊಂದರಲ್ಲಿ ಭಿನ್ನ 'ಗ್ರೂಪಿ'ಗೆ ಸೇರಿದ ಅರ್ಚಕರಿಬ್ಬರು ಪ್ರಸಾದ ವಿತರಣೆಯಿಂದ, ಕಾಣಿಕೆಯಿಂದ ಲಭ್ಯವಾಗುವ ಹಣದ ಕುರಿತು ಹೊಡೆದಾಡಿಕೊಂಡು ಆಸ್ಪತ್ರೆ ಸೇರಿದ ಘಟನೆ ಪತ್ರಿಕೆಗಳಲ್ಲಿ ಭಾವಚಿತ್ರ ಸಹಿತ ಪ್ರಕಟವಾಯಿತು. ಈ ದೇವಸ್ಥಾನದ ಅರ್ಚಕರನ್ನು ಕೆಲವರು ದೇವರೆಂದೇ ನಂಬಿ ಪೂಜಿಸುತ್ತಾರೆ. ಧಾರ್ಮಿಕ ಮಾತ್ರವಲ್ಲ, ಲೌಕಿಕ ಸಭೆ ಸಮಾರಂಭಗಳಿಗೂ ಅವರನ್ನು ಬರಮಾಡಿ ಅವರ ಅನುಗ್ರಹ ಪಡೆಯಲೇಬೇಕು. ಇಂತಹ ಹೇಯ ಕೃತ್ಯಗಳಿಂದ ಅವರ ನಿಜ ಬಣ್ಣ ಬಯಲಾದರೂ ಅವರ ಕುರಿತು ನಮ್ಮಲ್ಲಿ ಭಯಭಕ್ತಿಯೇನೂ ಕಡಿಮೆಯಾಗುವುದಿಲ್ಲ.

ಊರಿಗೆ ಹೋದಾಗ ಮೊನ್ನೆ ಮೊನ್ನೆ ಒಂದು ದೇವಸ್ಥಾನದ ಬಳಿ ಕರಪತ್ರವನ್ನು ನೋಡಿ ಅವಾಕ್ಕಾದೆ. ಊರ ಜನರ ಸುಖ ಶಾಂತಿಗಾಗಿ, ಊರ ಜನರ ಸಹಕಾರದಿಂದ ಹತ್ತು ಲಕ್ಷ ರೂ. ವೆಚ್ಚದಲ್ಲಿ ದೊಡ್ಡದೊಂದು ನಾಗಪೂಜೆ ನಡೆಯಲಿದೆಯಂತೆ. ಅಷ್ಟಮಂಗಲ ಪ್ರಶ್ನೆ ಕೇಳಿದಾಗ ಊರ ದೇವಸ್ಥಾನದ ಬಳಿ ನೂರಾರು ವರ್ಷಗಳ ಹಿಂದೆ ಇದ್ದ ನಾಗಬನವೊಂದು ನಾಶವಾಗಿ ಹೋಗಿರುವುದರಿಂದ ಊರಿಗೆ ಅನಿಷ್ಟ ಕಾದಿದೆಯಂತೆ. ಅದಕ್ಕಾಗಿ ಈ ನಾಗಪ್ರತಿಷ್ಠೆ, ಪೂಜೆ ಇತ್ಯಾದಿ. ಇದಾದ ಮೇಲೆ ಇನ್ನೇನು ಕಾದಿರುತ್ತದೋ !

ದೇವರನ್ನು ನಂಬೋಣ. ಧಾರ್ಮಿಕ ವಿಧಿ ವಿಧಾನಗಳನ್ನೂ ನಡೆಸೋಣ. ಆದರೆ ಇವುಗಳು ಕೇವಲ ವೈಯಕ್ತಿಕವಾಗಿದ್ದು ಅವುಗಳಿಗಾಗಿ ದುಂದುವೆಚ್ಚ, ವಸ್ತುಗಳ, ಪ್ರಾಣಿಗಳ ಬಲಿದಾನ, ಸರ್ವಥಾ ಕೂಡದು. ಬದಲು, ಅಜ್ಞಾನದಿಂದ, ಬಡತನದಿಂದ ಊಟವಿಲ್ಲದೆ ಸಾಯುತ್ತಿರುವ, ಇರಲು ಸೂರಿಲ್ಲದ ಬೀದಿ ಬದಿಯಲ್ಲೋ, ಅಂಗಡಿಗಳ ಜಗಲಿಯಲ್ಲೋ ರಾತ್ರಿ ಮಲಗಿ ಬೆಳಿಗ್ಗೆದ್ದು ಹೋಗುವ ದೀನ ಜನರ ಹೊಟ್ಟೆಗೆ ಹಿಡಿ ಅನ್ನ ಸೇರಲು ಖರ್ಚು ಮಾಡೋಣ. ಅದಕ್ಕಿಂತಲೂ ದೊಡ್ಡ ದೇವರ ಪೂಜೆ ಎಲ್ಲಿದೆ ?

ಇಂದು ನಮ್ಮ ದೇಶದಲ್ಲಿ ಉತ್ಸವಗಳ ಹೆಸರಿನಲ್ಲಿ, ಸಮ್ಮಾನ ಸಮಾರಂಭಗಳ ಉತ್ಸಾಹದಲ್ಲಿ ಖರ್ಚಾಗುತ್ತಿರುವ ಹಣದಿಂದ ಕೋಟಿ ಜನರಿಗೆ ಆಶ್ರಯವನ್ನು ಒದಗಿಸಿ ಕೊಡಬಹುದು.

ಅಧಿಕಾರದಲ್ಲಿ ಉನ್ನತ ಸ್ಥಾನದಲ್ಲಿರುವವರೇ ಇವುಗಳ ಮೂಲದಲ್ಲಿರುವುದರಿಂದ ತಡೆಯುವ ಬಗೆ ಎಂತು ? ಯಾರು, ಯಾರಿಗೆ ಹೇಳಬೇಕು ?

ಅಂಧಶ್ರದ್ಧೆ ಇಂದು ಜನಸಾಮಾನ್ಯರ ಜೀವನದಲ್ಲಿ ಎಷ್ಟು ಪ್ರಭಾವ ಬೀರುತ್ತಿದೆ ಅಂದರೆ, ಇಷ್ಟಾರ್ಥ ಸಿದ್ಧಿಗಾಗಿ ಪ್ರಾಣಿಬಲಿ ಮಾತ್ರವಲ್ಲ, ನರಬಲಿ, ಮುಖ್ಯವಾಗಿ ಮಕ್ಕಳ ಬಲಿ ಕೂಡಾ ಇಂದು ನಡೆಯುತ್ತಿದೆ.

ಕೆಲವು ತಿಂಗಳ ಹಿಂದೆ ನಾನೊಂದು ಭಯಂಕರ ದೃಶ್ಯ ಕಂಡು ದಂಗಾದೆ. ಮನೆಯಿಂದ ಸ್ವಲ್ಪ ದೂರದಲ್ಲಿ ಒಂದು ಅರಳಿ ಮರ. ಬುಡದಲ್ಲಿ ಮಾರಿಯಮ್ಮನ ಒಂದು ಚಿಕ್ಕ ಗುಡಿ. ಅಂದು ಶುಕ್ರವಾರ. ರಾತ್ರಿ ನಾಲ್ವರು ಕುರಿಯೊಂದನ್ನು ಎಳೆದು ತಂದು, ಕೈಕಾಲು ಕಟ್ಟಿ, ತಲೆ ಕೆಳಗೆ ಮಾಡಿ ಮರಕ್ಕೆ ತೂಗ ಹಾಕಿದರು. ಮುಖಕ್ಕೆ ಕುಂಕುಮ ತಾಗಿಸಿದರು. ಹೂಹಾರ ಹಾಕಿದರು. ಎರಡು ಕಿವಿಗಳಲ್ಲಿ ಅಗರಬತ್ತಿ ಉರಿಸಿ ಇಟ್ಟರು. ಆರತಿ ಎತ್ತಿದರು. ಸುತ್ತು ಬಂದು ತೆಂಗಿನಕಾಯಿ ಒಡೆದು ಹೊರಟುಹೋದರು. ಇಷ್ಟೆಲ್ಲಾ ಯಾಕೆ ಮಾಡಿದರು ? ಆಮೇಲೆ ಗೊತ್ತಾಯಿತು, ಮನೆಯಲ್ಲಿ ಹೆಂಗಸೊಬ್ಬಳ ಮೈಯಲ್ಲಿ ಏರಿ ಬಂದ ಪಿಶಾಚಿಯನ್ನು ತೃಪ್ತಿಪಡಿಸಿ, ಓಡಿಸುವುದಕ್ಕಾಗಿ ಎಂದು. ಪಿಶಾಚಿ ಓಡಿಹೋಯಿತೋ ಇಲ್ಲವೋ ! ನಿರಪರಾಧಿ ಕುರಿಯ ಪ್ರಾಣವಂತೂ ಓಡಿಹೋದುದು ನಿಜ !

ಇದು ನಮ್ಮ ದೇಶ. ಇವರು ನಮ್ಮ ಜನರು. ಇವರದ್ದೇನೂ ತಪ್ಪಿಲ್ಲ. ಇವರನ್ನು ಇಷ್ಟರ ವರೆಗೆ ಅಂಧಕಾರದಲ್ಲಿ ಬಡತನದಲ್ಲಿಟ್ಟ ನಮ್ಮ ನೇತಾರರದ್ದೇ ತಪ್ಪು. ಈ ನೇತಾರರಿಂದ ಮುಂದೆ ಅವರ ಏಳಿಗೆ ಆದೀತೆಂಬ ಆಸೆ ಯಾರಿಗೂ ಬೇಡ. ಆಗುವುದಾದರೆ ಯೋಗಿ ಸದಾಶಿವರಂತಹ ಪ್ರಗತಿಪರ ವಿಚಾರವುಳ್ಳ, ನಿಜಾರ್ಥದಲ್ಲಿ ಮಾನವ ಹಿತಸಾಧನೆಯೇ ಜೀವನದ ಏಕಮಾತ್ರ ಧ್ಯೇಯವುಳ್ಳ ಹತ್ತು ಮಂದಿ ವಿಚಾರವಾದಿ ಮಹಾನುಭಾವರಿಂದ ಮಾತ್ರ ಆದೀತು. ಆದರೆ ಕಾಗೆಗಳ ಕಿರುಚಾಟದಲ್ಲಿ ಕೋಗಿಲೆಯ 'ಕುಹೂ' ಯಾರಿಗೆ ಕೇಳಿಸೀತು ?

ಜನರಿಂದು ಅನ್ಯಾಯವನ್ನು, ಅತ್ಯಾಚಾರವನ್ನು, ಜನವಿರೋಧಿ ನೀತಿಯನ್ನು ವಿರೋಧಿಸುವ ಶಕ್ತಿಯನ್ನೇ ಕಳೆದುಕೊಳ್ಳುತ್ತಿದ್ದಾರೆ. ವಿಚಾರವಂತರಿಗೆ ಎಲ್ಲೂ ಸ್ಥಾನವೇ ಇಲ್ಲದಾಗುತ್ತಿದೆ. ಸದಾಶಿವಯೋಗಿಗಳು ಹೇಳುವಂತೆ, ತಂದೆ ಶ್ರಾದ್ಧಕ್ಕೆ ಕಿರುಕುಳ ಕೊಡುತ್ತಿದ್ದ ಬೆಕ್ಕನ್ನು ಕಟ್ಟಿ ಹಾಕಿ ಶ್ರಾದ್ಧ ಮಾಡುತ್ತಿರುವುದನ್ನು ಕಂಡು ಮಗ ತನ್ನ ತಂದೆ ಸತ್ತ ಮೇಲೆ ಅವನ ಶ್ರಾದ್ಧವನ್ನು ಮಾಡುವಾಗ ಮನೆಯಲ್ಲಿ ಬೆಕ್ಕಿಲ್ಲದಿದ್ದರೂ ಹೊರಗಿನಿಂದ ತಂದು ಕಟ್ಟಿಹಾಕಿ ಶ್ರಾದ್ಧ ಮಾಡುತ್ತಿದ್ದನಂತೆ ನಾವು ಯಾವುದನ್ನೂ ಪರಾಂಬರಿಸದೆ, ಗುಣಾವಗುಣಗಳನ್ನು ಕಂಡುಕೊಳ್ಳದೆ ಹಿಂದೆ ಮುಂದೆ ನೋಡದೆ ಒಬ್ಬನು ಮಾಡಿದನೆಂದು ಇನ್ನೊಬ್ಬನು ಹೇಳಿದನೆಂದು ಮಾಡುತ್ತಿರುವುದೇ ಎಲ್ಲಾ ತೊಂದರೆಗಳಿಗೆ, ಕಷ್ಟಗಳಿಗೆ ಮೂಲ ಕಾರಣ. ಇದು ತೊಲಗಿ ಹೋಗುವುದು ಎಂದು ?

ಎಂ. ವಿ. ಭಟ್
''ಶ್ರೀ ಮಿತ್ತೂರು'', ಮೇದರ ಹಳ್ಳಿ
ಚಿಕ್ಕ ಬಾಣಾವರ, ಬೆಂಗಳೂರು - ೯೦

# ಮೇ ದಿನದ ಚಿಂತನೆಗಳು

*ಸಾರ್ವಜನಿಕ ರಂಗದ ಉದ್ದಿಮೆಗಳು ಇಂದು ತಮ್ಮ ಸ್ಥಾನ ಕಳೆದುಕೊಂಡು ಬೇಕಾಬಿಟ್ಟೆಯಾಗಿ ಹಸ್ತಾಂತರವಾಗುತ್ತಿವೆ. ಇಂತಹ ಆರ್ಥಿಕ ನೀತಿಯ ಹಿನ್ನೆಲೆಯಲ್ಲಿ ಕಾರ್ಮಿಕ ವರ್ಗದ ಪಾತ್ರದ ಬಗ್ಗೆ ಭಿನ್ನ ಭಿನ್ನ ಅಭಿಪ್ರಾಯಗಳು ವ್ಯಕ್ತವಾಗುತ್ತಿವೆ. ಮೇ ದಿನದ ಸಂದರ್ಭದಲ್ಲಿ ಈ ಬಗ್ಗೆ ವ್ಯಾಪಕ ಚರ್ಚೆ ನಡೆಯಬೇಕೆಂಬ ಆಶಯದಿಂದ ಮೇ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ಲೇಖನದ ಮುಂದುವರಿದ ಭಾಗ ಇದು.*

**ಪಾರ್ಥಸಾರಥಿ**

ಸ್ವಾತಂತ್ರ್ಯಾನಂತರದ ಕೆಲವು ಬೆಳವಣಿಗೆಗಳಿಂದಾಗಿ ಕಾರ್ಮಿಕರ ಹೋರಾಟ ಮನೋಭಾವ ಮೂಲತಃ ತಗ್ಗಿಹೋದದ್ದನ್ನು ಗಮನಿಸಬಹುದು. ಸ್ವಾತಂತ್ರ್ಯಪೂರ್ವದಿಂದಲೂ, ತಾವೇ ಸಮರ್ಥಿಸಿದ್ದ, ಆಧುನಿಕ ಪ್ರಜಾಪ್ರಭುತ್ವವೆನಿಸಿಕೊಳ್ಳಲು ಅಗತ್ಯವಾದ, ಕೆಲವು ಕಾರ್ಮಿಕಪರ ಕಾನೂನುಗಳನ್ನು ಬೂರ್ಷ್ವಾ ಸರ್ಕಾರವೇ ರಚಿಸಿದ್ದರಿಂದ, ಇದಕ್ಕಾಗಿ ಕಾರ್ಮಿಕರು ಅಂಥ ಮಹತ್ವದ ಹೋರಾಟವನ್ನೇನೂ ನಡೆಸಬೇಕಾಗಲಿಲ್ಲ. ಕಾರ್ಮಿಕ ಸಂಘ ಕಟ್ಟುವ ಹಕ್ಕು, ಚಳುವಳಿ ಹೂಡುವ ಹಕ್ಕು, ಎಂಟುಗಂಟೆ ಕೆಲಸದ ನಿಗದಿ, ಮಹಿಳಾ-ಪುರುಷ ಕಾರ್ಮಿಕ ತಾರತಮ್ಯ ನಿವಾರಣೆ ಮುಂತಾದುವು ಈ ಗುಂಪಿಗೆ ಸೇರುವಂಥವು. ಆದರೆ ಆರ್ಥಿಕ ಮುಗ್ಗಟ್ಟು, ಬೆಲೆ ಏರಿಕೆ, ಅದಕ್ಕೆ ತುಟ್ಟಿಭತ್ಯ ಪರಿಹಾರದ ವಿಷಯ ಬಂದಾಗ, ಎಲ್ಲ ಕಾರ್ಮಿಕ ಸಂಘಗಳು ಒಟ್ಟು ಸೇರಿ ಹೋರಾಡಬೇಕಾಯಿತು. ಆಳುವ ವರ್ಗ ಮತ್ತು ಕಾರ್ಮಿಕರ ನಡುವಿನ ಅಸಾಂಗತ್ಯವನ್ನು, ಸಂಘದ ಐಕ್ಯತೆಯನ್ನು ಒಡೆದು ನಿಭಾಯಿಸಲಾಗಲಿಲ್ಲ. ಅಂಥ ಸಂದರ್ಭಗಳಲ್ಲಿ ಕಾರ್ಮಿಕ ಸಂಘಗಳು ಮುಷ್ಕರಕ್ಕಾಗಿ ತಮ್ಮ ಮಧ್ಯೆ ತಾತ್ಕಾಲಿಕ ಒಕ್ಕೂಟ ರಚಿಸಿಕೊಂಡು, ಆಳುವ ಪಕ್ಷದ ಪರವಾದ ಕಾರ್ಮಿಕ ಸಂಘವನ್ನೇ ಮುಂದಿಟ್ಟುಕೊಂಡು ಹೋರಾಡುವ ಪರಿಪಾಠ ಬಳಕೆಗೆ ಬಂತು. ಅಂದರೆ, ಆರ್ಥಿಕ ಬೇಡಿಕೆಗಳನ್ನು ಸಾಧಿಸುವಲ್ಲಿ ಕಾರ್ಮಿಕ ಸಂಘಗಳು ಅನೌಪಚಾರಿಕ ಐಕಮತ್ಯವನ್ನು ಉಳಿಸಿಕೊಂಡೇ ಬಂದಿವೆ ಎಂದು ಹೇಳಬಹುದು.

ಆಳುವ ವರ್ಗದ ಇಬ್ಬಂದಿ ಧೋರಣೆಯ ಮೇಲೆ ಬೆಳಕು ಚೆಲ್ಲುವ ಎರಡು ಸಂದರ್ಭಗಳನ್ನು ಇಲ್ಲಿ ಸ್ಮರಿಸಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಅಂಚೆ ತಂತಿ ನೌಕರರು ಹತ್ತಾರು ಬಿಡಿ ಬಿಡಿ ಸಂಘಗಳಲ್ಲಿ ಹಂಚಿಹೋಗಿದ್ದರು. ೧೯೫೪ರ ವೇಳೆಗೆ ಅನೇಕ ನಾಯಕರ ಪರಿಶ್ರಮದಿಂದ ಒಂದು ರಾಷ್ಟ್ರೀಯ ಫೆಡರೇಶನ್ ರಚಿಸಿಕೊಳ್ಳುವುದು ಸಾಧ್ಯವಾಯಿತು. ಇದನ್ನು ನೆಹರೂರವರು ಸಕ್ರಿಯವಾಗಿ ಮೆಚ್ಚಿ ಆಶೀರ್ವದಿಸಿದ್ದರು. ಆದರೆ ಈ ಫೆಡರೇಶನ್ ತುಟ್ಟಿಭತ್ಯಕ್ಕಾಗಿ, ವೇತನ ಪರಿಷ್ಕರಣೆಗಾಗಿ ಸಂಪು ಹೂಡಲು ನಿರ್ಧರಿಸಿತು. ಈ ಫೆಡರೇಶನ್ನು ಯಾವ ಪಕ್ಷಕ್ಕೂ ಸೇರದ, ಎಲ್ಲಾ ಐಡಿಯಾಲಜಿಗಳ ಸಂಗಮವಾಗಿತ್ತು. ಅವರ ನಾಯಕರ ದೂರದೃಷ್ಟಿಯ ದ್ಯೋತಕವಾಗಿ ಸಂಘದ ಬೇಡಿಕೆಗಳಲ್ಲಿ ಬ್ಯಾಂಕುಗಳ, ಇನ್‌ಷ್ಯೂರೆನ್ಸ್ ವಲಯದ ರಾಷ್ಟ್ರೀಕರಣಗಳಂಥ ವಿಷಯವನ್ನು ಸೇರಿಸಿಕೊಂಡಿದ್ದರು. ಪ್ರಪ್ರಥಮವಾಗಿ ಸ್ವತಂತ್ರ ಭಾರತದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಕಾರ್ಮಿಕ ಸಂಘವೊಂದು ಸರ್ಕಾರಕ್ಕೆ ಸವಾಲೆಸೆದಾಗ ಸಮಾಜವಾದಿ ನೆಹರೂರವರ ಸಹನೆ ಕಟ್ಟೆ ಒಡೆಯಿತು. ಅಖಿಲ ಭಾರತ ಆಕಾಶವಾಣಿಯಲ್ಲಿ ಕಾರ್ಮಿಕರ ವಿರುದ್ಧ ಛೀಮಾರಿ ಹಾಕಿ, ಅವರ ನ್ಯಾಯಯುತ ಕಾರ್ಮಿಕ ಚಳುವಳಿಯನ್ನು 'ನಾಗರಿಕರ ದಂಗೆ' ಎಂದು ವರ್ಣಿಸಿದ್ದನ್ನು ಮರೆಯಲಾಗದು. ೧೯೬೦ರ ಐದು ದಿನಗಳ ಅಂಚೆ ನೌಕರರ ಅಖಿಲ ಭಾರತ ಮುಷ್ಕರವನ್ನು ದಯೆಯಿಲ್ಲದೆ ಸದೆಬಡಿದದ್ದನ್ನು ನೆನಪಿಸಿಕೊಳ್ಳಬೇಕು. ಅಲ್ಲಿಂದ ಮುಂದೆ ಕಾರ್ಮಿಕ ಮುಷ್ಕರಗಳು ತಮ್ಮ ಹೋರಾಟದ ಹರಿತ ಕಳೆದುಕೊಂಡವು. ಪುನಃ ೧೯೬೯-೭೪ರ ಕಾಲದಲ್ಲಿ ಇಂದಿರಾ ಗಾಂಧಿ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳಲು, ಕಾರ್ಮಿಕರನ್ನು, ದಲಿತ ವರ್ಗವನ್ನು, ರೈತಾಪಿವರ್ಗವನ್ನು, ಪಟ್ಟಣದ ಉದ್ಯೋಗಪತಿಗಳ ವಿರುದ್ಧ ಬಳಸಿಕೊಂಡರು. ಬ್ಯಾಂಕುಗಳ ರಾಷ್ಟ್ರೀಕರಣ, ರಾಜಧನ ರದ್ಧತಿ, ಇಪ್ಪತ್ತು ಅಂಶಗಳ ಕಾರ್ಯಕ್ರಮದ ವೈಖರಿ, ಕಾರ್ಮಿಕರನ್ನು ಮತ್ತಿತರರನ್ನು ಮರುಳುಗೊಳಿಸಿತು. ಇದೇ ಇಂದಿರಾ ಗಾಂಧಿ, ಕೇರಳದ, ವಿಶ್ವದ, ಪ್ರಪ್ರಥಮ ಚುನಾಯಿತ ಕಮ್ಯುನಿಸ್ಟ್ ಸರ್ಕಾರವನ್ನು ಅನೈತಿಕ ಅಸಾಧುವಾದ ಚಳುವಳಿಗಳ ಮೂಲಕ ಉರುಳಿಸಿದ್ದನ್ನು ಮರೆತ ಕಾರ್ಮಿಕರು, ಅವರ ಸೋಷಿಯಲಿಸಂ ಕರೆಯನ್ನು ಖರೆ ಎಂದು ನಂಬಿದರು. ಅದೇ ಇಂದಿರಾ ಗಾಂಧಿ, ೧೯೭೪ರಲ್ಲಿ ಸರ್ಕಾರಿ ಉದ್ಯಮಗಳ ಕಾರ್ಮಿಕ ಸಂಘಗಳ ಒಕ್ಕೂಟ ಆರ್ಥಿಕ ಬೇಡಿಕೆಗಳಿಗಾಗಿ ಪ್ರಚಂಡ ಹೋರಾಟ ನಡೆಸಿದಾಗ, ಮತ್ತೆ ನಿರ್ದಯವಾಗಿ ಸದೆಬಡಿದದ್ದನ್ನು ಜ್ಞಾಪಿಸಿಕೊಳ್ಳಬೇಕು. ಬೆಂಗಳೂರಿನಲ್ಲಿ ಕಾ. ಎಂ. ಎಸ್. ಕೃಷ್ಣನ್‌ರವರ ನೇತೃತ್ವದಲ್ಲಿ ೭೫ ದಿನಗಳ ಕಾಲ ನಡೆದ ಆ ಹೋರಾಟ ಸರ್ಕಾರದ ದಬ್ಬಾಳಿಕೆಯ ವಿರುದ್ಧ ವಿಫಲವಾಯಿತು. ಕಾರ್ಮಿಕ ವರ್ಗ ಆಳುವ ವರ್ಗದೊಡನೆ ಬಯಸುವ ಸ್ನೇಹ ಬರೇ ಭ್ರಮೆಯೆಂಬ ಅರಿವಾಯಿತು. ಆಳುವ ವರ್ಗ ಕಾರ್ಮಿಕರನ್ನು, ದಲಿತರನ್ನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುತ್ತದೆ. ತನ್ನ ಹಿತಕ್ಕೆ ಧಕ್ಕೆಯುಂಟಾದಾಗ, ಸ್ವಲ್ಪವೂ ಸಂಕೋಚವಿಲ್ಲದೆ, ಅದೇ ಕಾರ್ಮಿಕರನ್ನು ಸದೆಬಡಿಯುತ್ತದೆ. ಈ ಅನುಭವ ಪುನಃ ಪುನಃ ಆದಾಗ ಕಾರ್ಮಿಕ ವರ್ಗ ಮತ್ತಷ್ಟು ಕುಪಿತಗೊಂಡು ಹೋರಾಟದ ತೀವ್ರತೆಯನ್ನು ಹೆಚ್ಚಿಸಿಕೊಳ್ಳಬಹುದಾಗಿತ್ತು. ಹಾಗಾಗದೆ ಕಾರ್ಮಿಕ ಚಳುವಳಿ ಸ್ವಾತಂತ್ರ್ಯಪೂರ್ವದ ತನ್ನ ಹೋರಾಟ ಸಾಮರ್ಥ್ಯವನ್ನು ಮತ್ತೆ ಪಡೆಯದೇ ಹೋದುದಕ್ಕೆ ಅವರಲ್ಲಿ ಒಡಕು ಉಂಟಾಗಿ ಅನೇಕ ಸಂಘಗಳು ಉಂಟಾದುದಲ್ಲದೆ ಬೇರೆ ಕಾರಣಗಳು ಇದ್ದುವು.

ಮಗು ಅಳುವ ಮೊದಲೇ ಕಾಲಕಾಲಕ್ಕೆ ಹಾಲನ್ನಿತ್ತುಬಿಟ್ಟರೆ ಅದು ಚುರುಕಾಗದೆ ಮೊದ್ದಾಗುತ್ತದೆಂಬ ಮಾತುಂಟು. ಸರ್ಕಾರಿ ಉದ್ದಿಮೆಗಳು ಮಾದರಿ ಉದ್ದಿಮೆಗಳಾಗಬೇಕೆಂಬ ಹುರುಪಿನಲ್ಲಿ ನೆಹರು ಸಮಾಜವಾದ ಕಾರ್ಮಿಕರ ಪ್ರಯತ್ನವಿಲ್ಲದೆಯೇ, ಉದ್ಯಮ ಆರಂಭವಾದ ಮೊದಲ ಹಂತದಲ್ಲೇ, ಅವರಿಗೆ ಅತ್ಯಪೂರ್ವವಾದ ಅನುಕೂಲಗಳನ್ನು ಕಲ್ಪಿಸಿಕೊಟ್ಟಿತ್ತು. ಬೆಂಗಳೂರಿನ ಐಟಿಐ, ಬಿಇಎಲ್, ಹೆಚ್‌ಎಂಟಿಯ ಕಾರ್ಮಿಕ ವಸತಿ ಸಂಕೀರ್ಣ, ಅಲ್ಲಿಯ ಜೀವನಾನುಕೂಲಗಳನ್ನು ರಷ್ಯದಂಥ ದೇಶದಲ್ಲೂ, ಹತ್ತಾರು ವರ್ಷಗಳ ನಂತರ, ಉತ್ಪಾದನೆ ಬೆಳೆದಂತೆಲ್ಲಾ ಕಲ್ಪಿಸಿಕೊಡಲಾಯಿತು. ಈ ಕಾರ್ಮಿಕರು ತುಟ್ಟಿಭತ್ಯಕ್ಕಾಗಿ ಮುಷ್ಕರ ಹೂಡಿದಾಗ ಅವರು ಕೃತಘ್ನರಂತೆ ಕಂಡುಬಂದರೆ ಆಶ್ಚರ್ಯವಿಲ್ಲ. ಸಮರ್ಥ, ಗುಣಪೂರ್ಣ ಉತ್ಪಾದನೆಯನ್ನು ಸಾಧಿಸುವುದು ಅವರ ಜವಾಬ್ದಾರಿಯೇ ಅಲ್ಲವೆಂಬ ರೀತಿ ಈ ಕಾರ್ಮಿಕರು ವರ್ತಿಸಿದ್ದುಂಟು. ತಮಗಿಂತ ಕೆಳಮಟ್ಟದಲ್ಲಿದ್ದ ಹೊರಗಿನ ಸಂಘಟಿತ ಅಸಂಘಟಿತ ಕಾರ್ಮಿಕರ ಬಗೆಗೆ ಇವರಿಗೆ ಸ್ವಲ್ಪವೂ ಕಳಕಳಿಯೇ ಇಲ್ಲವಾಯಿತು. ನೀವು ಹೀಗೆ ನಡೆದುಕೊಂಡರೆ ನಿಮ್ಮ ಕಾರ್ಖಾನೆ ಮುಚ್ಚಿಹೋದೀತು, ಎಂದರೆ, ಈ ಸಂತೃಪ್ತ, ಮಧ್ಯಮ ವರ್ಗದ ಕಾರ್ಮಿಕ, ನನ್ನ ಮಗ ಇಲ್ಲಿಗೆ ಕೆಲಸಕ್ಕೆ ಬರುವುದಿಲ್ಲ ಎಂದು ಉಡಾಫೆಯಿಂದ ಮಾತನಾಡಿದ್ದನ್ನು ಬಲ್ಲೆ. ೧೯೭೪ರ ನಂತರದ ವರ್ಷಗಳಲ್ಲಿ, ಹಲವಾರು ಉದ್ಯಮಗಳಲ್ಲಿ, ಬಹುಕಾಲೀನ ಕ್ಲುಪ್ತಕಾಲಿಕ ವೇತನ ತುಟ್ಟಿ ಭತ್ಯ ಸಂಬಂಧ ಮಾಲಿಕ-ಕಾರ್ಮಿಕ ನಾಯಕರ ನಡುವೆ ಒಪ್ಪಂದ ಮಾಡಿಕೊಳ್ಳುವ ಪರಿಪಾಠ ಬಂತು. ಸರ್ಕಾರಿ ನೌಕರರಿಗೆ ಕ್ಲುಪ್ತಕಾಲಿಕ ವೇತನ ಪರಿಷ್ಕರಣ ಸಮಿತಿಗಳು, ಬೆಲೆ ಸೂಚ್ಯಾಂಕಕ್ಕೆ ಅಂಟಿಕೊಂಡ ತುಟ್ಟಿಭತ್ಯ, ನಿಯತಕಾಲಿಕ ಬಡ್ತಿ ಮುಂತಾದ ಸೌಲಭ್ಯಗಳು ದೊರಕಿ, ಕಾಲಕಾಲಕ್ಕೆ ಇವುಗಳಿಗಾಗಿ ಹೋರಾಟ ನಡೆಸುವ ಪ್ರವೃತ್ತಿಯೇ ಅಡಗಿಹೋಯಿತು. ಕಾರ್ಮಿಕ ನಾಯಕರು ಮಧ್ಯಸ್ತಿಕೆ ವಹಿಸುವ ಚತುರ ದಲ್ಲಾಳಿಗಳಾಗಿ ಸಂಧಾನಕಾರರಾಗಿ ಪರಿವರ್ತಿತರಾದರೆಂದರೆ ಅತಿಶಯೋಕ್ತಿಯೇನಲ್ಲ. ವೇತನದಲ್ಲೇ ಪ್ರತಿ ತಿಂಗಳೂ ಸದಸ್ಯ ಶುಲ್ಕ ಕಟಾವು ಮಾಡುವುದರಿಂದ ಸದಸ್ಯತ್ವ ಕೂಡಿಸುವ ಕಷ್ಟವೂ ತಪ್ಪಿಹೋಯಿತು. ಇದರಿಂದ ನಾಯಕನಿಗೆ ಸದಸ್ಯರೊಡನೆ ಸಜೀವ ಸಂಬಂಧವೂ ಕಡಿದುಹೋಯಿತು.

ಇಂಥ ಕೆಲವು ಬೆಳವಣಿಗೆಗಳಿಂದಾಗಿ ಸ್ವಾತಂತ್ರ್ಯದ ತರುಣದಲ್ಲಿ ಕಾರ್ಮಿಕರಾದವರೆಲ್ಲಾ, ಒಂದೆರಡು ಪೀಳಿಗೆಯಲ್ಲಿ ಮಧ್ಯಮವರ್ಗವಾಗಿ ಪರಿವರ್ತಿತರಾದರು. ಅಸಂಘಟಿತ



*ಖಾಸಗೀಕರಣಕ್ಕೆ ಬದಲಿಯಾದ ಮೊದಲ ಉದ್ಯಮ - ಭಾರತ್ ಅಲ್ಯೂಮಿನಿಯಂ ಕಾರ್ಖಾನೆ*

ಕಾರ್ಮಿಕರನ್ನೂ ಸಂಘಟಿಸುವಲ್ಲಿ ಇವರು ಏನೇನೂ ಆಸಕ್ತಿ ವಹಿಸಲಿಲ್ಲ. ಗ್ರಾಮಾಂತರ ಪ್ರದೇಶಗಳಿಗಂತೂ ಹೋಗಲೇ ಇಲ್ಲ. ಈ ತೃಪ್ತವರ್ಗದ ರಾಜಕೀಯ ಪ್ರಜ್ಞೆ ತಮ್ಮ ಸುತ್ತಲಿನವರ ರಾಜಕೀಯ ಪ್ರಜ್ಞೆಗಿಂತ ಉತ್ತಮವೇನೂ ಆಗಲಿಲ್ಲ. ಎಂ. ಎಸ್. ಕೃಷ್ಣನ್, ಸೂರ್ಯನಾರಾಯಣ, ಮಹದೇವನ್‌ರಂಥವರು ಆರ್ಥಿಕ ಬೇಡಿಕೆಗಳನ್ನು ಸಾಧಿಸಿಕೊಡಲು ನಾಯಕರಾಗಿರಬೇಕು; ಆದರೆ ಅವರಿಗೆ ಚುನಾವಣೆಯಲ್ಲಿ ಇವರ ಮತವಿಲ್ಲವೆಂಬಂತಾಯಿತು. ಮತ ಚಲಾಯಿಸುವಾಗ ಜಾತಿ, ಮತ, ಭಾಷೆ, ಪ್ರಾಂತ್ಯದಂಥ ವಿಷಯಗಳಿಗೆ ಬೆಲೆ ಕೊಡುವ ಈ ಕಾರ್ಮಿಕ ಮಾರ್ಕ್ಸ್ ಬಯಸುವ ಮುಂಚೂಣಿ ವರ್ಗಕ್ಕೆ ಸೇರಲು ನಾಲಾಯಕ್ಕಾದನೆಂದರೆ ಅತಿಶಯೋಕ್ತಿ ಇಲ್ಲ.

ಸ್ವಾತಂತ್ರ್ಯಾನಂತರದ ಐವತ್ತು ವರ್ಷಗಳಲ್ಲಿ ಸಾಬೀತಾದ ವಿಷಯವನ್ನು ಸಂಗ್ರಹಿಸಿ ಹೇಳಬಹುದಾದರೆ ಅದು ಇಷ್ಟು : ೧೯೪೭ರಲ್ಲಿ ಬ್ರಿಟಿಷರು ಮಾಡಿದ್ದು ಅಧಿಕಾರದ ವರ್ಗಾವಣೆ (Transfer of Power); ತಮ್ಮ ವರ್ಗಹಿತವನ್ನು ಸಾಧಿಸಬಲ್ಲ ವರ್ಗಕ್ಕೆ. ಈ ವರ್ಗ ಸರ್ಕಾರಿ ಬಂಡವಾಳ ಹೂಡಿಕೆಯನ್ನು ಸಮಾಜವಾದಿ ಸಾರ್ವಜನಿಕ ಬಂಡವಾಳ ಹೂಡಿಕೆ ಎಂಬ ಸಿದ್ಧಾಂತ ರೂಪದಲ್ಲಿ ಮಾರಾಟಮಾಡಿ ಕಾರ್ಮಿಕರ ಸಹಕಾರವನ್ನು ಬಹುಮಟ್ಟಿಗೆ ಪಡೆಯಿತು. ಆ ಪೀಳಿಗೆಯ ನವಕಾರ್ಮಿಕರನ್ನು ತನ್ನ ವರ್ಗದ ಸಮರ್ಥಕರಾಗಬಲ್ಲ ಮಧ್ಯಮವರ್ಗವಾಗಿ ಪರಿವರ್ತಿಸುತ್ತಲೇ, ಬೂರ್ಷ್ವಾವರ್ಗದ ಖಾಸಗಿ ಬಂಡವಾಳದ ವೃದ್ಧಿಗೆ ನೆರವು ನೀಡಿತು. ೧೯೯೧ ರಿಂದ ಈ ವರ್ಗ ಸೈದ್ಧಾಂತಿಕವಾದ ಎಲ್ಲ ಸೋಗಲಾಡಿತನವನ್ನು ಬಿಟ್ಟು ಬಹಿರಂಗವಾಗಿ ತನ್ನ ವರ್ಗಧೋರಣೆಯನ್ನು ಪ್ರಕಟಿಸುವ ಧೈರ್ಯ ಮಾಡಿದೆ. ಸರ್ಕಾರಿ ಬಂಡವಾಳವನ್ನು ಖಾಸಗಿ ಆಗಿಸುವ ಕೆಲಸ ಭರಾಟೆಯಿಂದ ಸಾಗಿದೆ. ಯೋಜನಾಬದ್ಧ ಆರ್ಥಿಕ ಪ್ರಗತಿಯ ನೀತಿಯನ್ನು ಕೈಬಿಡಲಾಗಿದೆ. ಬಡತನ ನಿರ್ಮೂಲನವೋ, ನಿರುದ್ಯೋಗ ನಿರ್ಮೂಲನವೋ ಈ ಸರಕಾರದ ಧೋರಣೆಯಲ್ಲ. ''ಮಾರುಕಟ್ಟೆಯ ಮುಕ್ತ ಪರಿಸರ ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತದೆ. ಇವು ಸರಕಾರಗಳ ಕರ್ತವ್ಯವಲ್ಲ. ಸರಕಾರ ಅತಿ ಕಡಿಮೆ ಕ್ಷೇತ್ರಗಳಲ್ಲಿ ತನ್ನ ಕೆಲಸಗಳನ್ನು ಸೀಮಿತಗೊಳಿಸಬೇಕೆಂಬ'' ಧೋರಣೆ ತಳೆದಿದೆ. ಇದಕ್ಕೆ ಪೋಷಕವಾಗಿ ಅಂತರರಾಷ್ಟ್ರೀಯ ಆರ್ಥಿಕ ಕ್ಷೇತ್ರ ಬಹುರಾಷ್ಟ್ರೀಯ ಬಂಡವಾಳದ ಒತ್ತಡವಿಟ್ಟು, ಎಲ್ಲ ರಾಷ್ಟ್ರಗಳಲ್ಲೂ ಈ ಬಗೆಯ ಬೆಳವಣಿಗೆಗೆ, ವಿಶ್ವವಾಣಿಜ್ಯ ಸಂಸ್ಥೆಯ ಮೂಲಕ ಸಮರ್ಥ ಒತ್ತಾಸೆ ನೀಡುತ್ತಿದೆ. ನಮ್ಮ ಮಟ್ಟಿಗೆ ೧೯೯೧ರಿಂದ ಎಷ್ಟು ಸರ್ಕಾರ ಬದಲಿಸಿದರೂ, ಯಾವ ಪಕ್ಷ, ಪಕ್ಷಗಳ ಒಕ್ಕೂಟ ಅಧಿಕಾರಕ್ಕೆ ಬಂದಿದ್ದರೂ, ವಾಣಿಜ್ಯಪರವಾದ, ಮುಕ್ತಮಾರುಕಟ್ಟೆ, ಖಾಸಗೀ ಬಂಡವಾಳದ ಆರ್ಥಿಕ ನೀತಿಯಲ್ಲೇನೂ ಬದಲಾವಣೆಯಾಗಿಲ್ಲ ಎಂಬುದು ಗಮನಾರ್ಹ. ಬೂರ್ಷ್ವಾವರ್ಗದ ಬಂಡವಳಿಗರ ನಡುವಿನ ಆಂತರಿಕ ಬಿಕ್ಕಟ್ಟಾಗಿ ರಾಜಕೀಯ ವ್ಯಕ್ತವಾಗುತ್ತಿದೆಯೇ ವಿನಃ ಇದು ಬಂಡವಾಳಿಗರ ಅಧಿಕಾರ ಇರಬೇಕೇ ಬೇಡವೇ ಎಂಬ ಪ್ರಶ್ನೆಯದಲ್ಲ ಎಂದು- ಸ್ಪಷ್ಟವಾಗಿ ಕಾರ್ಮಿಕರೂ, ದಲಿತರೂ ತಿಳಿದರೆ ಮಾತ್ರ ಅವರ ಭ್ರಮನಿರಸನ ಸಾಧ್ಯ.

ಬದಲಾದ ಈ ಪರಿಸ್ಥಿತಿಯಲ್ಲಿ ಕಾರ್ಮಿಕ ಚಳುವಳಿಯ ಮೇಲೆ ಆಗುತ್ತಿರುವ ಕೆಲವು ಪರಿಣಾಮಗಳನ್ನು ಗುರುತಿಸಬೇಕು. ಇನ್ನು ಮುಂದೆ ಸಾವಿರ ಕಾರ್ಮಿಕರನ್ನು ಉಳ್ಳ ಕೈಗಾರಿಕಾ ಘಟಕಗಳು ಕೆಲಸಗಾರರನ್ನು ಕೆಲಸದಿಂದ ತೆಗೆಯುವ, ಘಟಕವನ್ನು ಮುಚ್ಚುವ, ಮನಬಂದಾಗ ತೆಗೆಯುವ ಹಕ್ಕು ಪಡೆಯುವಂಥ ಕಾನೂನು ಬರಲಿದೆ. ಏರಿ ಏರಿ ಬರುತ್ತಿರುವ ಮುಕ್ತ ಮಾರುಕಟ್ಟೆಯ ನೀತಿಯಿಂದಾಗಿ, ಬೇರೆ ದೇಶಗಳಿಂದ ಹರಿದುಬರುತ್ತಿರುವ ಸುಲಭ ದರದ ಸಾಮಗ್ರಿಗಳಿಂದಾಗಿ ಸ್ಪರ್ಧಿಸಲಾಗದೆ ಮುಕ್ಕಾಲು ಪಾಲು ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು ಮುಚ್ಚಿಹೋಗಿವೆ. ಇದರಿಂದ ಉಂಟಾಗಿರುವ ನಿರುದ್ಯೋಗ ಮತ್ತು ಇತರ ಪರಿಣಾಮಗಳ ಸರ್ವೇಕ್ಷಣ ಮಾಡಿ ವರದಿ ಮಾಡುವ ಜವಾಬ್ದಾರಿ ಸರ್ಕಾರ ನಿರ್ವಹಿಸುತ್ತಿಲ್ಲ.

ಸಣ್ಣ ಉದ್ಯಮಿಗಳ ಸಾಲದ ಹೊರೆಯನ್ನು ಸಾಲ ಮಾಡಿ ಮಾಡಿ ಮತ್ತು ಇನ್ನಿತರ ಕ್ರಮಗಳಿಂದ ಪರಿಹರಿಸಲು ಸರ್ಕಾರ ಮುಂದಾಗಿದೆ. ಅಂದರೆ ಸಣ್ಣ ಉದ್ಯಮಗಳು ಇಲ್ಲವೇ ಇಲ್ಲ ಎನ್ನುವಷ್ಟು ಮುಚ್ಚಿಹೋಗುವ ಪರಿಸ್ಥಿತಿ ಉದ್ಭವವಾಗಿದೆ. ಕಳೆದ ನಾಲ್ಕು ದಶಕಗಳಲ್ಲಿ ರಫ್ತು ಮಾಡುವಲ್ಲಿ, ಉದ್ಯೋಗ ನಿರ್ಮಿಸುವಲ್ಲಿ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳದ್ದೇ ಸಿಂಹಪಾಲಾಗಿತ್ತೆಂಬುದನ್ನು ಗಮನಿಸಿದರೆ, ಉದ್ಭವಿಸುತ್ತಿರುವ ಸಾಮಾಜಿಕ ಪರಿಸ್ಥಿತಿ ಗ್ರಹಿಕೆಗೆ ಸಿಕ್ಕೀತು. ಇನ್ನು ಹಿರಿಯ ಉದ್ದಿಮೆಗಳ ವಿಷಯ ಹೇಳತೀರದು. ವಿದೇಶೀ ಬಂಡವಾಳದ ಜೊತೆ ಪಾಲುಗಾರಿಕೆ ಪಡೆಯುವ ತವಕದಲ್ಲಿ ಇವರು ತಮ್ಮ ಸ್ವಂತಿಕೆ ಕಳೆದುಕೊಳ್ಳುತ್ತಿದ್ದಾರೆ. ಆಧುನಿಕೀಕರಣದ ಮೊದಲ ಹೆಜ್ಜೆ ಹೊಸ ಉದ್ಯೋಗ ಸೃಷ್ಟಿ ಅಲ್ಲ. ಇರುವ ನೌಕರರನ್ನು ಕಡಿಮೆ ಮಾಡಬೇಕು. ಮಾಹಿತಿ ತಂತ್ರಜ್ಞಾನ ಬಳಸಿ, ಆದಷ್ಟೂ ಆಟೋಮೇಷನ್ ಸಾಧಿಸಬೇಕು. ವಿದೇಶಿ ಬಂಡವಾಳದ ಈ ಕರಾರಿಗೆ ಇವರೆಲ್ಲ ಸಹಚರರು. ಹೀಗಾಗಿ ಈ ಕ್ಷೇತ್ರದಲ್ಲೂ ಮಹತ್ತರ ನಿರುದ್ಯೋಗ ಸೃಷ್ಟಿಯಾಗುತ್ತದೆ. ಇದರ ಜೊತೆಗೆ ಲಕ್ಷಾಂತರ ನೌಕರರು ಸ್ವಯಂ ನಿವೃತ್ತಿ ಪ್ರಕ್ರಿಯೆಯಲ್ಲಿ ದೊಡ್ಡ ಮೊತ್ತ ಪಡೆದು, ಸ್ವತಃ ನಿರುದ್ಯೋಗಿಗಳಾಗಿದ್ದಾರೆ. ಇವರ ಹಣ ಇವರು ನಿರೀಕ್ಷಿಸಿದಷ್ಟು ಬಡ್ಡಿಯನ್ನಾಗಲಿ, ಸುಕ್ಷೇಮವಾದ ಹಣಹೂಡಿಕೆಯ ಮಾರ್ಗವಾಗಲಿ ನೀಡದೆ, ಸ್ಟಾಕ್ ಎಕ್ಸ್‌ಚೇಂಜ್‌ನ ಜೂಜಿನಲ್ಲಿ ಕಳೆದುಹೋಗುವ ಪರಿಸ್ಥಿತಿ ಉಂಟಾಗಿದೆ. ಸಣ್ಣ ಉಳಿತಾಯಕ್ಕೆ ನಂಬಿಕೆಯಾದ ಉಳಿತಾಯದ ಮಾರ್ಗವೇ ಕಂಡುಬರುತ್ತಿಲ್ಲ. ಪೆನ್ಷನ್‌ದಾರರ ಜೀವನ ಕಂಗಾಲಾಗಿದೆ. ಸಮಾಜದಲ್ಲಿ ಒಂದು ರೀತಿ ಅಸ್ತವ್ಯಸ್ತತೆ, ಅಶಾಂತಿ, ಮುಜುಗರ ಸ್ಪಷ್ಟವಾಗಿ ಬೆಳೆಯಲು ಆರಂಭವಾಗಿದೆ.

ಅಸಂಘಟಿತ ಕಾರ್ಮಿಕರ ಅಳಲಂತೂ ಹೇಳತೀರದು. ಕನಿಷ್ಠ ವೇತನ, ಮಸ್ಟರ್ ರೋಲ್‌ನ ಕಾನೂನಿಗೆ ಏನೇನೂ ಬಲವಿಲ್ಲವಾಗಿದೆ. ಯಾವುದೇ ಉದ್ಯಮ ಒಬ್ಬ ಕೂಲಿಯನ್ನು ೧೮೦ ದಿವಸ ಸತತ ಕೆಲಸಕ್ಕೆ ಇರಿಸಿಕೊಂಡಿದ್ದರೆ ಅಲ್ಲಿ ಒಂದು ಶಾಶ್ವತ ಉದ್ಯೋಗಕ್ಕೆ ಅವಕಾಶವಿತ್ತು. ಈ ನ್ಯಾಯಾಲಯ ತೀರ್ಮಾನ ಈಗ ಆಚರಣೆಯಲ್ಲಿಲ್ಲ. ಕಾಂಟ್ರ್ಯಾಕ್ಟ್ ಲೇಬರ್ ಆಕ್ಟ್ ಸದ್ಯದಲ್ಲೇ ತನ್ನ ಹಲ್ಲನ್ನು ಕಳೆದುಕೊಳ್ಳುತ್ತದೆ. ಪಟ್ಟಣ ಪ್ರದೇಶದ ಈ ಕೋಟ್ಯಾಂತರ ಅಸಂಘಟಿತ ಕೆಲಸಗಾರರನ್ನು ಸಂಘಟಿತ ಕಾರ್ಮಿಕ ವರ್ಗ ಅನಾದರಿಸಿದ್ದು ಇಂದು ವಿಷಮ ಪರಿಸ್ಥಿತಿಗೆ ಎಡೆಮಾಡುತ್ತಿದೆ. ಗ್ರಾಮಾಂತರ ಪ್ರದೇಶಗಳಿಂದ ಪಟ್ಟಣಕ್ಕೆ ವಲಸೆ ಬರುತ್ತಿದ್ದ ನಿರುದ್ಯೋಗಿಗಳಿಗೆ ಈಗ ಈ ಮಾರ್ಗವೂ ಮುಚ್ಚಿಹೋಗಬಹುದು.

ಹಳ್ಳಿಗಾಡಿನಲ್ಲಿ ನಿರುದ್ಯೋಗ ಸಮಸ್ಯೆ ತೀರ ಉಲ್ಬಣ ಪರಿಸ್ಥಿತಿಯನ್ನು ತಲುಪಿದೆ. ಬಂಡವಾಳಶಾಹಿ ಮಾರ್ಗದ ವ್ಯವಸಾಯಕ್ಕೆ, ವ್ಯವಸಾಯದ ಯಾಂತ್ರೀಕರಣಕ್ಕೆ ಈಗ ಸಂಪೂರ್ಣ ಒತ್ತು ಸಿಕ್ಕಿದೆ. ಭೂಸುಧಾರಣೆಯ ಮಾತು ಮರೆತ ಮಾತಾಗಿದೆ. ಈಗ ಯಾರು ಬೇಕಾದರೂ ಎಲ್ಲಿ ಬೇಕಾದರೂ ಎಷ್ಟು ಬೇಕಾದರೂ ಭೂಮಿ ಕೊಳ್ಳಬಹುದು. ಸಣ್ಣ ಸಣ್ಣ ಹಿಡುವಳಿ ಉಳ್ಳವರು ತಮ್ಮ ಭೂಮಿಯನ್ನು ಮಾರಿಕೊಳ್ಳುತ್ತಿದ್ದಾರೆ. ರೈತನ ಉತ್ಪಾದನೆಗೆ ತಕ್ಕ ಬೆಲೆ ಸಿಗುತ್ತಿಲ್ಲ. ಮುಕ್ತ ಮಾರುಕಟ್ಟೆಯ ನೀತಿಯಿಂದಾಗಿ, ವಿದೇಶಗಳಿಂದ ಸುಲಭ ಬೆಲೆಯ ದವಸ ಧಾನ್ಯಗಳು ಹೊಳೆ ಹರಿಯುವಂತೆ ಕಾಣುತ್ತದೆ. ಯಾಂತ್ರೀಕರಣದಿಂದಾಗಿ ಕಂಬಳ ಕೂಲಿ ಸಿಗದ ಜನರ ಗೋಳು ಹೇಳತೀರದು. ಅಲ್ಲಲ್ಲೇ ಇಂಥ ಯಂತ್ರಗಳ ವಿರುದ್ಧ ಕೂಲಿಗಾರರು ಹಿಂಸಾಪೂರ್ವಕ ಪ್ರತಿಭಟನೆ ನಡೆಸುತ್ತಿರುವ ವರದಿಗಳು ಬರುತ್ತಿವೆ. ಅಮೆರಿಕದಂಥ ದೇಶದಲ್ಲಿ ಅಲ್ಲಿಯ ರೈತರಿಗೆ ನೀಡುತ್ತಿರುವ ಸಬ್‌ಸಿಡಿ ಅಂಕಿ ಅಂಶಗಳು ಹೊರಬಂದಿದ್ದು, ನಮ್ಮ ಸರ್ಕಾರಗಳು ಈ ಬಗ್ಗೆ ನೀಡುತ್ತಿರುವ ಸಹಾಯ ಏನೇನೂ ಸಾಲದೆಂಬುದು ಕಂಡುಬಂದಿದೆ. ಪಟ್ಟಣದ ಬಂಡವಳಿಗನ ಅಧಿಕಾರದಲ್ಲಿ ಹಳ್ಳಿಯ ಹಿರಿಯ ಭೂಮಾಲಿಕನಿಗೂ ಪರಿಸ್ಥಿತಿ ಬಿಗಡಾಯಿಸುತ್ತಿರುವುದು ನಿಜ ಸಂಗತಿ.

ಪರಿಸ್ಥಿತಿ ಇಷ್ಟು ಗಂಭೀರವಾಗಿದ್ದರೂ ಅದು ಸಾಕಷ್ಟು ಪ್ರಮಾಣದಲ್ಲಿ ಚಳುವಳಿ ಮೂಲಕ, ಪ್ರತಿಭಟನೆ ಮೂಲಕ ಪ್ರಕಟಣೆಯಾಗದಿರುವುದಕ್ಕೆ ಕಾರಣ ಅವರ ಪರಿಸ್ಥಿತಿಗೆ ಚಾಲನೆ ನೀಡಬಲ್ಲ ತಿಳಿವಿನ ನಾಯಕತ್ವದ ಅಭಾವ. ಸೈದ್ಧಾಂತಿಕ ನಿಲುವು ತಳೆದ, ಸೇವಾ ಮನೋಭಾವದ, ತ್ಯಾಗಶೀಲ ಕಾರ್ಮಿಕ ನಾಯಕರುಗಳಿಗಾಗಿ ನಾಡಿನ ಪಟ್ಟಣಗಳಲ್ಲಿ, ಹಳ್ಳಿಗಾಡಿನಲ್ಲಿ ಮಹತ್ತರ ಬೇಡಿಕೆ ಇದೆ. ಮೂಕಜನತೆ ಮೊರೆ ಇಡುತ್ತಿದ್ದಾರೆ. ಈ ಮೇ ದಿನದಂದು ಅಲ್ಲಲ್ಲಿ ಈ ಬಗ್ಗೆ ಚರ್ಚೆ ನಡೆಯಬೇಕು. ಹೊಸ ಹಾದಿ, ಹೊಸ ತಂತ್ರವನ್ನು ಹುಡುಕಬೇಕು. ಎಲ್ಲರಿಗಿಂತ ಹೆಚ್ಚಾಗಿ ಕೆಲಸ ಕಳೆದುಕೊಂಡ ಕೈಗಾರಿಕಾ ನೌಕರರಿಗೆ ತಮ್ಮ ಕರ್ತವ್ಯವೇನೆಂದು ಸ್ಪಷ್ಟವಾಗಿಯೇ ಇದೆ. ಕಾರಣ ಈ ಮಹತ್ತರ ಕೆಲಸ ನಿರ್ವಹಿಸಲು ಬೇಕಾದ ತಿಳಿವು ಅವರಿಗೆ ಅನುಭವಗಮ್ಯವಾಗಿರಬೇಕು.

ಸಮಾಜವಾದವನ್ನೇ ಸಿದ್ಧಾಂತವಾಗಿ ಸ್ವೀಕರಿಸಿದ ರಾಜಕೀಯ ಪಕ್ಷಗಳು, ಟ್ರೇಡ್ ಯೂನಿಯನ್ನುಗಳು, ವಿದ್ವಾಂಸರು, ಎಷ್ಟೋ ಬಾರಿ ವಾಸ್ತವಕ್ಕೆ ದೂರವಾದ ಸಣ್ಣಸಣ್ಣ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದಾಗಿ ಇಲ್ಲವೆ, ವ್ಯಕ್ತಿಗತ ದ್ವೇಷಾಸೂಯೆಯಿಂದ ಕಾರ್ಮಿಕರ ಸಂಘಟನೆಗಳನ್ನು ಒಡೆಯುತ್ತಾ, ವಿವಿಧ ಪಕ್ಷಗಳಾಗಿ, ಗುಂಪುಗಳಾಗಿ ತಮ್ಮ ಸಾಮರ್ಥ್ಯವನ್ನು ವ್ಯರ್ಥ ಮಾಡುತ್ತಿರುವುದು ಅಕ್ಷಮ್ಯ ಅಪರಾಧವೆನಿಸುತ್ತದೆ. ಬರೇ ಹಿಂಸಾಚಾರದಿಂದ, ರೋಷದಿಂದ ಏನೇನೂ ಸಾಧನೆಯಾಗದೆಂದು ಹಿಂಸೆಯ ಬೆನ್ನು ಹಿಡಿದ ಪ್ರಗತಿಪರರಿಗೂ ಅರಿವಾಗಿರಬೇಕು. ವಿಶ್ವದಾದ್ಯಂತ ಹತ್ತಾರು ದಶಕಗಳು ಅಂತರರಾಷ್ಟ್ರೀಯ ಕಾರ್ಮಿಕವರ್ಗ ಹೋರಾಡಿ, ಸೆಣಸಾಡಿ, ಅಪಾರ ತ್ಯಾಗ ಬಲಿದಾನಗಳಿಂದ ಸಾಧಿಸಿರುವ ಜನಪರ ಸುಧಾರಣಾ ಕ್ರಮಗಳು, ಕಾನೂನುಗಳು, ಹಕ್ಕುಗಳು, ಅನುಕೂಲಗಳು ಎಲ್ಲವನ್ನೂ ಅಧಿಕಾರಾರೂಢ ಬಂಡವಾಳ ಒಂದೇ ಏಟಿಗೆ ಇಲ್ಲವಾಗಿಸಲು ಹೊರಟಿದೆ. ದಲಿತರನ್ನೂ ಶೋಷಿತರನ್ನೂ ಜಾತಿಯ ಹೆಸರಿನಲ್ಲಿ ಛಿದ್ರ ಛಿದ್ರವಾಗಿಸುತ್ತಾ ಮೀಸಲಾತಿ ಮುಂತಾದ ಸೋಗಲಾಡಿತನದ ನೀತಿಗಳನ್ನು ಸಾರುತ್ತಿರುವ ಆಳುವ ವರ್ಗದವರ ವಂಚನೆ ಈ ಜನತೆಗೆ ಅರ್ಥವಾಗಿರಬೇಕು. ಈ ಎಲ್ಲ ವರ್ಗಗಳನ್ನು ರಾಜಕೀಯವಾಗಿ, ಸಾಮಾಜಿಕವಾಗಿ ಒಂದು ನೆಲೆಯಲ್ಲಿ ಸೇರಿಸಿ, ಅವರನ್ನು ಶೋಷಿಸುವವರ ವಿರುದ್ಧ ಸಮರಕ್ಕೆ ಸಜ್ಜುಗೊಳಿಸುವ ಐಕಮತ್ಯವನ್ನು ಪ್ರಗತಿಪರ ಶಕ್ತಿಗಳು ಪ್ರಕಟಿಸದಿದ್ದರೆ, ಇತಿಹಾಸ ಇವರ ಅಪಮಾನಕರ ವೈಫಲ್ಯವನ್ನು ದಾರುಣವಾಗಿ ಚಿತ್ರಿಸೀತು. ಈ ಮೇ ದಿನ ಪ್ರಗತಿಪರರು ಒಟ್ಟಾಗಿ ಸೇರಿ ಈ ವಿಷಯ ಚಿಂತಿಸದಿದ್ದರೆ, ಅವರ ಪಾಲಿಗೆ ಮತ್ತೊಂದು ಮೇ ದಿನ ಬರದೇ ಹೋಗಬಹುದು. ಈಗಾಗಲೇ ತಡವಾಗಿದೆ. □□□

# ಕರ್ನಾಟಕ ರಾಜ್ಯದ ನೀರಾವರಿ ವ್ಯವಸ್ಥೆ ಮತ್ತು ಸಮಸ್ಯೆಗಳು

ಬಿ. ಎಸ್. ಭವಾನಿಶಂಕರ್

ನಮ್ಮ ರಾಜ್ಯದ ಭೌಗೋಳಿಕ ಕ್ಷೇತ್ರದ ವಿಸ್ತೀರ್ಣ ಸುಮಾರು ೧.೯೦ ಲಕ್ಷ ಚದರ ಕಿ.ಮೀ.ಗಳು (೧೯೦ ಲಕ್ಷ ಹೆಕ್ಟೇರು). ಇಲ್ಲಿಯ ಕೃಷಿಯೋಗ್ಯ ಭೂಮಿಯ ವಿಸ್ತಾರ ೧.೪೦ ಲಕ್ಷ ಚ.ಕಿ.ಮೀ.ಗಳು (೧೪೦ ಲಕ್ಷ ಹೆಕ್ಟೇರು). ನಿವ್ವಳ ಬೆಳೆ ಆಗುವ ಜಮೀನಿನ ವಿಸ್ತೀರ್ಣ ೧.೦೭ ಲಕ್ಷ ಚದರ ಕಿ.ಮೀ. (೧೦೭ ಲಕ್ಷ ಹೆಕ್ಟೇರು). ಎಲ್ಲಾ ಜಲಸ್ರೋತಗಳು ಪೂರ್ಣವಾಗಿ ವಿಕಸಿತಗೊಂಡರೆ ಸುಮಾರು ೫೫ ಲಕ್ಷ ಹೆಕ್ಟೇರುಗಳಿಗೆ ನೀರಾವರಿ ವ್ಯವಸ್ಥೆ ಮಾಡಬಲ್ಲದೆಂದು ಅಂಕಿಸಲಾಗಿದೆ. ಇದರಲ್ಲಿ ೨೫ ಲಕ್ಷ ಬೃಹತ್ ಮತ್ತು ಮಧ್ಯಮ ಯೋಜನೆಗಳಿಂದ, ೧೦ ಲಕ್ಷ ಸಣ್ಣ ನೀರಾವರಿ ಯೋಜನೆಗಳಿಂದ, ಉಳಿದ ೨೦ ಲಕ್ಷ ಇತರೇ ಸ್ರೋತ, ಎಂದರೆ ಭೂಜಲದಿಂದ, ಮಾಡಬಹುದೆಂದು ಸರ್ಕಾರಿ ಕ್ಷೇತ್ರದವರು ಅಂದಾಜು ಮಾಡಿದ್ದಾರೆ. ಕೇಂದ್ರೀಯ ಯೋಜನಾ ಆಯೋಗದ ನಿರೂಪಣೆಯ ಪ್ರಕಾರ ೧೦,೦೦೦ ಹೆಕ್ಟೇರುಗಳು ಮತ್ತು ಅದಕ್ಕಿಂತ ಹೆಚ್ಚಳ ನೀರಾವರಿ ಲಾಭಾನ್ವಿತ ಕ್ಷೇತ್ರ, ಆದರೆ ಬೃಹತ್ ಪರಿಯೋಜನೆ, ೧೦,೦೦೦ ಹೆಕ್ಟೇರುಗಳಿಂದ ೨,೦೦೦ ಹೆಕ್ಟೇರುಗಳವರೆಗೆ ಮಧ್ಯಮ ಯೋಜನೆ, ೨೦೦೦ ಹೆಕ್ಟೇರುಗಳಿಗಿಂತ ಕಡಿಮೆ ಕ್ಷೇತ್ರ ಸಣ್ಣ ನೀರಾವರಿ ಯೋಜನೆ ಎಂದು ಪರಿಗಣಿಸಲಾಗುತ್ತದೆ.

**ರಾಜ್ಯದ ಪ್ರಮುಖ ನದಿಗಳು ಮತ್ತು ಅವುಗಳ ಜಲಾನಯನ ಕ್ಷೇತ್ರ.**

ಕೃಷ್ಣಾ ನದಿ ಮತ್ತು ಅದರ ಜಲಾನಯನ ಕ್ಷೇತ್ರ ರಾಜ್ಯದಲ್ಲಿ ಅತಿ ದೊಡ್ಡದು. ನಮ್ಮ ರಾಜ್ಯದ ಭೌಗೋಳಿಕ ಕ್ಷೇತ್ರದ ಶೇ. ೬೦ರಷ್ಟನ್ನು ಅದು ಆವರಿಸಿಕೊಂಡಿದೆ. ಇದರ ಸರಾಸರಿ ಹರಿದುಹೋಗುವ ವಾರ್ಷಿಕ ಜಲಪ್ರಮಾಣ ಸುಮಾರು ೯೭೦ ಟಿ.ಎಂ.ಸಿ. (ಹತ್ತು ಕೋಟಿ ಕ್ಯೂಬಿಕ್ ಫೀಟ್) ಅಂದರೆ ಸಹಸ್ರ ದಶಲಕ್ಷ ಘನ ಅಡಿಗಳು. ಎರಡನೆಯ ಸ್ಥಾನದಲ್ಲಿದ್ದರೂ, ಚಾರಿತ್ರಿಕ ದೃಷ್ಟಿಯಿಂದ ಮತ್ತು ಹೆಚ್ಚು ಲಾಭವನ್ನು ನೀರಿನಿಂದ ಒದಗಿಸಿರುವ ಪವಿತ್ರ ಕಾವೇರಿಯು ನಮ್ಮ ರಾಜ್ಯದ ಹೆಮ್ಮೆಯಾಗಿದೆ. ಇದರ ಜಲಾನಯನ ವಿಸ್ತೀರ್ಣ ರಾಜ್ಯದ ಭೌಗೋಳಿಕ ಕ್ಷೇತ್ರದಲ್ಲಿ ಸುಮಾರು ಶೇ. ೨೦ ಆಗಿರುತ್ತದೆ. ಇದರ ಸರಾಸರಿ ವಾರ್ಷಿಕ ಹರಿದುಹೋಗುವ ಜಲಪ್ರಮಾಣ ಸುಮಾರು ೩೮೮ ಟಿ.ಎಂ.ಸಿ. ಎಂದು ಅಂದಾಜಿಸಲಾಗಿದೆ. ಇದರ ಬಹುತೇಕ ಲಾಭವೆಂದರೆ ಮಾನ್ಯ ಎಂ. ವಿಶ್ವೇಶ್ವರಯ್ಯ ಅವರಿಂದ ಸೃಷ್ಟಿಯಾದ ಜಗತ್ಪಸಿದ್ಧ ಕೃಷ್ಣರಾಜಸಾಗರವು ಮಂಡ್ಯ ಜಿಲ್ಲೆಯನ್ನು ಸಮೃದ್ಧಿಗೊಳಿಸಿದೆ. ಇನ್ನು ಗೋದಾವರಿಯ ಉಪನದಿಗಳು ಪಾಲಾರ್ ಮತ್ತು ಪೆನ್ನಾರ್. ಇವುಗಳ ಒಟ್ಟಾರೆ ಜಲಾನಯನ ಕ್ಷೇತ್ರ ಕೇವಲ ಶೇ. ೭ರಷ್ಟಿದ್ದು ನಗಣ್ಯವಾಗಿದೆ. ಈ ಎಲ್ಲಾ ನದಿಗಳೂ ಪೂರ್ವಾಭಿಮುಖವಾಗಿ ಹರಿದು ಬಂಗಾಳಕೊಲ್ಲಿಯಲ್ಲಿ ಸಮಾವೇಶಗೊಂಡಿವೆ. ಇವುಗಳೆಲ್ಲದರ ಒಟ್ಟಾರೆ ಜಲಾನಯನ ಕ್ಷೇತ್ರ ರಾಜ್ಯದ ಶೇ. ೮೭. ಆದರೆ ಪಶ್ಚಿಮಾಭಿಮುಖವಾಗಿ ಹರಿಯುವ ಕಾಳಿ ನದಿ, ಶರಾವತಿ, ನೇತ್ರಾವತಿ ಮತ್ತು ಕರಾವಳಿಯಲ್ಲಿ ಹರಿಯುವ ಇತರ ಸಣ್ಣ ಪುಟ್ಟ ನದಿಗಳ ಒಟ್ಟಾರೆ ಜಲಾನಯನ ಕ್ಷೇತ್ರ ಕೇವಲ ಶೇ. ೧೩. ಇಷ್ಟು ಚಿಕ್ಕ ಕ್ಷೇತ್ರವಾದಾಗ್ಯೂ ಪಶ್ಚಿಮ ನದಿಗಳ ಸರಾಸರಿ ವಾರ್ಷಿಕ ಜಲಪ್ರಮಾಣ ಸುಮಾರು ೨೦೦೦ ಟಿ.ಎಂ.ಸಿ. ಎಂದು ಅಂಕಿಸಲಾಗಿದೆ. ಅಂದರೆ ಕೃಷ್ಣಾ ಮತ್ತು ಕಾವೇರಿಗಳ ಒಟ್ಟು ಜಲಪ್ರಮಾಣಕ್ಕಿಂತ ಇದು ಸುಮಾರು ಶೇ. ೧೫೦ರಷ್ಟು ಹೆಚ್ಚಾಗಿರುತ್ತದೆ. ಇಷ್ಟು ಸಣ್ಣ ಕ್ಷೇತ್ರದಲ್ಲಿ ಅಷ್ಟು ದೊಡ್ಡ ಪ್ರಮಾಣದಲ್ಲಿ ಒದಗುವ ಜಲ ಇದ್ದರೂ ನೀರಾವರಿಗೆ ಉಪಯೋಗವಿಲ್ಲದೆ ವ್ಯರ್ಥವಾಗಿ ಅರಬ್ಬಿ ಸಮುದ್ರಕ್ಕೆ ಹರಿದುಹೋಗುತ್ತಿರುವುದು ಒಂದು ಗಮನಾರ್ಹ ಮತ್ತು ಚಿಂತಿಸಬೇಕಾದ ವಿಷಯ. ಇದುವರೆವಿಗೆ ಯಾವ ತರಹದ ಯೋಜನೆಯೂ ಇವುಗಳ ಮೇಲೆ ಯೋಜಿಸಿಲ್ಲ.

**ರಾಜ್ಯದಲ್ಲಿನ ನೀರಾವರಿ ಪರಿಸ್ಥಿತಿ – ಕೆಲವು ಅಂಶಗಳು**

ಬೃಹತ್ ಮತ್ತು ಮಧ್ಯಮ ಪರಿಯೋಜನೆಗಳಿಂದ ರಾಜ್ಯದ ಮುಖ್ಯ ನದಿಗಳ ನೀರಾವರಿಯ ಅಂತಿಮ ಸಾಮರ್ಥ್ಯ ಮತ್ತು ಇದುವರೆಗೆ ಸಾಧಿಸಿರುವ ಸಾಮರ್ಥ್ಯ ಕೆಳಗೆ ತೋರಿಸಲಾಗಿದೆ.

೩/೨೦೦೦

| ಜಲಾನಯನ ಕ್ಷೇತ್ರ | ಅಂತಿಮ ಸಾಮರ್ಥ್ಯ (ಹೆ) | ಸಾಧಿಸಿರುವ ಸಾಮರ್ಥ್ಯ (ಹೆ) |
|---|---|---|
| ಕೃಷ್ಣಾ | ೧೮.೪೯ ಲಕ್ಷ | ೯.೭೩ ಲಕ್ಷ |
| ಕಾವೇರಿ | ೫. ೨೭ ಲಕ್ಷ | ೨.೯೫ ಲಕ್ಷ |
| ಗೋದಾವರಿ | ೦.೪೨ ಲಕ್ಷ | ೦.೨೦ ಲಕ್ಷ |
| ಪಶ್ಚಿಮವಾಹಿನಿ ಮತ್ತು ಇತರೇ ಸಣ್ಣ ಕ್ಷೇತ್ರಗಳು | ೧೬ ಲಕ್ಷ | - |
| **ಒಟ್ಟಾರೆ** | **೨೪.೩೦ ಲಕ್ಷ** | **೧೨.೮೮ ಲಕ್ಷ** |

ಇದರಿಂದ ಇನ್ನೂ ಉಳಿದಿರುವ ಯೋಜನೆಗಳನ್ನು ತಯಾರಿಸಿ ಕಾರ್ಯಗತಗೊಳಿಸ ಬೇಕಾದ ಪ್ರಯತ್ನಗಳು ಅಗಾಧವಾಗಿಯೇ ಇವೆಯೆಂಬುದು ಸ್ಪಷ್ಟವಾಗಿದೆ.

ಇದಲ್ಲದೆ ರಾಜ್ಯದಲ್ಲಿಯ ಬೃಹತ್ ಮತ್ತು ಮಧ್ಯಮ ಯೋಜನೆಗಳಿಂದ ಮಾರ್ಚ್ ೨೦೦೦ದವರೆಗೆ ಸತ್ಯತಃ ನೀರಾವರಿ ಆಗಿರುವ ಕ್ಷೇತ್ರ ಕೇವಲ ೪.೫೩ ಲಕ್ಷ ಹೆಕ್ಟೇರು. ಬಳಸಿದ ಜಲ ಕೇವಲ ೨೪೯ ಟಿ.ಎಂ.ಸಿ.

*(ಆಧಾರ : ನೀರಾವರಿ ಇಲಾಖೆಯ 'ಇರಿಗೇಷನ್ ಇನ್ ಕರ್ನಾಟಕ' ಎಂಬ ಪ್ರಕಟಿತ ಗ್ರಂಥ, ೧೯೯೯-೨೦೦೦)*

**ಸಮಸ್ಯೆಗಳು**

ಈ ಮೇಲೆ ಗುರುತಿಸಿರುವ ಅಂಕಿಗಳಿಂದ ನಮ್ಮ ನೀರಾವರಿ ಕಾರ್ಯಕ್ಷಮತೆ ಎಷ್ಟು ಕೀಳುಮಟ್ಟದಲ್ಲಿದೆ ಎಂಬುದು ಎದ್ದು ಕಾಣುತ್ತದೆ. ಬೃಹತ್ ಮತ್ತು ಮಧ್ಯಮ ಪರಿಯೋಜನೆಗಳ ಅಂತಿಮ ಸಾಮರ್ಥ್ಯದ ಕೇವಲ ಅರ್ಧಭಾಗ ಸಾಧಿಸಲಾಗಿದೆ. ಇದುವರೆವಿಗೆ ಪಡೆದಿರುವ ಸಾಮರ್ಥ್ಯದಲ್ಲಿ ಅರ್ಧಕ್ಕಿಂತಲೂ ಕಡಿಮೆ ಕ್ಷೇತ್ರದಲ್ಲಿ ನೀರಾವರಿ ಆಗುತ್ತಿದೆ. ನೀರಾವರಿ ಆಗುತ್ತಿರುವ ಕ್ಷೇತ್ರದ ಅಂಕಿ ಮತ್ತು ಅದರ ವಿರುದ್ಧವಾಗಿ ಸಾಧಿಸಿರುವ ಕ್ಷೇತ್ರದ ಅಂಕಿ ನೋಡಿದರೆ ನಮ್ಮ ಇದುವರೆಗಿನ ಯೋಜನೆಗಳು ಎಷ್ಟು ಕೀಳಾಗಿ ಫಲಿತಗೊಂಡಿವೆ ಎಂಬುದು ಸ್ಪಷ್ಟವಾಗುತ್ತದೆ. ನಮ್ಮ ರಾಜ್ಯದ ಭೌಗೋಳಿಕ ಕ್ಷೇತ್ರದಲ್ಲಿ ಕೇಂದ್ರೀಯ ಜಲ ಆಯೋಗದ ಪ್ರಕಟಣೆಯ ಪ್ರಕಾರ (೧೯೮೪) ಸುಮಾರು ಶೇ. ೭೯ರಷ್ಟು ಭೂಮಿ ಬರಗಾಲ ಪೀಡಿತವೆಂದು ಘೋಷಿಸಲಾಗಿದೆ. ರಾಷ್ಟ್ರಮಟ್ಟದಲ್ಲಿ ಇದು ಅಗ್ರಣಿ ಆಗಿದೆ (ಎರಡನೆಯ ಸ್ಥಾನ ತಮಿಳುನಾಡಿನದು). ಇದಿಷ್ಟು ಗಾತ್ರದ ಭೂಮಿ ಕೃಷ್ಣಾ ಮತ್ತು ಕಾವೇರಿ ಜಲಾನಯನಗಳ ಕ್ಷೇತ್ರದಲ್ಲೇ ಪೂರ್ಣವಾಗಿ ಆವರಿಸಿದೆ.

ಇದುವರೆವಿಗೆ ಸಾಧಿಸಲಾಗಿರುವ ಸಾಮರ್ಥ್ಯದಲ್ಲಿ ಅರ್ಧಕ್ಕೂ ಕಡಿಮೆ ಕೃಷ್ಣಾ ಮತ್ತು ಕಾವೇರಿ ಕ್ಷೇತ್ರಗಳಲ್ಲಿ ನೀರಾವರಿ ಕ್ಷೇತ್ರಕ್ಕೆ ಸೇರಿದ್ದರೂ ಸಾಧಾರಣವಾಗಿ ಕೀಳುದರ್ಜೆಯಲ್ಲಿರುವುದಕ್ಕೆ ಕಾರಣಗಳು ಅನೇಕ. ಮುಖ್ಯವಾಗಿ –

೧. ಯೋಜನೆಗಳನ್ನು ಪೂರ್ಣಗೊಳಿಸುವುದಕ್ಕೆ ಅತ್ಯಧಿಕ ವಿಳಂಬ ಮತ್ತು ಧನವ್ಯಯದಲ್ಲಿ ಹತೋಟಿಯಿಲ್ಲದಿರುವುದು.
೨. ಹಂತಹಂತದಲ್ಲಿರುವ ಸರ್ಕಾರಿ ಕರ್ಮಚಾರಿಗಳಿಗೆ ನಿಗದಿತ ಜವಾಬ್ದಾರಿ ಸ್ಪಷ್ಟೀಕರಿಸದೆ ಇರುವುದು ಮತ್ತು ಪದೇ ಪದೇ ರಾಜಕೀಯ ಪ್ರಕ್ಷೇಪಣೆಗಳಿಂದಾಗುವ ವರ್ಗಾವಣೆಗಳು.
೩. ಒಳ್ಳೆಯ ಕೆಲಸಗಾರರಿಗೆ ಬಹುಮಾನ ನೀಡುವ ಮತ್ತು ಕೆಡಿಸಿರುವ ಕೆಲಸಗಾರರಿಗೆ ಶಿಕ್ಷೆ ನೀಡುವ ಒಂದು ವ್ಯವಸ್ಥೆಯಿಲ್ಲದಿರುವುದು.
೪. ಯಾರಿಗೂ ಉತ್ತರದಾಯಿತ್ವವಿಲ್ಲದಿರುವುದು.
೫. ಯೋಜನೆಯ ತಪ್ಸೀಲು ಪ್ರಕಾರ ಸರ್ಕಾರ ಧನ ಒದಗಿಸದೆ ಇರುವುದು.
೬. ಯೋಗ್ಯ ಮತ್ತು ಸಶಕ್ತ ವ್ಯಕ್ತಿಗಳನ್ನು ಮುಖ್ಯ ಪದವಿಗಳಲ್ಲಿ ನೇಮಿಸದೇ ಇರುವುದು. ಪದವಿಯುಕ್ತಿಯಲ್ಲಿ ಅಧೀನವಾಗಿರುವವರು ಬೇಕೆಂಬ ಆಸಕ್ತಿಯಿಂದ ನೇಮಕ ಮಾಡುವುದು.
೭. ರಾಜಕೀಯ ಉದ್ದೇಶಗಳಿಂದ ಯೋಜನೆಯ ಕಾರ್ಯಕ್ರಮದಲ್ಲಿ ಅಡ್ಡಿ ಒಡ್ಡುವುದು.
೮. ಅಣೆಕಟ್ಟೆಗೆ ಹೆಚ್ಚು ಮಹತ್ವ ಮತ್ತು ಗಮನ ಕೊಟ್ಟು ಭೂಮಿಗೆ ನೀರು ಒದಗಿಸುವ

ಕಿರುಗಾಲುವೆಯಂತಹ ಸಣ್ಣ ಕಾರ್ಯಗಳನ್ನು ನಿರ್ಲಕ್ಷಿಸುವುದು. ಏಕೆಂದರೆ ಇವುಗಳಲ್ಲಿ ಹಣದ ವಹಿವಾಟು, ಅಣೆಕಟ್ಟಿನ ಹಣದ ವಹಿವಾಟಿಗಿಂತ ಬಹಳ ಕಡಿಮೆ.

೯. ನೀರು ಬಳಕೆದಾರರನ್ನು ಮತ್ತು ಸಂಬಂಧಿಸಿದ ಜನಹಿತಾಸಕ್ತರನ್ನು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡದಿರುವುದು.

ಹೀಗೆಯೇ ವಿಶದವಾಗಿ ಪರಿಶೀಲಿಸುತ್ತಾ ಹೋದರೆ ಇನ್ನೂ ಅನೇಕ ಅಂಶಗಳು ಗಮನಕ್ಕೆ ಬರಬಹುದು. ಇವುಗಳೆಲ್ಲಾ ಬಹುತೇಕ ಜನಗಳಿಗೆ ತಿಳಿದ ವಿಷಯವಾದರೂ ಸರ್ಕಾರೀ ಕ್ಷೇತ್ರದಲ್ಲಿ ಗಮನಾರ್ಹ ಪರಿವರ್ತನೆ ಇನ್ನೂ ಸಾಕಷ್ಟು ಆಗಿಲ್ಲ. ಉದಾಹರಣೆಗೆ ಕೃಷ್ಣಾ ಮೇಲ್ದಂಡೆ ಯೋಜನೆ, ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳು, ಹೇಮಾವತಿ ಯೋಜನೆಗಳು ಸುಮಾರು ೪೦ ವರ್ಷಗಳಾದರೂ ಇನ್ನೂ ಪೂರ್ಣಗೊಂಡಿಲ್ಲ. ಯಾವಾಗ ಪೂರ್ಣವಾಗುತ್ತವೆ ಎಂಬುದನ್ನು ಕೂಡಾ ಇನ್ನೂ ಸರ್ಕಾರ ನಿಗದಿಪಡಿಸಿಲ್ಲ. ಏಕೆಂದರೆ ಸರ್ಕಾರ ಏನು ನಿಗದಿಮಾಡಿದರೂ ಅದು ಮುಂದುಮುಂದಕ್ಕೆ ಅನೇಕ ಕಾರಣಗಳಿಂದ ತಳ್ಳಲ್ಪಡುತ್ತಲೇ ಇರುತ್ತದೆ.

**ಭಾರೀ ಸಮಸ್ಯೆಗಳು**

**ಅ) ಕಾವೇರಿ ಜಲವಿವಾದ :** ಎಲ್ಲರಿಗೂ ಗೋಚರವಾಗಿರುವ ಕಾವೇರಿ ಜಲವಿವಾದ ತಮಿಳುನಾಡಿನೊಂದಿಗೆ ಸುಮಾರು ೧೫೦ ವರ್ಷಗಳಾದರೂ ಬಗೆಹರಿದಿಲ್ಲ. ಕಾವೇರಿ ನ್ಯಾಯಪೀಠ ಒಂದು ದಶಕಕ್ಕೂ ಹೆಚ್ಚು ಕಾಲ ಕಳೆದಿದ್ದರೂ ಇನ್ನೂ ನಿರ್ಣಯ ಕೊಡುವ ಸ್ಥಿತಿಯಲ್ಲಿಲ್ಲ. ಎಲ್ಲಿಯವರೆಗೆ ಈ ನ್ಯಾಯಪೀಠ ಆಸೀನವಾಗಿರುತ್ತದೆ ಎಂಬುವ ಸೂಚನೆಯೂ ಕಾಣುತ್ತಿಲ್ಲ. ಜೂನ್ ೧೯೯೧ರ ನ್ಯಾಯಪೀಠದ ತಾತ್ಕಾಲಿಕ ಆದೇಶ (ತಮಿಳುನಾಡಿನ ಪ್ರೇರೇಪಣೆಯಿಂದ) ನಮ್ಮ ರಾಜ್ಯಕ್ಕೆ ಎಷ್ಟು ಅನ್ಯಾಯವಾಗಿದೆ ಎಂಬುವ ವಿಷಯವನ್ನು ತಿಳಿಸಬೇಕಾದ ಪ್ರಮೇಯವೇ ಇಲ್ಲ. ಏಕೆಂದರೆ ಅದು ಎಲ್ಲರಿಗೂ ಹೆಚ್ಚು ಕಡಿಮೆ ಗೋಚರವಾದ ಅನ್ಯಾಯವಾಗಿಯೇ ಇನ್ನೂ ಉಳಿದಿದೆ. ಅಂತಿಮ ಆದೇಶದ ಕುರುಹೇ ಇನ್ನೂ ಕಾಣುತ್ತಿಲ್ಲ.

**ಆ) ಕೃಷ್ಣಾ ಜಲವಿವಾದ :** ಕೃಷ್ಣಾ ನದಿಯ ಜಲಹಂಚಿಕೆ ಬಚಾವತ್ ತೀರ್ಪಿನ ಅವಧಿ ಮೇ ೨೦೦೦ದಲ್ಲಿ ತೀರಿದ ನಂತರವೂ, ನಮ್ಮ ರಾಜ್ಯವು ಆ ತೀರ್ಪಿನ ಪ್ರಕಾರ ನಮ್ಮ ಪಾಲಿಗೆ ಬರುವ ಸುಮಾರು ೭೩೦ ಟಿ.ಎಂ.ಸಿ. ನೀರನ್ನು ಕೃಷ್ಣಾ ಮೇಲ್ದಂಡೆ ಯೋಜನೆಯ ವಿಳಂಬದಿಂದಾಗಿ ಬಳಸಿಕೊಂಡಿಲ್ಲ. ಇದುವರೆವಿಗೂ ಕೆಲವು ಅಂದಾಜಿನ ಪ್ರಕಾರ ೧೫೦ ಟಿ.ಎಂ.ಸಿ.ಗೂ ಕಡಿಮೆ ಬಳಕೆ ಆಗಿದೆ. ಆದರೆ ಅದೇ ಆಂಧ್ರಪ್ರದೇಶದ ಸರ್ಕಾರವು ತನ್ನ ಪಾಲು ೮೦೦ ಟಿ.ಎಂ.ಸಿ. ಗೂ ಮಿಗಿಲಾಗಿ ತೀರ್ಪಿನ ಅವಧಿ ಮುಗಿಯುವ ಮುಂಚೆಯೇ ಬಳಸುತ್ತಾ ಇದೆ. ಹೀಗಾಗಿ ಆ ಸರ್ಕಾರವು ಇನ್ನೂ ಹೆಚ್ಚಿನ ಜಲಪ್ರಮಾಣವನ್ನು ಬಳಸುವ ಕೆಲವು ಯೋಜನಾ ಕಾರ್ಯಕ್ರಮಗಳನ್ನು (ಕೇಂದ್ರ ಸರ್ಕಾರದ ಅನುಮತಿ ಇಲ್ಲದಿದ್ದರೂ) ಹಮ್ಮಿಕೊಂಡು ಮುಂದುವರೆಯುತ್ತಿದೆ. ಇದರ ಪರಿಣಾಮವಾಗಿ ಕೃಷ್ಣಾನದಿಗೆ ಅಡ್ಡಲಾಗಿ ನಿರ್ಮಾಣವಾಗುತ್ತಿರುವ ಆಲಮಟ್ಟಿ ಅಣೆಕಟ್ಟಿನ ಎತ್ತರ ಆರ್.ಎಲ್. ೫೨೪.೨೫ ಎಂ. ಯೋಜಿಸಿದ್ದಾದರೂ ಕೂಡ ರಾಷ್ಟ್ರದ ಪರಮಶ್ರೇಷ್ಠ ನ್ಯಾಯಾಲಯವು ನಮ್ಮ ರಾಜ್ಯಕ್ಕೆ ಅಣೆಕಟ್ಟಿನ ಮಟ್ಟ ಇಳಿಸಿ ಆರ್.ಎಲ್. ೫೧೯.೬೦ವರೆವಿಗೆ ತಡೆಹಾಕಿದೆ. ಈಗಾಗಲೇ ಆಂಧ್ರಪ್ರದೇಶ ರಾಜ್ಯದ ಸಂಗಡ ಒಂದು ದೊಡ್ಡ ವಿವಾದ ಈ ವಿಷಯದಲ್ಲಿ ಎದ್ದುನಿಂತಿದೆ. ಬಹುಶಃ ಮತ್ತೊಂದು ಹೊಸ ಕೃಷ್ಣಾ ಜಲವಿವಾದ ನ್ಯಾಯಪೀಠದ ಮುಂದೆ ಬರುವುದಕ್ಕೆ ಇದೊಂದು ನಾಂದಿ ಆಗುತ್ತಿದೆ. ಇದನ್ನು ಗಮನಿಸಿದರೆ ಕೃಷ್ಣಾನದಿಯ ಜಲಹಂಚಿಕೆ ಸಮರ್ಪಕವಾಗಿ ತೀರ್ಮಾನವಾಗುವುದಕ್ಕೆ ಇನ್ನೆಷ್ಟು ದಶಕಗಳು ಉರುಳಬೇಕೋ ಎಂಬುದು ಚರ್ಚೆಯ ವಿಷಯವಾಗಿ ನಿಂತಿದೆ. ಹೀಗಿರುವಲ್ಲಿ ನಮ್ಮ ರಾಜ್ಯದ ಅತಿದೊಡ್ಡ ಬರಗಾಲ ಪೀಡಿತ ಕೃಷ್ಣಾ ಪ್ರದೇಶ ಯಾವಾಗ ಸಮರ್ಪಕವಾಗಿ ಜಲ ಪಡೆಯುತ್ತದೆ ಅನ್ನುವ ಮಾತು ಕೇವಲ ಕನಸಾಗುವ ಪರಿಸ್ಥಿತಿಯೇ ಇನ್ನೂ ನಮ್ಮಲ್ಲಿದೆ.

**ಇ) ಮಹದಾಯಿ ನದಿಯ ಜಲವಿವಾದ :** ಉತ್ತರ ಕರ್ನಾಟಕದಲ್ಲಿ ಅವಶ್ಯಕವಿರುವ ಮಹದಾಯಿ ನದಿಯ ಜಲಹಂಚಿಕೆ ಗೋವಾ ರಾಜ್ಯದ ಸಂಗಡ ಇನ್ನೊಂದು ವಿವಾದಕ್ಕೆ ಆಸ್ಪದ ಮಾಡಿಕೊಟ್ಟಿದೆ. ಬರೀ ಮಾತುಕತೆಯೇ ಹೊರತು ಏನೊಂದೂ ಕಾರ್ಯಕ್ರಮವೂ ಶ್ರೀ ಗಣೇಶವಾಗಿಲ್ಲ. ಬಹುಶಃ ಗೋವಾ ರಾಜ್ಯದ ಒತ್ತಾಯದಿಂದ ಇನ್ನೊಂದು ನ್ಯಾಯಪೀಠ ಸ್ಥಾಪನೆಯಾಗುವವರೆಗೂ ಬೆಳಕು ಕಾಣುವಂತಿಲ್ಲವೇನೋ !

**ಈ) ಭೀಮಾನದಿಯ ಜಲವಿತರಣೆ ಸಮಸ್ಯೆ :** ಮಹಾರಾಷ್ಟ್ರ ರಾಜ್ಯದ ಸಂಗಡ ಈ ನದಿಯ ಜಲಹಂಚಿಕೆ ಬಗ್ಗೆ ಈಗಾಗಲೇ ಬಹಳ ಸಮಸ್ಯೆಗಳು ಎದ್ದು ಕಾಣುತ್ತಿವೆ.




ಪತ್ರಿಕೆಗಳಲ್ಲಿ ಈ ವಿಷಯವಾಗಿ ಬಹಳ ಸುದ್ದಿಗಳು ಪ್ರಕಟವಾಗಿವೆ. ಇನ್ನು ಮುಂದೆ ಇದೊಂದು ಜ್ವಲಂತ ಸಮಸ್ಯೆಯಾಗಿ ವರ್ಧಿಸುತ್ತದೆ. ಪ್ರಾಯಶಃ ಇದೊಂದು ದೊಡ್ಡ ವಿವಾದವಾಗಿ ಮಗದೊಂದು ಜಲವಿವಾದ ನ್ಯಾಯಪೀಠ ಅನಿವಾರ್ಯ ಆಗುತ್ತೆಂಬ ಆತಂಕ ಹೆಚ್ಚು ಹೆಚ್ಚಾಗುತ್ತಿದೆ.

**ಜಿಲ್ಲಾನ್ವಯ ಸಮಸ್ಯೆಗಳು**

ಇಂತಹ ಭಾರಿ ಸಮಸ್ಯೆಗಳಲ್ಲದೆ ಜಲವಿವಾದಕ್ಕೆ ಸಂಬಂಧಿಸಿದ ಸಮಸ್ಯೆಗಳು ಅಂತರರಾಜ್ಯಗಳಿಗೆ ಸೀಮಿತವಾಗಿರದೆ ಈಗ ಜಿಲ್ಲಾವಾರು ಸಮಸ್ಯೆಯಾಗಿಯೂ ತಲೆಯೆತ್ತುವ ಲಕ್ಷಣಗಳು ಕಾಣಬರುತ್ತಿವೆ. ಉದಾಹರಣೆಗೆ, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳ ನಡುವೆ ಕೃಷ್ಣರಾಜಸಾಗರದ ಜಲಹಂಚಿಕೆ ಸಂಬಂಧವಾಗಿ ಆಗಿಂದಾಗ್ಗೆ ಆಗುವ ಹೋರಾಟ. ಹೀಗೆಯೇ ಮುಂದೆ ಹೇಮಾವತಿ ಜಲಾಶಯದ ಜಲಹಂಚಿಕೆ ಹಾಸನ ಮತ್ತು ತುಮಕೂರು ಜಿಲ್ಲೆಗಳ ಮಧ್ಯೆ ವಿವಾದಾಸ್ಪದವಾಗಿ ಸಮಸ್ಯೆ ಏಳಬಹುದು. ಮುಂಬರುವ ದಿನಗಳಲ್ಲಿ ಸನ್ನಿವೇಶ ಹೇಗೆ ಕೂಡಿಬರುತ್ತದೆಯೆಂದು ಕಾದುನೋಡಬೇಕಾಗಿದೆ.

**ಪರಿಹಾರಗಳೇನಾದರೂ ಇವೆಯೇ ?**

ಲೇಖನದ ಮೊದಲಲ್ಲಿಯೇ ಪಶ್ಚಿಮಕ್ಕೆ ಹರಿಯುವ ನದಿಗಳ ಜಲಪ್ರಮಾಣ ಸುಮಾರು ೨೦೦೦ ಟಿ.ಎಂ.ಸಿ. ಇದೆ ಎಂದು ಸೂಚಿಸಲಾಗಿದೆ. ಮೊದಲೇ ತಿಳಿಸಿದಂತೆ ಇಷ್ಟು ದೊಡ್ಡ ಪ್ರಮಾಣದ ಜಲವನ್ನು ನಮ್ಮದೇ ರಾಜ್ಯದಲ್ಲಿ (ಬೇರೆ ಯಾವ ಪಕ್ಕದ ರಾಜ್ಯಕ್ಕೆ ಸಂಬಂಧವಿಲ್ಲದಿದ್ದರೂ) ನಾವು ಇದುವರೆವಿಗೆ ಎಳ್ಳಷ್ಟೂ ಉಪಯೋಗಕ್ಕೆ ತಂದಿಲ್ಲ ಮತ್ತು ಆ ಬಗ್ಗೆ ಗಾಢವಾಗಿ ಯೋಚಿಸಿಲ್ಲ. ಕಾವೇರಿ ಮತ್ತು ಕೃಷ್ಣಾನದಿಗಳಿಗಿಂತ ಹೆಚ್ಚಿನ ಪ್ರಮಾಣದ ಜಲ ನಮ್ಮ ರಾಜ್ಯದ ಅಡಿಯಲ್ಲಿದ್ದರೂ ಅದನ್ನು ನಾವೇಕೆ ಉಪಯೋಗಕ್ಕೆ ತರಲಿಲ್ಲ ? ಕೆಲವು ತಜ್ಞರ ಪ್ರಕಾರ ಪಶ್ಚಿಮ ಘಟ್ಟದಲ್ಲಿರುವ ನದಿಗಳ ಜಲವನ್ನು ಪೂರ್ವಾಭಿಮುಖವಾಗಿ ಎತ್ತರಮಟ್ಟದ ಮೈದಾನ ಸೀಮೆಯಲ್ಲಿರುವ ಕಾವೇರಿ ಮತ್ತು ಕೃಷ್ಣಾ ಕ್ಷೇತ್ರಗಳಿಗೆ ತಿರುಗಿಸುವುದು

ಭೌತಿಕವಾಗಿ ಅಸಾಧ್ಯ. ಆ ಕಾರಣದಿಂದಾಗಿಯೇ ಈ ವಿಷಯದಲ್ಲಿ ಸರಕಾರ ಯಾವ ಯೋಜನೆಯನ್ನೂ ಸಿದ್ಧಗೊಳಿಸಿಲ್ಲ. ಯಾವುದಾದರೊಂದು ಯೋಜನೆ ಸಿದ್ಧಗೊಳಿಸಿ ಕಾರ್ಯಗತಗೊಳಿಸುವ ಪ್ರಶ್ನೆ ಸರಕಾರಕ್ಕೆ ಅಗೋಚರವಾಗಿಯೇ ಇದೆ.

ಪಶ್ಚಿಮಘಟ್ಟ ಕ್ಷೇತ್ರದಲ್ಲಿ (ಕರಾವಳಿಯಲ್ಲಿ) ದೊಡ್ಡ ಜಲಾಶಯಗಳನ್ನು ಇಲ್ಲಿರುವ ನದಿಗಳಿಗೆ ಅಡ್ಡಲಾಗಿ ಕಟ್ಟಿ, ಶೇಖರಿಸಿದ ಜಲವನ್ನು ಪಂಪ್ ಪ್ರಣಾಲಿಯ ಮೂಲಕ ಪೂರ್ವಕ್ಕೆ ತಿರುಗಿಸುವುದು ಯಾಂತ್ರಿಕ ಪದ್ಧತಿಯ ಪ್ರಕಾರ ಆಗಮಾಡಬಹುದಾದರೂ ಇದರ ವಿರುದ್ಧವಾಗಿ ಅತಿ ತೊಡಕು ಸಮಸ್ಯೆಗಳು ಎದ್ದೇಳುವುದರಿಂದ ಇದಕ್ಕೆ ಪರಿಹಾರ ಕಾಣುವ ಸ್ಥಿತಿ ಇಲ್ಲ. ಏಕೆಂದರೆ,

೧. ಕರಾವಳಿಯ ಕಾಡುಮೇಡುಗಳ ಜೈವಿಕ ವೈವಿಧ್ಯತೆ ಅತಿ ಸೂಕ್ಷ್ಮ ಮತ್ತು ಇದನ್ನು ನಷ್ಟಪಡಿಸುವುದರಿಂದ ಪರಿಸರಕ್ಕೆ ಅತಿದೊಡ್ಡ ಹಾನಿಯಾಗುವುದು.
೨. ಈ ಕ್ಷೇತ್ರದಲ್ಲಿ ಕಾಫಿ, ಅಡಿಕೆ, ಮೆಣಸು ಮತ್ತು ಇತರ ಆರ್ಥಿಕ ಲಾಭದ ತೋಪುಗಳು ಸೊಂಪಾಗಿ ತಲೆತಲಾಂತರಗಳಿಂದ ಖಾಸಗಿ ನಿಯಂತ್ರಣದಲ್ಲಿವೆ.
೩. ಈ ಮೇಲಿನ ಎರಡು ಪ್ರದೇಶಗಳನ್ನು ಜಲಾಶಯಗಳನ್ನು ನಿರ್ಮಿಸಿ ಮುಳುಗಿಸುವುದಾದರೆ ಅಲ್ಲಿನ ಯಾವ ಜನರೂ ಅದಕ್ಕೆ ಸಮ್ಮತಿಸುವುದಿಲ್ಲ. ಅದಲ್ಲದೆ ಪರಿಸರಕ್ಕೆ ಧಕ್ಕೆಯಾಗುತ್ತದೆ.
೪. ಇನ್ನು ಮುಂದೆ ಯಾವ ಯೋಜನೆಗಳನ್ನೂ ಜನಗಳ ಸಹಕಾರ, ಪಾಲ್ಗೊಳ್ಳುವಿಕೆ ಇಲ್ಲದೆ ಸರಕಾರ ಕೈಗೆತ್ತಿಕೊಂಡು ಅಧಿಕಾರ ಚಲಾಯಿಸುವುದು ಅಸಂಭವ ಮತ್ತು ಹಾಗೆ ಆಗಲೂಬಾರದು.
೫. ಒಂದುವೇಳೆ ಜಲಾಶಯಗಳನ್ನೇನಾದರೂ ನಿರ್ಮಿಸಿದರೂ ಆ ಜಲವನ್ನು ಪೂರ್ವಾಭಿಮುಖ ಮಾಡುವುದಕ್ಕೆ ಬಹುದೊಡ್ಡ ಪ್ರಮಾಣದಲ್ಲಿ ಪಂಪ್‌ಗಳಿಂದ ನೀರೆತ್ತಲು ವಿದ್ಯುಚ್ಛಕ್ತಿ ಬೇಕಾಗುತ್ತದೆ. ಆದರೆ ಅಷ್ಟು ದೊಡ್ಡ ಪ್ರಮಾಣದ ವಿದ್ಯುಚ್ಛಕ್ತಿ ಒದಗಿಸುವುದು ನಮ್ಮ ರಾಜ್ಯ ಸರ್ಕಾರದ ಶಕ್ತಿಗೆ ಮೀರಿದ್ದು. ಏಕೆಂದರೆ ಈಗಾಗಲೇ ನಮ್ಮ ಅವಶ್ಯಕತೆಗೆ ಅನುಗುಣವಾಗಿ ವಿದ್ಯುತ್ ಸರಬರಾಜು ಮಾಡುವ ಕ್ಷಮತೆ ಸರಕಾರಕ್ಕೆ ಇನ್ನೂ ಬಂದಿಲ್ಲ. ಬರುವುದಕ್ಕೆ ದಶಕಗಳಾದರೂ ಬೇಕು. ಏಕೆಂದರೆ, ಆ ವೇಳೆಗೆ ಹೆಚ್ಚುತ್ತಿರುವ ಕೃಷಿ ಮತ್ತು ಕೈಗಾರಿಕಾ ಘಟಕಗಳ ಅವಶ್ಯಕತೆ ಇನ್ನೂ ಹೆಚ್ಚುತ್ತಲೇ ಇರುತ್ತದೆ. ಈ ಮಧ್ಯೆ ಪಂಪ್ ಪ್ರಣಾಲಿಗೆ ಬೇಕಾಗುವ ವಿದ್ಯುತ್‌ಶಕ್ತಿಯನ್ನು ಒದಗಿಸುವ ಪ್ರಶ್ನೆಯೇ ಬಹುದೂರ.

**ಒಂದು ಆಶಾಕಿರಣ**

ದೊಡ್ಡ ದೊಡ್ಡ ಜಲಾಶಯಗಳನ್ನು ಕಟ್ಟಿ, ವನಪ್ರದೇಶವನ್ನು ಮುಳುಗಿಸುವ ಮತ್ತು ತಲೆತಲಾಂತರದಿಂದ ವಾಸಿಸುತ್ತಿರುವ ಜನರನ್ನು ಸ್ಥಳಾಂತರಿಸುವ ವಿಷಯ ಬಹಳ ಗಹನವಾದ್ದು. ಕರಾವಳಿಯ ಘಟ್ಟದ ಮೇಲೊಂದು ಸಣ್ಣ ಕೆರೆ ಕಟ್ಟಿ, ಘಟ್ಟದ ಕೆಳಗೆ ಒಂದು ಸಣ್ಣ ಕೆರೆಯನ್ನು ನಿರ್ಮಿಸಿ ಅವೆರಡನ್ನೂ ಭೂಮಿಗತ (Penstocks) ಕೊಳವೆಗಳಿಂದ ಜೋಡಿಸಿ, ಕೆಳಗಿನ ಮಟ್ಟದ ಕೆರೆಯ ಹತ್ತಿರ ಭೂಮಿಗತ ವಿದ್ಯುತ್‌ಶಕ್ತಿ ಗೃಹ (underground powerhouse) ನಿರ್ಮಿಸಿ ಅದರಲ್ಲಿ ತಿರುಗು ಮುರುಗು ವಿದ್ಯುತ್ ತಥಾ ಪಂಪ್ ಯಂತ್ರಗಳನ್ನು (reversible motor turbine) ಜೋಡಿಸಿದರೆ ಪಶ್ಚಿಮಕ್ಕೆ ಹರಿಯುವ ನದಿಗಳ ಜಲವನ್ನು ಪೂರ್ವಕ್ಕೆ ತಿರುಗಿಸಿ ಕಾವೇರಿ, ಹೇಮಾವತಿ, ತುಂಗಾ, ಭದ್ರಾ, ವರದಾ ನದಿಗಳ ಉಗಮಸ್ಥಾನಕ್ಕೆ ಜೋಡಿಸಲು ಸಾಧ್ಯ. ಹೀಗೆ ಪಶ್ಚಿಮ ವಾಹಿನಿಗಳನ್ನು ಬಳಸಬಹುದು.

ಮೇಲೆ ಹೇಳಿದಂತೆ ಜೋಡಿಸಿದರೆ ಮಳೆಗಾಲದಲ್ಲಿ ಪ್ರಪಾತವಾಗಿ ಹರಿಯುವ ಎಲ್ಲಾ ಪಶ್ಚಿಮವಾಹಿನಿ ನದಿ ಮತ್ತು ಹೊಳೆಗಳ ಸಾಕಷ್ಟು ಪ್ರಮಾಣದ ಜಲವನ್ನು ಪೂರ್ವಕ್ಕೆ ಹರಿಯುವಂತೆ ಮಾಡಬಹುದು. ಈ ಎಲ್ಲಾ ಸಾಧನಗಳು ಭೂಮಿಗತವಾಗಿರುವುದರಿಂದ ಪರಿಸರಕ್ಕೆ ಏನೂ ನಷ್ಟ ಉಂಟುಮಾಡುವುದಿಲ್ಲ. ಇದಲ್ಲದೆ ಸಣ್ಣ ಕೆರೆಗಳ ನಿರ್ಮಾಣದಿಂದ ಯಾವ ವನಗಳು, ತೋಪುಗಳು ಮುಳುಗುವುದು ಅಥವಾ ಜನರ ವಿಸ್ಥಾಪನೆ ಆಗುವ ಸಮಸ್ಯೆಗಳು ಉತ್ಪನ್ನವಾಗುವುದಿಲ್ಲ. ಒಂದು ವೇಳೆ ಅಲ್ಲೊಂದು ಇಲ್ಲೊಂದು ವನ ಪ್ರದೇಶ ನದಿಗಳ ಅಂಗಳದಲ್ಲಿದ್ದರೆ, ಅವು ನಗಣ್ಯವಾಗಿಯೇ ಇರುತ್ತವೆ.

ಮಳೆಗಾಲದಲ್ಲಿ ಕೆಳಮಟ್ಟದ ಕೆರೆ ಬೇಗ ತುಂಬುವುದರಿಂದ ಅದರ ಜಲವನ್ನು ರಾತ್ರಿಯ ವೇಳೆ ಅಂದರೆ ವಿದ್ಯುತ್‌ಶಕ್ತಿಯ ಅವಶ್ಯಕತೆ ಬಹಳ ಕಮ್ಮಿ ಇರುವ ಸಮಯದಲ್ಲಿ ತಿರುಗು ಮುರುಗು ಯಂತ್ರದಿಂದ ಪಂಪ್‌ಮಾಡಿ ಮೇಲಿನ ಕೆರೆಗೆ ತುಂಬಬಹುದು. ಹಾಗೆ ತುಂಬಿದ ಮೇಲಣ ಕೆರೆಯನ್ನು ಪೂರ್ವಾಭಿಮುಖ ಮೈದಾನದ ನದಿ ಮೂಲಗಳಿಗೆ ಜೋಡಿಸಿದರೆ ಸಾಕಷ್ಟು ಜಲವನ್ನು ಹರಿಸಬಹುದು. ಹೀಗೆ ಮಾಡಿದರೆ ನಮ್ಮ ರಾಜ್ಯದ ಕಾವೇರಿ ಮತ್ತು ಕೃಷ್ಣಾ ಪ್ರದೇಶಗಳ ಬರಗಾಲ ಪೀಡಿತ ಪ್ರದೇಶಕ್ಕೆ ನೀರಿನ ಹೊಳೆಯನ್ನೇ ಹರಿಸಬಹುದು. ಹೀಗಾದರೆ ಎಲ್ಲೆಲ್ಲೂ ಸಮೃದ್ಧಿ ಉಂಟಾಗುವುದಲ್ಲದೆ ಪಕ್ಕದ ರಾಜ್ಯಗಳಿಗೂ ನಮ್ಮ ಅವಶ್ಯಕತೆಗೆ ಮೀರಿ ಉಳಿದ ನೀರನ್ನು ಕೊಡಲು ನಾವು ಶಕ್ತರಾಗಬಹುದು. ಮೈದಾನ ಪ್ರದೇಶದ ಎಲ್ಲಾ ಸ್ಥಿತ ಬೃಹತ್ ಮಧ್ಯಮ ಮತ್ತು ಸಣ್ಣ ಜಲಾಶಯಗಳನ್ನು ತುಂಬಲು ಖಾತರಿ ಮಾಡಬಹುದು. ತಿರುಗು ಮುರುಗು ಯಂತ್ರದಿಂದ ದಿನದ ವೇಳೆಯಲ್ಲಿ ಮೇಲಿನ ಕೆರೆಯ ನೀರನ್ನು ಕೆಳಗಿನ ಕೆರೆಗೆ ಹಾಯಿಸಿದರೆ ಶಿಖರ ಪ್ರಮಾಣದ (ಪೀಕಿಂಗ್ ಪವರ್) ವಿದ್ಯುತ್ ಶಕ್ತಿಯನ್ನು ಉತ್ಪಾದಿಸಿ ದಿನದಲ್ಲಿ ಆಗುವ ವಿದ್ಯುತ್‌ಶಕ್ತಿಯ ಕೊರತೆಯನ್ನು ನೀಗಿಸಬಹುದು. ಇದರಿಂದ ರಾತ್ರಿಯಲ್ಲಿ ಕೃಷಿಗೆ ಸರಬರಾಜು ಮಾಡುವುದನ್ನು ತಪ್ಪಿಸಿ ದಿನದಲ್ಲಿ ಕೃಷಿಕರಿಗೆ ಸರಬರಾಜು ಮಾಡಿದರೆ ಅವರಿಗೆ ಆರ್ಥಿಕ ಅನುಕೂಲವಾಗಿ ಎರಡರಷ್ಟು ಬೆಳೆಯನ್ನು ಬೆಳೆದು ಉತ್ಪನ್ನ ಮಾಡಬಹುದು. ಆಗ ಕೃಷಿಕರೂ ಕೂಡ ವಿದ್ಯುತ್ ಶಕ್ತಿಯ ದರವನ್ನು ನಿಗದಿಸಿದಂತೆ ಕೊಡಲು ಶಕ್ತರಾಗಬಲ್ಲರು.

ತಾಪಗೃಹದಲ್ಲಿ ಉತ್ಪನ್ನವಾಗುವ (ಕಲ್ಲಿದ್ದಲು ಮತ್ತು ಆಣವಿಕ ವಿದ್ಯುತ್ ಗೃಹಗಳು) ಹಾಗೂ ಒಂದೇ ಸಮನೆ ಹರಿಯುವ ವಿದ್ಯುತ್‌ಶಕ್ತಿಯನ್ನು ಈ ತಿರುಗು ಮುರುಗು ಪಂಪ್ ತಥಾ ವಿದ್ಯುತ್ ಉತ್ಪನ್ನ ಸಣ್ಣ ಜಲಾಶಯ ಯೋಜನೆಗಳಿಗೆ (reversible pump storage schemes) ಉಚಿತವಾಗಿ ಉಪಯೋಗಿಸಬಹುದು.

ಈಗಾಗಲೇ ಪಾಶ್ಚಾತ್ಯ ದೇಶಗಳಲ್ಲಿ ಸುಮಾರು ಆರು ದಶಕಗಳಿಂದಲೂ ಈ ಪದ್ಧತಿ ಚಾಲನೆಯಲ್ಲಿದೆ. ಸುಮಾರು ೪೦೦ಕ್ಕೂಹೆಚ್ಚು ಇಂತಹ ಯೋಜನೆಗಳಿವೆ. ಸಧ್ಯದಲ್ಲಿ ಚೀನಾ ದೇಶ ಈ ಪ್ರಣಾಲಿಯನ್ನು ಅವಲಂಬಿಸಿ ಬಹುದೊಡ್ಡ ತಿರುಗು ಮುರುಗು ಯೋಜನೆಗಳ ನಿರ್ಮಾಣದಲ್ಲಿ ಅಗ್ರಣಿಯಾಗಿದೆ. - ನಮ್ಮ ದೇಶದಲ್ಲಿ ಬೇರೆ ರಾಜ್ಯಗಳ ಒಂದೆರಡು ಕಡೆಗಳಲ್ಲಿ ಇಂತಹ ಪ್ರಕ್ರಿಯೆ ಆರಂಭವಾಗಿದೆ ಮತ್ತು ನಿರ್ಮಾಣಾವಸ್ಥೆಯಲ್ಲಿದೆ.

**ಸಮಾರೋಪ**

ಮೇಲೆ ಸೂಚಿಸಿರುವ ಆಶಾಕಿರಣವನ್ನು ವಿಶದಗೊಳಿಸಬೇಕೆಂದರೆ ಅದೇ ಒಂದು ದೊಡ್ಡ ಲೇಖನವಾಗುತ್ತದೆ. ಸ್ಥಳಾವಕಾಶ ಮತ್ತು ಸಮಯಾವಕಾಶದ ಕೊರತೆಯಿಂದ ಈ ವಿಷಯವನ್ನು ಇಲ್ಲಿಗೆ ಮುಕ್ತಾಯಗೊಳಿಸಲಾಗಿದೆ. ಆದರೂ ಕೂಡ ನಮ್ಮ ರಾಜ್ಯದ ನೀರಾವರಿ ಸಮಸ್ಯೆಗಳು ಮತ್ತು ವಿದ್ಯುತ್ ಶಕ್ತಿಯ ಕೊರತೆಯನ್ನು ನೀಗಿಸಲು ಈ ಆಶಾಕಿರಣವನ್ನು ಮಹತ್ತಾಗಿ ಬೆಳಗಿಸಿದರೆ, ಅದೇ ದೊಡ್ಡ ಪರಿಹಾರವಾಗಬಲ್ಲದು. ಇದಕ್ಕೆ ಧೀಮಂತರು, ಬುದ್ಧಿಶಾಲಿಗಳು, ತಜ್ಞರು, ರಾಜಕಾರಣಿಗಳು ಮತ್ತು ಜನಹಿತೋಪಾಸಕರು ಒಗ್ಗೂಡಿ ಕಾರ್ಯನಿರತರಾಗ ಬೇಕು. ಇದಕ್ಕೆ ಸರಕಾರದಿಂದಲೇ ಪೂರ್ತಿ ಹಣ ಒದಗಿಸಬೇಕಾಗಿಲ್ಲ. ಕರಾವಳಿಯ ಒಂದೊಂದು ಉಪಯುಕ್ತ ಸ್ಥಳದಲ್ಲಿ ಕಟ್ಟು, ಬಳಸು, ಭೋಗ್ಯಕ್ಕೆ ಬಿಡು ಮತ್ತು ವರ್ಗಾಯಿಸು (build, operate, lease, transfer = BOLT) ಪ್ರಣಾಲಿಯಂತೆ ಖಾಸಗಿ ಸಂಸ್ಥೆಗಳಿಗೆ ಬಿಟ್ಟುಕೊಟ್ಟರೆ ಅವರೇ ವಿದ್ಯುತ್‌ಶಕ್ತಿ ಮತ್ತು ಜಲವನ್ನು, ಜಲ ಮತ್ತು ವಿದ್ಯುತ್‌ಶಕ್ತಿ ಕೊಳ್ಳುವ ಕರಾರು ಮೂಲಕ ಒದಗಿಸಬಹುದು. ಮಹಾರಾಷ್ಟ್ರ ಈ ಪದ್ಧತಿಯನ್ನು ಅವಲಂಬಿಸಿದೆ. ಈ ವಿಧಾನದಿಂದ ಎಲ್ಲಾ ಪಶ್ಚಿಮಾಭಿಮುಖ ಹರಿವ ನದಿಗಳನ್ನು ಬಳಸಿದರೆ ಪಕ್ಕದ ರಾಜ್ಯಗಳ ಜೊತೆಗೆ ನಡೆಯುತ್ತಿರುವ ಜಲವಿವಾದಗಳು ಕರಗಿಹೋಗುವಂತೆ ಮಾಡುವ ಸಾಮರ್ಥ್ಯ ನಮಗೆ ಬರುತ್ತದೆ.

ಈಗಿನ ಪರಿಸ್ಥಿತಿಗೆ ಬುದ್ಧಿಬಲ ಮತ್ತು ದಕ್ಷತೆ ಹಾಗೂ ಧೈರ್ಯದಿಂದ ಕೂಡಿದ ರಾಜನೀತಿ ಮುಂದೆ ಬರಬೇಕು ಮತ್ತು ವಿಷಮವಾಗುತ್ತಿರುವ ಜಲದ ಕೊರತೆಗಳನ್ನು ನಿವಾರಿಸಿ ನಿಯಂತ್ರಿಸಬೇಕು. ಇದಕ್ಕೆ ರಾಜ್ಯದ ಜಲನೀತಿ, ಭೂನೀತಿ ಮತ್ತು ಊರ್ಜಾನೀತಿ (energy policy)ಗಳನ್ನು ಒಂದಕ್ಕೊಂದು ಕೂಡಿಸಿ ರಾಜ್ಯದ ಸಂಪನ್ಮೂಲಗಳನ್ನು ವಿಕಸಿಸಿ, ಸಮೃದ್ಧಿಯ ದೆಶೆಗೆ ಹೆಜ್ಜೆ ಹಾಕಬೇಕು. ಸರಕಾರದ ನೀತಿನಿಯಮಗಳು ಮತ್ತು ವಿಭಾಗಗಳ ರಚನೆಯಲ್ಲಿ ಬಹು ಚುರುಕಾದ ಮಾರ್ಪಾಡಾಗಬೇಕು. ಇಷ್ಟೆಲ್ಲಾ ಆದರೆ ಕಲ್ಯಾಣ; ಇಲ್ಲದಿದ್ದರೆ ನರಕಯಾತನೆ ದೂರವಿಲ್ಲ.

**ಬಿ. ಎಸ್. ಭವಾನಿಶಂಕರ್**
ನಂ. ೭೬, ೭ನೇ ಮೇನ್, ೪ನೇ ಕ್ರಾಸ್, ಕೆ.ಎಸ್.ಆರ್.ಟಿ.ಸಿ. ಲೇಔಟ್
ಜೆ.ಪಿ.ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮

# ಸಂಸ್ಕೃತಿ, ಸಾಮಾಜಿಕತೆ ಮತ್ತು ಭಾಷಿಕ ಅಸ್ತಿತ್ವ

ರಾಮಲಿಂಗಪ್ಪ ಟಿ. ಬೇಗೂರು

**ಭಾಷೆ**, ಸಂಸ್ಕೃತಿ ಮತ್ತು ಸಮಾಜ ಈ ಮೂರೂ ಪ್ರತ್ಯೇಕ ಘಟಕಗಳೆಂಬಂತೆ ತೋರಿದರೂ ಇವು ಪ್ರತ್ಯೇಕ ಅಥವಾ ಸ್ವತಂತ್ರ ಘಟಕಗಳಲ್ಲ. ಭಾಷೆಯು ಸಂಸ್ಕೃತಿಯ-ಸಮಾಜದ ಜ್ಞಾನದ ಮೊತ್ತವಾದರೆ, ಒಂದು ಸಾಂಸ್ಕೃತಿಕ ಮಾನವ ಸಮುದಾಯವೇ ಸಮಾಜವಾಗಿರುತ್ತದೆ. ಯಾವುದೇ ಭಾಷೆ ಅಥವಾ ಸಂಸ್ಕೃತಿಯ ಅಸ್ತಿತ್ವ ಇರುವುದೇ ಅವುಗಳ ಸಾಮಾಜಿಕತೆಯಲ್ಲಿ. ಜನಮುಖಿತ್ವ, ಪ್ರಾಯೋಗಿಕತೆ, ಪ್ರಯುಕ್ತತೆಗಳು ಯಾವುದೇ ಭಾಷೆ ಅಥವಾ ಸಂಸ್ಕೃತಿಗೆ ಇದ್ದಾಗಲೇ ಅವುಗಳಿಗೆ ಸಾಮಾಜಿಕ ಆಯಾಮವೂ ಇರುತ್ತದೆ. ಇಲ್ಲವಾದರೆ ಆ ಭಾಷೆ ಅಥವಾ ಸಂಸ್ಕೃತಿ ಕೇವಲ ಮೃತ ದಾಖಲೆಯಾಗಿರುತ್ತದೆ.

ಸಾಂಸ್ಕೃತಿಕತೆ ಮತ್ತು ಸಾಮಾಜಿಕತೆ ಎರಡೂ ಅಭಿನ್ನ. ಭಾಷೆ ಈ ಸಾಂಸ್ಕೃತಿಕತೆ ಅಥವಾ ಸಾಮಾಜಿಕತೆಯ ನಿರ್ಲಿಪಿಕ ಮತ್ತು ಲಿಪಿಕ ಶರೀರವಾಗಿರುತ್ತದೆ. ಸರಳವಾಗಿ ಹೇಳಬೇಕೆಂದರೆ ಭಾಷೆಯು ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಇದು ಇನ್ನಿತರ ಸಾಮಾಜಿಕ ಸಂಸ್ಥೆಗಳೊಂದಿಗೆ ನೀರಿನ ಗುಣದ ರೀತಿ ಹೊಂದಿಕೊಳ್ಳುತ್ತದೆ. ಹಾಗಾಗಿಯೇ ನಮ್ಮಲ್ಲಿ ವ್ಯಕ್ತಿ ಭಾಷೆ, ಕುಟುಂಬ ಭಾಷೆ, ಜಾತಿ ಭಾಷೆ, ಪ್ರದೇಶ ಭಾಷೆಗಳ ಜೊತೆಗೆ ರಾಜಕಾರಣ ಭಾಷೆ, ಶಿಕ್ಷಣದ ಭಾಷೆ, ಪತ್ರಿಕಾ ಭಾಷೆ, ಸಾಹಿತ್ಯ ಭಾಷೆ ಹೀಗೆ ಇದಕ್ಕೆ ಹತ್ತೆಂಟು ಸಾಮಾಜಿಕ ರೂಪಗಳಿವೆ. ಭಾಷೆಯು ಸಮಾಜದಲ್ಲಿ ಕೇವಲ ಒಂದು ಮಾಧ್ಯಮವಾಗಿ ಅಥವಾ ಸಾಧನವಾಗಿ ಮಾತ್ರ ವರ್ತಿಸುವುದಿಲ್ಲ, ಅದು ಸಮಾಜದ ಭಿನ್ನ ಘಟಕಗಳ ಸರಿಸುಮಾರು ಪ್ರತಿಬಿಂಬವೇ ಆಗಿ ವರ್ತಿಸುತ್ತದೆ.

ಯಾವುದೇ ಭಾಷೆಯ ಸ್ಥಿತಿಗತಿಯು ಅದರ ಸಾಮಾಜಿಕ ಸ್ಥಿತಿಗತಿಯೇ ಆಗಿರುತ್ತದೆ. ಯಾವುದೇ ಒಂದು ಸಮಾಜದಲ್ಲಿನ ಭಾಷಿಕ ಶ್ರೇಣೀಕರಣಕ್ಕೂ, ಆರ್ಥಿಕ ಶ್ರೇಣೀಕರಣಕ್ಕೂ ಮತ್ತು ಸಾಂಸ್ಕೃತಿಕ ಶ್ರೇಣೀಕರಣಕ್ಕೂ ಒಂದು ಅವಿನಾಭಾವ ಸಂಬಂಧ ಇರುತ್ತದೆ. ಹಾಗೆಯೇ ಯಾವುದೇ ಭಾಷಿಕ ಹೋರಾಟವು ಸಾಮಾಜಿಕ - ಸಾಂಸ್ಕೃತಿಕ ಹೋರಾಟವೇ ಆಗಿರುತ್ತದೆ. ರಾಜಕಾರಣ, ಆಡಳಿತ, ರೀತಿನೀತಿ, ತತ್ವಜ್ಞಾನ, ಶಿಕ್ಷಣ, ಸಾಹಿತ್ಯ ಇತ್ಯಾದಿ ಸಮಾಜವೊಂದರ ಪ್ರಮುಖ ಅಂಗಗಳಲ್ಲಿನ ಬಿಕ್ಕಟ್ಟು - ವಿಕಾರ - ಸೌಂದರ್ಯ - ಸಮೃದ್ಧಿ ಎಲ್ಲವೂ ಭಾಷಿಕ ಬಿಕ್ಕಟ್ಟು - ಸಮೃದ್ಧಿಗಳಲ್ಲಿ ಪ್ರತಿಬಿಂಬಿಸುತ್ತಿರುತ್ತದೆ. ಏಕೆಂದರೆ ಈ ಎಲ್ಲವನ್ನೂ ನಾವು ಭಾಷಿಕ ಶರೀರದ ಮೂಲಕವೇ ಪರಿಭಾವಿಸುವ ಇಲ್ಲವೇ ನಿರ್ವಚಿಸುವ ಕೆಲಸವನ್ನು ಮಾಡುತ್ತಿರುತ್ತೇವೆ.




**ಅಂತಸ್ತು ಮತ್ತು ಭಾಷೆ** : ಭಾಷೆಗೂ ಅಂತಸ್ತಿಗೂ ಇರುವ ಸಂಬಂಧವನ್ನು ವ್ಯಕ್ತಪಡಿಸುವ ಒಂದು ಚಿಕ್ಕ ಸರ್ವೇಕ್ಷಣೆಯ ವಿವರ ಹೀಗಿದೆ. ಸರ್ವೇಕ್ಷಣೆಯಲ್ಲಿ ಮಾತನಾಡಿಸಿದ ಪ್ರತಿಶತ ನಾಲ್ಕರಷ್ಟು ಜನ ಇಂಗ್ಲಿಷನ್ನು ಚೆನ್ನಾಗಿ ಮಾತನಾಡಬಲ್ಲವರಾಗಿದ್ದು ಇವರು ಮೇಲ್ವರ್ಗದವರಾಗಿದ್ದರು. ಪ್ರತಿಶತ ಎಂಟರಷ್ಟು ಜನ ಸ್ವಲ್ಪ ಸ್ವಲ್ಪ ಇಂಗ್ಲಿಷ್ ಮಾತನಾಡಬಲ್ಲ ಆದರೆ ಅರ್ಥಮಾಡಿಕೊಳ್ಳಬಲ್ಲವರಾಗಿದ್ದು ಇವರು ಮಧ್ಯಮ ವರ್ಗದವರಾಗಿದ್ದರು. ಇನ್ನು ಮಿಕ್ಕುಳಿದ ಪ್ರತಿಶತ ೮೮ರಷ್ಟು ಮಂದಿ ಇಂಗ್ಲಿಷ್ ಮಾತನಾಡದವರಾಗಿದ್ದು ಇವರು ಕೆಳವರ್ಗದ ಜನರಾಗಿದ್ದರು.

ಇದರಿಂದ ಕಂಡುಬಂದ ಸಂಗತಿಯೆಂದರೆ ನಮ್ಮಲ್ಲಿ ಸಾಮಾಜಿಕ - ಆರ್ಥಿಕ ಅಂತಸ್ತಿಗೂ ಮತ್ತು ಇಂಗ್ಲಿಷ್ ತಿಳಿವಳಿಕೆಗೂ ನೇರ ಸಂಬಂಧವಿದೆ ಎಂಬುದು. ಇಲ್ಲಿ ಪ್ರತಿಶತ ೮೮ರಷ್ಟು ಇಂಗ್ಲಿಷ್ ತಿಳಿಯದವರಲ್ಲಿ ಪ್ರತಿಶತ ೭೪ರಷ್ಟು ಮೊದಲಬಾರಿಗೆ ಅಕ್ಷರ ಕಲಿತ ಪೀಳಿಗೆಯವರಾಗಿದ್ದರು ಮತ್ತು ಜೀವನೋಪಾಯಕ್ಕಾಗಿ ಕೃಷಿ ಆಧರಿಸಿದ ಕುಟುಂಬದವರಾಗಿದ್ದರು. ಇವರು ಇಂಗ್ಲಿಷ್ ಕಲಿಯಲು ಪಡುತ್ತಿರುವ ಪರಿಪಾಟಲುಗಳಲ್ಲಿ ಇಂಗ್ಲಿಷ್ ವ್ಯಾಮೋಹ ಮತ್ತು ಹೇಗಾದರೂ ಇಂಗ್ಲಿಷ್ ಕಲಿಯಬೇಕೆಂಬ ಆಸೆ ಎದ್ದು ಕಾಣುತ್ತಿತ್ತು. ಇದಕ್ಕೆ ಕಾರಣಗಳು ಈ ಕೆಳಗಿನ ಇವರ ನಂಬಿಕೆಗಳೇ ಆಗಿದ್ದವು.

೧. ಭಾಷೆ ಜ್ಞಾನದ ಮೊತ್ತವಾಗಿದೆ. ೨. ಇಂಗ್ಲಿಷ್ ಕಲಿತರೆ ಸಮಾಜದಲ್ಲಿ ಗೌರವ ಸಿಗುತ್ತದೆ. ೩. ಇಂಗ್ಲಿಷ್ ಕಲಿತರೆ ಉದ್ಯೋಗ ಸಿಗುತ್ತದೆ ಮತ್ತು ಶ್ರೀಮಂತರಾಗಬಹುದು. ೪. ಇಂಗ್ಲಿಷ್ ಮಾತನಾಡುವವರು ಬುದ್ಧಿವಂತರು.

ಈ ರೀತಿಯ ನಂಬಿಕೆಗಳು ಜನರಲ್ಲಿ ಹುಟ್ಟಲು ಕಾರಣವೇನು ? ಯಾವುದೇ ಜನನಂಬಿಕೆ ಜನಾಚರಣೆಯೇ ಆಗಿರುತ್ತದೆ ಎಂಬುದನ್ನು ನಾವು ಮರೆಯುವಂತಿಲ್ಲ. ಹಾಗಾಗಿ ಕನ್ನಡಿಗರ ಇಂಗ್ಲಿಷ್ ವ್ಯಾಮೋಹವು ಈ ನಂಬಿಕೆಗಳ ಹಿಂದಿನ ಕಾರ್ಯಕಾರಣ-ಪರಿಣಾಮದ ಸಂಬಂಧ ಶೋಧನೆಯ ಮೂಲಕ ಚರ್ಚಿತವಾಗಬೇಕಿದೆ.

**ಪ್ರಭುತ್ವ ಮತ್ತು ಭಾಷೆ**

ಪ್ರಭುತ್ವವು ಭಾಷೆ, ಸಾಹಿತ್ಯ, ಧರ್ಮ, ಜೀವನ ವಿಧಾನ, ಜನನಂಬಿಕೆ ಇವೆಲ್ಲದರ ಮೇಲೆ ತನ್ನದೇ ಯಾಜಮಾನ್ಯವನ್ನು ಹೇರುತ್ತದೆ. ಬ್ರಿಟಿಷ್ ಕಾಲನಿಯಾಗಿ ಭಾರತ ಇಂಥ ಬಹುಮುಖೀ ಸಾಂಸ್ಕೃತಿಕ ಯಜಮಾನಿಕೆಗೆ ಎರಡು ಶತಮಾನಗಳಷ್ಟು ಕಾಲ ಒಳಪಟ್ಟಿತ್ತು. ಬ್ರಿಟಿಷರಿಂದ ರಾಜಕೀಯ ಸ್ವಾತಂತ್ರ್ಯವನ್ನು ಪಡೆದ ನಂತರವೂ ಸಾಂಸ್ಕೃತಿಕ ದಾಸ್ಯದಿಂದ ಹೊರಬರಲು ಇಂದಿಗೂ ಹೆಣಗುತ್ತಿದ್ದೇವೆ. ಸಾಮ್ರಾಜ್ಯಶಾಹಿ ಮತ್ತು ಊಳಿಗಮಾನ್ಯ ಈ ಎರಡೂ ನೆಲೆಗಳಲ್ಲಿ ದಮನಕ್ಕೊಳಗಾದ ನಮ್ಮ ಸಮಾಜವು ವೈದಿಕ ಮತ್ತು ಸಂಸ್ಕೃತಗಳ ಯಜಮಾನಿಕೆಯಿಂದ ಬಂಡವಾಳಶಾಹಿ ಮತ್ತು ಇಂಗ್ಲಿಷಿನ ಯಜಮಾನಿಕೆಗೆ ವರ್ಗಾಯಿಸಲ್ಪಟ್ಟಿದೆ. ಎಲ್ಲ ರೀತಿಯಿಂದಲೂ ಸಾಂಸ್ಕೃತಿಕವಾಗಿ ಇಂಗ್ಲಿಷೇ ಶ್ರೇಷ್ಠ ಎಂಬ ತನ್ನ ನಂಬಿಕೆಯನ್ನು ನಮ್ಮ ಅಲ್ಪಸಂಖ್ಯಾತ ಲಿಪಿಕ ಸಮುದಾಯವು ಬಹುಸಂಖ್ಯಾತ ನಿರ್ಲಿಪಿಕ ಸಮುದಾಯಕ್ಕೆ ಅನ್ವಯಿಸುತ್ತದೆ. ಇಂದು ಇದೊಂದು ರಾಷ್ಟ್ರೀಯ ಬಿಕ್ಕಟ್ಟೇ ಆಗಿದೆ.

ಆಡಳಿತದಲ್ಲಿ ಯಾವ ಭಾಷೆ ಇರುತ್ತದೋ ಆ ಭಾಷೆಯ ಯಾಜಮಾನ್ಯ ಅಳ್ವಿಕೆಗೊಳಪಟ್ಟಿರುವ ಭಾಷೆ (ಸಂಸ್ಕೃತಿ)ಯ ಮೇಲೆ ಅಗಾಧ ಪರಿಣಾಮವನ್ನು ಬೀರುತ್ತದೆ. ಆಡಳಿತ ವರ್ಗಕ್ಕೆ ಪ್ರವೇಶ ಬಯಸುವ ಎಲ್ಲ ದೇಸೀ ಪ್ರತಿಭೆಗಳನ್ನು ಆಡಳಿತ ಭಾಷೆಯು ತನ್ನಂತೆ ಆಗುವಂತೆ ಒತ್ತಾಯಿಸುತ್ತದೆ. ಗತ್ಯಂತರವಿಲ್ಲದೆ ಉಳಿವು ಮತ್ತು ಬೆಳೆವಿಗಾಗಿ ದೇಸೀಯು ಪ್ರಭುತ್ವವನ್ನು ಅನುಕರಿಸುವ, ಜೀರ್ಣಿಸಿಕೊಳ್ಳುವ ಪ್ರಯತ್ನ ಮಾಡುತ್ತದೆ. ಹೀಗಾಗಿಯೇ ನಮ್ಮ ಕನ್ನಡ ಇಂದು ಪ್ರಭುತ್ವದ ನೆಲೆಯಿಂದ ಉಂಟಾಗುತ್ತಿರುವ ಭಾಷಿಕ (ಸಾಂಸ್ಕೃತಿಕ) ಒತ್ತಾಯಗಳನ್ನು ಜೀರ್ಣಿಸಿಕೊಳ್ಳಲು ಹೆಣಗುತ್ತಿದೆ. ಮೂರ್ತವಾಗಿದ್ದ ಬ್ರಿಟಿಷ್ ಪ್ರಭುತ್ವವನ್ನು ಉಚ್ಚಾಟಿಸಿದರೂ ಇಂದು ಅಮೂರ್ತವಾಗಿರುವ

ಬಂಡವಾಳಶಾಹಿ ನವಪ್ರಭುತ್ವದ ಎದುರು ಹೋರಾಟದ ದಿಕ್ಕುಗಳನ್ನು ಹುಡುಕಾಡುತ್ತಿದೆ. ಈ ದೃಷ್ಟಿಯಿಂದ ಆಡಳಿತ ಭಾಷೆಯಾಗಿ ಕರ್ನಾಟಕದಲ್ಲಿ ಕನ್ನಡವನ್ನು ತರುವುದೆಂದರೆ ಆಡಳಿತದಲ್ಲಿ ಕನ್ನಡಿಗರನ್ನು ತರುವುದು ಎಂಬ ತೀರ್ಮಾನವೊಂದೇ ಇಂದು ಪರಿಹಾರ ಮಾರ್ಗವಲ್ಲ. ಏಕೆಂದರೆ, ಕರ್ನಾಟಕವೂ ಸೇರಿದಂತೆ ಯಾಜಮಾನ್ಯಕ್ಕೆ ಸಿಲುಕಿರುವ ಎಲ್ಲ ಭಾಷೆ ಸಂಸ್ಕೃತಿಗಳೂ ತಮ್ಮ ಆಡಳಿತಗಾರರನ್ನೇ ನಿಯಂತ್ರಿಸುವ ಜಾಗತಿಕ ಬಂಡವಾಳ, ಜಾಗತಿಕ ಮಾರುಕಟ್ಟೆ ಜಾಲವನ್ನೇ ಎದುರಿಸಬೇಕಾದ ಸ್ಥಿತಿಯಿಂದು ನಿರ್ಮಾಣವಾಗಿದೆ.

ಯಾವಾಗ ಸಮಾಜ ಸುಧಾರಣೆಯ ನೀತಿಗಳು ವಿದೇಶೀ ಕೈಯಿಂದ ನಿರ್ಣಯಗೊಳ್ಳುತ್ತವೋ ಆಗ ಈ ನೆಲದ ಭಾಷೆ-ಸಂಸ್ಕೃತಿಯ ಬೇಡಿಕೆಗಳು ನಿರ್ಲಕ್ಷ್ಯಕ್ಕೆ ಒಳಗಾಗಿ ಜಾಗತಿಕ ಬೇಡಿಕೆಯ ಮೂಲಮಾದರಿಗಳೇ ನಮ್ಮನ್ನು ಆಳತೊಡಗುತ್ತವೆ. ಇಂಥ ಸಂದರ್ಭದಲ್ಲಿ ಐ.ಎಂ.ಎಫ್. ಸಾಲ, ಡಬ್ಲ್ಯುಟಿಒ ಒಪ್ಪಂದ - ಮುಕ್ತವ್ಯಾಪಾರ, ವಿದೇಶಿ ದೇಣಿಗೆಗಳಿಗೂ ಮತ್ತು ಕನ್ನಡ ಭಾಷೆ ಸಂಸ್ಕೃತಿಯ ಉಳಿವಿಗೂ ನೇರ ಸಂಬಂಧವಿದೆ ಎಂಬುದನ್ನು ನಾವು ತಿಳಿಯಬೇಕಾಗಿದೆ. ಹೀಗಾಗಿ ನಮ್ಮ ಭಾಷೆ-ಸಂಸ್ಕೃತಿಯ ಸಾಮಾಜಿಕ ಆಯಾಮವು ರಾಜಕೀಯ ಇಚ್ಛಾಶಕ್ತಿ ಮತ್ತು ನೀತಿ ನಿರ್ಣಯ ಹಂತದಲ್ಲಿ ಸ್ಪಷ್ಟೀಕರಣ ಪಡೆಯಬೇಕಾಗಿದೆ.

ನೀತಿ ನಿರ್ಣಯದ ಹಂತದಲ್ಲಿ ಆಡಳಿತ ವರ್ಗವು ಹೇಗೆ ವರ್ತಿಸಬೇಕು ಎಂಬುದಕ್ಕೆ ನಮಗೆ ಜಪಾನ್ ಒಂದು ಮಾದರಿಯಾಗಿದೆ. ಜಪಾನಿ ಭಾಷೆಯ ಸಾಫ್ಟ್‌ವೇರನ್ನು ಮಾತ್ರ ಕೊಳ್ಳುತ್ತೇವೆ ಎಂಬ ಆ ಸರ್ಕಾರದ ಇತ್ತೀಚಿನ ನಿರ್ಧಾರ ಇಲ್ಲಿ ಉಲ್ಲೇಖಾರ್ಹ.

**ಲಿಪಿಕ ಮತ್ತು ನಿರ್ಲಿಪಿಕ**

ಭಾಷಿಕ ಸಮಾಜವು ಬಹಳ ಹಿಂದಿನಿಂದಲೂ ಲಿಪಿಕ ಮತ್ತು ನಿರ್ಲಿಪಿಕವೆಂದು ಎರಡು ಭಿನ್ನ ಕವಲುಗಳಾಗಿ ಅಸ್ತಿತ್ವದಲ್ಲಿ ಇದ್ದುದ್ದು ನಮಗೆ ತಿಳಿದಿದೆ. ಲಿಪಿಕ ಸಮುದಾಯಕ್ಕೆ ಲಿಪಿಯೇ ಒಂದು ಆಯುಧವೂ, ಶ್ರೇಷ್ಠತೆಯ ಸಂಕೇತವೂ, ಶೋಷಣೆಯ ಸಾಧನವೂ ಆಗಿ ಬಳಕೆಯಾಗಿರುವುದನ್ನು ನಾವು ಬಲ್ಲೆವು. ನಿರ್ಲಿಪಿಕ ಸಮುದಾಯವು ಲಿಪಿಯ ಅಧಿಕೃತತೆಯನ್ನು ಮುಗ್ಧವಾಗಿ ಒಪ್ಪಿ ಕೀಳರಿಮೆಯಿಂದ, ಹೇರಲ್ಪಟ್ಟ ನಂಬಿಕೆಗಳಿಂದ, ನರಳಿದೆ. ಲಿಪಿಕ ಸಮುದಾಯದ ಶ್ರೇಣೀಕರಣವೂ ಆಯಾ ಸಮುದಾಯದ ಭಾಷೆಯ ಲಿಪಿ ಶರೀರದ ಅಗಾಧತೆಗನುಗುಣವಾಗಿ ನಡೆದಿದೆ. ಯಾವ ಭಾಷೆಗೆ ಹೆಚ್ಚು ಹೆಚ್ಚು ಜ್ಞಾನ ಶಿಸ್ತುಗಳನ್ನು ಲಿಪೀಕರಿಸಿಕೊಂಡ ಹಿನ್ನೆಲೆ ಇದೆಯೋ ಆ ಭಾಷೆ ಶ್ರೇಷ್ಠವೆಂದೂ ಲಿಪಿ ಶರೀರ ಕೃಶವಾಗಿರುವ ಭಾಷೆ ಅಧೀನವೆಂದೂ ಸಾಂಪ್ರದಾಯಿಕವಾಗಿ ನಡೆದುಬಂದಿದೆ. ಕನ್ನಡ ಸಂಸ್ಕೃತಗಳೇ ಇದಕ್ಕೆ ಉದಾಹರಣೆ. ಈ ಭಾಷಾ ಶ್ರೇಣೀಕರಣಕ್ಕೂ ಮತ್ತು ಸಾಮಾಜಿಕ - ಸಾಂಸ್ಕೃತಿಕ ಶ್ರೇಣೀಕರಣಕ್ಕೂ ಏನೂ ವ್ಯತ್ಯಾಸವಿರುವುದಿಲ್ಲ. ಹಾಗೆ ಇದು ಶಿಷ್ಟ - ದೇಸೀ, ಪ್ರಧಾನ - ಉಪ ಇಂಥ ಭೇದಗಳಿಗೂ ಕಾರಣವಾಗುತ್ತದೆ.

ನಮ್ಮ ಬಹುಪಾಲು ದೇಸೀ ದಂಗೆಗಳು ಈ ಸಾಮಾಜಿಕ - ಸಾಂಸ್ಕೃತಿಕವಾದ ಅಸಮಾನ ಶ್ರೇಣೀಕರಣದ ವಿರುದ್ಧ ಸೆಣಸುವಾಗ ಶಿಷ್ಟ ಸಮುದಾಯದ ಲಿಪಿ ಶರೀರವನ್ನು ಮತ್ತು ಅದರ ಮೌಲ್ಯ ವ್ಯವಸ್ಥೆಯನ್ನು ಛಿದ್ರೀಕರಿಸುವತ್ತ ತನ್ನದೇ ಆದ ಲಿಪಿ ಶರೀರವನ್ನು ಮತ್ತು ಪ್ರತಿ ಮೌಲ್ಯ ವ್ಯವಸ್ಥೆಯನ್ನು ಲಿಪಿ ಶರೀರದ ಮೂಲಕವೇ ಕಟ್ಟುವ ಕೆಲಸವನ್ನೂ ಮಾಡುತ್ತಿರುತ್ತದೆ.

ವೇದ ಉಪನಿಷತ್ತು ಪುರಾಣಗಳ ಲಿಪಿ ಶರೀರವೇ ತನ್ನ ಅಂತಸ್ತಿನ ಸಂಕೇತವೆಂದು ಮೆರೆಯುವ ವೈದಿಕ ಸಮುದಾಯದೆದುರು ವೀರಶೈವವು ವೇದ ಪುರಾಣಗಳನ್ನು ನಿರಾಕರಿಸುತ್ತಲೇ ತನ್ನದೇ ವಚನವೆಂಬ ಪ್ರತಿವೇದವನ್ನೂ ರಗಳೆ ಪುರಾಣಗಳನ್ನೂ ಸೃಷ್ಟಿಸಿದೆ. ಉದಾಹರಣೆಗೆ, ಹರಿಹರನ ಕೋಳೂರ ಕೊಡಗೂಸಿನ ರಗಳೆ ಒಂದು ವೀರಶೈವ ಪುರಾಣವೇ ಆಗಿದೆ. (ಹರಿಹರನ ಎಲ್ಲ ರಗಳೆಗಳನ್ನೂ ಒಟ್ಟು ಸೇರಿಸಿದರೆ ಅದೊಂದು ವೀರಶೈವ ಮಹಾಪುರಾಣವಾಗುತ್ತದೆಂಬುದು ನನ್ನ ನಂಬಿಕೆ). ಇದು ಆಶ್ರಮ ಧರ್ಮವನ್ನು ಪಾಲಿಸದ ಕೂಸೊಬ್ಬಳಿಗೆ (ಹೆಣ್ಣು) ಕೈಲಾಸ ಪ್ರಾಪ್ತಿ ನೀಡುವ ಮೂಲಕ ವೈದಿಕ ಮೋಕ್ಷ-ಭಕ್ತಿ ನಂಬಿಕೆಯನ್ನು ಛಿದ್ರಿಸುತ್ತದೆ.

ಭಾರತೀಯ ಭಕ್ತಿ ಚಳುವಳಿ ಧಾರ್ಮಿಕ ಸುಧಾರಣಾವಾದಿ ಚಳುವಳಿ - ದೇಸಿ. ದಂಗೆಗಳೆಲ್ಲವೂ ತಮ್ಮ ಸಾಮಾಜಿಕ - ಸಾಂಸ್ಕೃತಿಕ ಔನ್ನತ್ಯಕ್ಕೆ ಲಿಪಿಶರೀರವನ್ನು ಪ್ರಧಾನವಾಗಿ ಪ್ರತಿಷ್ಠಾಪಿಸಲು ಯತ್ನಿಸಿವೆ. ಭಾಷಿಕ ನೆಲೆಯಿಂದ ಇವುಗಳನ್ನು ನೋಡಿದರೆ ಈ ಹೋರಾಟಗಳು ನಿರ್ಲಿಪಿಕ ಬದುಕನ್ನು, ಚಿಂತನೆ, ಅನುಭವಗಳನ್ನು ಲಿಪೀಕರಿಸುವ ಹೋರಾಟಗಳಾಗಿ ಕಾಣಿಸುತ್ತವೆ. ಹಾಗೇ ಈ ಹೋರಾಟಗಳು ಇಂದು ಇಂಗ್ಲಿಷಿನೆದುರು ನಾವು ಸೆಣಸಬೇಕಾದ ಕೈಮಾರ್ಗಗಳೂ ಆಗಿವೆ. ಈ ಹಿನ್ನೆಲೆಯಲ್ಲಿ ನಿರ್ಲಕ್ಷಿತ ಜ್ಞಾನ ಸಮುದಾಯದ (ಶ್ರಮ ಸಮುದಾಯದ) ಲಿಪೀಕರಣವು ಕನ್ನಡ ಪ್ರತಿಷ್ಠಾಪನೆಗೆ ನಾವೀಗ ಅನುಸರಿಸಬಹುದಾದ ಒಂದು ಒಳ್ಳೆಯ ಮಾರ್ಗವಾಗಿದೆ.

ಆದಿ ಶ್ರುತಿಗಳು ವೇದವಾಗಲು (ಲಿಪಿಕವಾಗಲು) ತೊಡಗಿದ್ದು ಮತ್ತು ಇಂದು ಮೌಖಿಕ ಕಾವ್ಯಗಳು ಲಿಪೀಕರಣಗೊಳ್ಳಲು ತೊಡಗಿರುವುದು ಈ ಎರಡೂ ಒಂದೇ ರೀತಿಯ ಪ್ರಕ್ರಿಯೆಗಳಾಗಿವೆ. ಕನ್ನಡ ವಿ.ವಿ.ಯ ವೃತ್ತಿ ಪದಕೋಶ, ಮೌಖಿಕ ಪುರಾಣ-ಮಹಾಕಾವ್ಯಗಳ ಸಂಗ್ರಹಣೆ, ಅಕಾಡೆಮಿಯ ಉಪಸಂಸ್ಕೃತಿ ಮಾಲೆ, ಮೈಸೂರಿನ ಮತ್ತು ಉಡುಪಿಯ ಸಂಸ್ಥೆಗಳ ಭಾಷೆ ಹಾಗೂ ಜಾನಪದಕ್ಕೆ ಸಂಬಂಧಿಸಿದ ಕೆಲಸಗಳು, ಇಂದು ತೀವ್ರಗತಿಯಲ್ಲಿ ಸಾಗುತ್ತಿರುವ ಜಾನಪದ ಸಂಶೋಧನೆ ಮತ್ತು ಸಂಗ್ರಹಣಾ ಕಾರ್ಯಗಳಂತಹ ಸುತ್ತರ್ಹ ಕಾರ್ಯಗಳು ಇನ್ನಷ್ಟು ಆಗಬೇಕಿದೆ. ಶಿಷ್ಟ, ಪ್ರಧಾನ, ಮಾರ್ಗ, ವೈದಿಕ ಈ ಕಲ್ಪನೆಗಳ ಛಿದ್ರೀಕರಣ ಇನ್ನಷ್ಟು ಇದರಿಂದ ಸಾಧ್ಯವಾಗುತ್ತದೆ. ಹಾಗಾಗಿ ಲಿಪಿ ಶರೀರವನ್ನು ಕಟ್ಟುವ ಕಡೆ ನಾವಿಂದು ಹೆಚ್ಚು ಒತ್ತು ನೀಡಬೇಕಾಗಿದೆ.

**ಭಾಷೆ ಮತ್ತು ಶಿಕ್ಷಣ**

ಭಾಷೆ ಮತ್ತು ಶಿಕ್ಷಣದ ನಡುವಿನ ಸಂಬಂಧಗಳು ಇಂದು ಸಂಕೀರ್ಣವಾಗಿವೆ. ದೃಶ್ಯಮಾಧ್ಯಮ, ಕಂಪ್ಯೂಟರ್-ಇಂಟರ್‌ನೆಟ್‌ಗಳು ನಮ್ಮ ಶಿಕ್ಷಣ ಸ್ವರೂಪವನ್ನೇ ಬದಲಿಸುತ್ತಿವೆ. ಇಂಥ ಸಂದರ್ಭದಲ್ಲಿ ನಮ್ಮ ಶಿಕ್ಷಣದ ಚರಿತ್ರೆಯನ್ನು ಒಂಚೂರು ಅವಲೋಕಿಸುವುದು ಅಗತ್ಯವಾಗಿದೆ.

ಭಾರತೀಯ ಪರಂಪರೆಯಲ್ಲಿ ದೇಸಿ ಶಿಕ್ಷಣ ವಿಧಾನ ಮತ್ತು ಶಿಷ್ಟ ಶಿಕ್ಷಣ ವಿಧಾನ ಇವೆರಡರ ನಡುವೆ ಸ್ಪಷ್ಟ ವ್ಯತ್ಯಾಸಗಳಿದ್ದವು. ದೇಸಿಯಲ್ಲಿ ಕಲಿಕೆಯು ವಂಶಪಾರಂಪರ್ಯವಾಗಿ ಮನೆ ಮತ್ತು ಪ್ರಕೃತಿಗಳಲ್ಲೇ ನಡೆಯುತ್ತಿತ್ತು. ತಂದೆ ತಾಯಿ ಬಂಧುಗಳೇ ಇಲ್ಲಿ ಗುರುಗಳಾಗಿರುತ್ತಿದ್ದರು. ಇಲ್ಲಿ ಕಲಿಕೆ ಆರಂಭವಾಗುತ್ತಿದ್ದುದೇ ಪ್ರಾಯೋಗಿಕತೆಯಿಂದ. ಕಲಿಕೆಯ ತಾತ್ವಿಕ ವಿವರಣೆ ಮತ್ತು ಪ್ರಾಯೋಗಿಕತೆಯ ಪ್ರಾತ್ಯಕ್ಷಿಕ ಅನುಭವ ಎರಡೂ ಒಟ್ಟಿಗೇ ನಡೆಯುತ್ತಿದ್ದು, ತಾತ್ವಿಕ ವಿವರಣೆಯು ಆನುಷಂಗಿಕವೂ ಪ್ರಾಯೋಗಿಕತೆಯು ಪ್ರಧಾನವೂ ಆಗಿರುತ್ತಿತ್ತು. ಇಲ್ಲಿ ಬದುಕು ಮತ್ತು ಕಲಿಕೆಯ ನಡುವೆ ವ್ಯತ್ಯಾಸವೇ ಇಲ್ಲ. ನಿರ್ಲಿಪಿಕ ಸಮುದಾಯದ ಈ ದೇಸಿ ಕಲಿಕಾ ಪದ್ಧತಿಯಲ್ಲಿ ಜನರ ಜೀವನ ವಿಧಾನವೇ ಕಸುಬು, ಜ್ಞಾನ ಮತ್ತು ಪ್ರಯೋಗ ಆಗಿರುತ್ತಿತ್ತು.

ಆದರೆ ಶಿಷ್ಟದಲ್ಲಿ ಇದೆಲ್ಲ ತಿರುವು ಮುರುವು. ಇಲ್ಲಿ ತಾತ್ವಿಕ ವಿವರಣೆಗೆ ಪ್ರಾಧಾನ್ಯತೆ; ಪ್ರಾಯೋಗಿಕತೆ ಆನುಷಂಗಿಕವಾದದ್ದು. ಇಲ್ಲಿ ಜ್ಞಾನದ ಸಂವಹನವು ಲಿಪಿ ಮೂಲಕವೂ ಆಗುತ್ತಿರುತ್ತದೆ. ಮಾತು ಇಲ್ಲಿ ಜ್ಞಾನ ಮತ್ತು ಅನುಭವಗಳ ಸಂಕೇತೀಕರಣ ಎನಿಸಿಕೊಂಡರೆ ಲಿಪಿಯು ಇದರ ಮರು ಸಂಕೇತೀಕರಣ ಎನಿಸಿಕೊಳ್ಳುತ್ತದೆ. ದೇಸಿಯಲ್ಲಿ ಅನುಭವ ಮತ್ತು ಜ್ಞಾನಗಳು ಭಿನ್ನವಲ್ಲ ; ಅವು ಒಂದೇ.

ಶಿಕ್ಷಣವು ಆಧುನೀಕರಣಗೊಂಡಂತೆ ನಮ್ಮಲ್ಲಿ ಮೂರು ಮುಖ್ಯ ಪಲ್ಲಟಗಳಾದುವು.

೧. ತಾತ್ವಿಕತೆ ಮತ್ತು ಪ್ರಾಯೋಗಿಕತೆಗಳ ಬೇರ್ಪಡೆ

೨. ವಿದ್ಯೆಯ ತಾತ್ವೀಕರಣ

೩. ಜ್ಞಾನದ ಶಿಸ್ತೀಕರಣ

ಈ ಮೂರೂ ಪಲ್ಲಟಗಳು ಪರಸ್ಪರ ಸಂಬಂಧವುಳ್ಳವು. ವಿಕಾಸಶೀಲವಾದವು. ಈ ಮೂರನ್ನೂ ಒಟ್ಟಾಗಿಸಿ ನಮ್ಮ ಶಿಕ್ಷಣ ವಿಕಾಸವನ್ನು ಪ್ರಾಯೋಗಿಕ ಜ್ಞಾನಗಳ ಲಿಪೀಕರಣ ಪ್ರಕ್ರಿಯೆ ಅಥವಾ ಪ್ರಾಯೋಗಿಕತೆಯ ತಾತ್ವೀಕರಣ ಪ್ರಕ್ರಿಯೆ ಎನ್ನಬಹುದು. ಇದರ ಪರಿಣಾಮವಾಗಿ ಅಕ್ಷರಕ್ಕೆ ಅಧಿಕೃತತೆ, ಪ್ರಾಧಾನ್ಯತೆ ಒದಗಿತು. ಸಾಕ್ಷರರಿಗೆ ಅಂತಸ್ತು - ಗೌರವ - ಅರ್ಥ - ಉದ್ಯೋಗಗಳು ಪ್ರಾಪ್ತಿಯಾದವು. ಜ್ಞಾನದ ಭಾಷಿಕ ತರ್ಜುಮೆಗೆ ಪ್ರಾಶಸ್ತ್ಯ ದೊರಕಿತು. ಭಾಷಾ ರಾಜಕಾರಣದ ಕಾರಣಕ್ಕೆ ಜನಪದ ಜ್ಞಾನಧಾರೆಗಳು ಕೀಳೆಂದೂ ಗುರುಕುಲ ಜ್ಞಾನಧಾರೆಗಳು ಶ್ರೇಷ್ಠವೆಂದೂ ಬಿಂಬಿತವಾದವು. ಕಲಿಕೆ ಮತ್ತು ಪರೀಕ್ಷೆಗಳು ಶುದ್ಧಾಂಗವಾಗಿ ಭಾಷಿಕ ವ್ಯಾಪಾರ ಎಂಬಂತಾದವು. ಶ್ರಮ ಸಂಸ್ಕೃತಿ ಮತ್ತು ಆಶ್ರಮ ಸಂಸ್ಕೃತಿಗಳು ಕೀಳು ಮೇಲು ಎಂಬ ಶ್ರೇಣಿ ಪಡೆಯಲು ಅಕ್ಷರವೇ ಮೂಲಕಾರಣವಾಯಿತು. ಕರ್ಣಮೂಲ ಮತ್ತು ಕ್ರಿಯಾಮೂಲ ಶಿಕ್ಷಣವು ವರ್ಣಮೂಲವಾಗಿ ರೂಪ ಪಡೆಯಿತು.

ಸಮಾಜದ ಬಹುಸಂಖ್ಯಾತ ಜನವರ್ಗ (ಶೂದ್ರ ಮತ್ತು ಸ್ತ್ರೀ ವರ್ಗ) ಅಕ್ಷರ ವಂಚಿತವಾದ್ದರಿಂದ, ಈ ವರ್ಗದ ಜ್ಞಾನವು ಭಾಷಿಕ ತರ್ಜುಮೆಗೆ ಒಳಗಾಗಲಿಲ್ಲ. ಅನೇಕ ಜ್ಞಾನ ಶಿಸ್ತುಗಳು ಭಾಷಿಕ ಆಕೃತಿಯನ್ನು ಪಡೆಯದೇ ಹೋದವು. ಕುತೂಹಲವೆಂದರೆ ನಿರ್ಲಿಪಿಕರಲ್ಲಿ ಜ್ಞಾನವನ್ನು ಬಚ್ಚಿಡುವ ಆಚರಣೆ ಇದೆ. ಗಿಡಮೂಲಿಕೆ, ಪಶು ಚಿಕಿತ್ಸೆ,

ಮಾಟ-ಮಂತ್ರ, ಮದ್ದುಡಿ ಇತ್ಯಾದಿ ತಿಳಿವಳಿಕೆಗಳು ಹೀಗೆ ಬಚ್ಚಿಡುವ ಆಚರಣೆಯವಾಗಿವೆ. ಇಂಥ ಎಷ್ಟೋ ಜ್ಞಾನಧಾರೆಗಳು ಕೆಲವೊಮ್ಮೆ ವಾಂಶಿಕವಾಗಿಯೂ ರವಾನೆಯಾಗದೆ ನಷ್ಟಗೊಂಡಿವೆ. ಹೀಗಾಗಿ ಸಾಂಸ್ಕೃತಿಕ ಚರಿತ್ರೆಯಲ್ಲಿ ವರ್ಣ ಅಥವಾ ವರ್ಗ ಸಂಘರ್ಷವೂ ಹೆಚ್ಚು ಕಡಿಮೆ ಲಿಪಿಕ ಮತ್ತು ನಿರ್ಲಿಪಿಕ ಸಂಘರ್ಷವೇ ಆಗಿದೆ.

ಅಕ್ಷರದ ಯಾಜಮಾನ್ಯದಲ್ಲಿ ಬಹುಸಂಖ್ಯಾತ ಪಾರಂಪರಿಕ ಜ್ಞಾನ-ತಂತ್ರಜ್ಞಾನಗಳು ಜೀವ ನೀಗಿವೆ. ಆಂಗ್ಲ ದಾಳಿಯ ನಂತರವಂತೂ ಈ ಯಾಜಮಾನ್ಯವು ಏಕಸ್ವಾಮ್ಯವನ್ನು ಪಡೆಯುತ್ತಿದೆ. ರೆನೈಸಾನ್ಸ್ ನಂತರ ಆದ ಸಂಶೋಧನೆಗಳು ಹಾಗೂ ಜ್ಞಾನ ವಿಸ್ತರಣೆಗಳು ಕನ್ನಡಕ್ಕೆ ತಕ್ಕಷ್ಟು ತರ್ಜುಮೆಗೊಳ್ಳದೆ ಹೋಗಿ ಕನ್ನಡವು ಇಂಗ್ಲಿಷಿನ ಮುಂದೆ ಅಧೀನ ಸ್ಥಾನವನ್ನು ಪಡೆದಿದೆ. ಭಾಷಿಕ ಕೀಳರಿಮೆಯು ಸಾಂಸ್ಕೃತಿಕ ಕೀಳರಿಮೆಯೂ ಆಗಿ ರೂಪ ಪಡೆಯುತ್ತಿದೆ. ಆದ್ದರಿಂದ ಈಗಲಾದರೂ ನಮ್ಮ ಅಳಿದುಳಿದ ಪಾರಂಪರಿಕ ಜ್ಞಾನಗಳ (ಜ್ಞಾನಿಗಳ) ಶೋಧ ಆಗಬೇಕಿದೆ. ಇವುಗಳ ಭಾಷಿಕ ಆಕೃತಿಗಳು ಸಿದ್ಧಗೊಳ್ಳಬೇಕಿದೆ. ಯಾರು ಏನನ್ನಾದರೂ ಕನ್ನಡದ ಮೂಲಕ ಕಲಿಯಬಹುದು ಎಂಬಂತೆ ಕನ್ನಡದ ಭಾಷೆ ಶಕ್ತಗೊಳ್ಳಬೇಕಿದೆ. ಇದಕ್ಕೆ ಕೇವಲ ದೇಸೀಯ ಲಿಪೀಕರಣವಾದರೆ ಸಾಲದು. ವೈಶ್ವಿಕ ಜ್ಞಾನಗಳ ಲಿಪೀಕರಣವೂ ಆಗಬೇಕು. ಮೂರು ಹಂತಗಳಲ್ಲಿ ಈ ಕೆಲಸ ಮಾಡಬಹುದು.

೧. ನಿರ್ಲಕ್ಷಿತ ಜ್ಞಾನ ಶಿಸ್ತುಗಳ ಲಿಪೀಕರಣ, ೨. ವೈಶ್ವಿಕ ಜ್ಞಾನ ಶಿಸ್ತುಗಳ ಕನ್ನಡೀಕರಣ. ೩. ಕನ್ನಡ ಲಿಪಿಕ ಮತ್ತು ನಿರ್ಲಿಪಿಕ ಜ್ಞಾನ ಶಿಸ್ತುಗಳ ವೈಶ್ವೀಕರಣ.

ಈ ಮೂಲಕ ದೇಸೀ, ಸ್ವಾವಲಂಬಿ, ಸ್ವಾಭಿಮಾನಿ, ಐಡೆಂಟಿಟಿ ಚಿಂತನೆಗೆ ಸ್ವಲ್ಪ ಮಟ್ಟಿಗಾದರೂ ನ್ಯಾಯ ದೊರಕೀತು.

ನಮ್ಮ ಇಂದಿನ ಶಿಕ್ಷಣ ಪದ್ಧತಿಯು ಪರಂಪರೆಯ ಶಿಷ್ಟ ಶಿಕ್ಷಣ ಪದ್ಧತಿಯ ಮತ್ತು ಪಾಶ್ಚಾತ್ಯ ಶಿಕ್ಷಣ ಪದ್ಧತಿಯ ಮಿಶ್ರತಳಿಯಾಗಿದೆ. ಇಂದಿನ ನಮ್ಮ ಶಿಕ್ಷಣ ರಂಗದ ಸವಾಲುಗಳಲ್ಲಿ ದೇಸೀ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡುವುದರ ಜೊತೆಗೆ ದೇಸೀ ಕಲಿಕಾ ಪದ್ಧತಿಯನ್ನೂ ಶಿಕ್ಷಣ ವಿಧಾನವನ್ನಾಗಿ ಮಾಡಬೇಕಾದ ಅಗತ್ಯವಿದೆ. ಆಗ ದೇಸೀ ವಸ್ತು ಮತ್ತು ದೇಸೀ ಭಾಷೆ ಎರಡೂ ಉಳಿಯುತ್ತವೆ. ಇದರರ್ಥ ನಾವು ಆಧುನಿಕಗೊಳ್ಳಬಾರದು, ಪ್ರಾಚೀನತೆಗೆ ಗಂಟು ಬೀಳಬೇಕು ಎಂಬುದಲ್ಲ.

**ಲಿಪೀಕರಣ ಮತ್ತು ಸಮೂಹ ಮಾಧ್ಯಮ**

ದೃಶ್ಯ ಮಾಧ್ಯಮ ಮತ್ತು ಇಂಟರ್‌ನೆಟ್ ಜಾಲಗಳು ಇಂದು ಲಿಪೀಕರಣದ ಮೇಲೆ ಅಗಾಧ ಪರಿಣಾಮಗಳನ್ನು ಬೀರುತ್ತಿವೆ. ಟೆಲಿಗ್ರಾಫ್, ಟೆಲಿಫೋನ್, ಇ-ಮೇಲ್‌ಗಳು ಭಾಷಿಕ ರಚನೆ-ವ್ಯಾಕರಣಗಳ ಮೇಲೂ ಪರಿಣಾಮ ಬೀರುತ್ತಿವೆ. ದೃಶ್ಯ ಮಾಧ್ಯಮವು ಇಂದು ಲಿಪಿಕ ಮತ್ತು ನಿರ್ಲಿಪಿಕವೆಂಬ ಎರಡು ಭಾಷಿಕ (ಸಾಮಾಜಿಕ) ಅಸ್ತಿತ್ವಗಳ ಮೇಲೆ ಏಕಕಾಲಕ್ಕೆ ದಾಳಿಮಾಡುತ್ತಾ ಇವೆರಡರ ನಡುವಿನ ಭಿನ್ನತೆಗಳನ್ನು ಬದಲಿಸುತ್ತಿದೆ. ಇದರ ಜೊತೆಗೆ ಜಾಹೀರಾತು, ತಂತ್ರಜ್ಞಾನ ಮತ್ತು ಹೊಸ ವ್ಯಾಪಾರ ತಂತ್ರಗಳು ವ್ಯವಹಾರದ ನೆಲೆಯ ಒಂದು ಹೊಸ ಭಾಷಿಕ ರಚನೆಯನ್ನೇ ನಿರ್ಮಿಸುತ್ತಿವೆ. ಹೀಗಾಗಿ ಸಾಂಸ್ಕೃತಿಕ ದಾಳಿ ಹಾಗೂ ಯಾಜಮಾನ್ಯದ ಸ್ವರೂಪವು ಇಂದು ಬೇರೆಯೇ ಆಗುತ್ತಿರುವುದರಿಂದ ಶೋಷಿತ ಅಧೀನ ಸಮುದಾಯಗಳ ಹೋರಾಟದ ಸ್ವರೂಪವೂ ಬೇರೆಯಾಗಬೇಕಾದ ಅಗತ್ಯವಿದೆ.

ವಿಶ್ವಗ್ರಾಮ ಪ್ರಕ್ರಿಯೆಯಲ್ಲಿ ದೇಸೀ ಭಾಷೆ-ಸಂಸ್ಕೃತಿಗಳು ಶೋಕೇಸಿನ ಪೀಸುಗಳಾಗಿ, ಅಧ್ಯಯನ ವಸ್ತುಗಳಾಗಿ ಮಾರ್ಪಡುತ್ತಿವೆ. ಬಂಡವಾಳಶಾಹಿ ಭಾಷೆಯಾದ ಇಂಗ್ಲಿಷ್ ತನ್ನೆಲ್ಲಾ ಅಕ್ಷರ ಮತ್ತು ದೃಶ್ಯ ಸಾಧ್ಯತೆಗಳಿಂದ ನಿರ್ಲಿಪಿಕ ಮತ್ತು ಬುಡಕಟ್ಟು ಸಮಾಜಗಳ ಸಾಂಸ್ಕೃತಿಕ ಭಾಷಿಕ ಅನನ್ಯತೆಯನ್ನು ತನ್ನ ಜ್ಞಾನ ಭಂಡಾರದ ಸರಕಿನಂತೆ, ತನ್ನ ತಿಳಿವಳಿಕೆಯ ಪ್ರದರ್ಶನ ಸಾಧನದಂತೆ, ತನ್ನ ಅಂತಸ್ತಿನ ಕಿರೀಟದ ಗರಿಯಂತೆ ಬಾಚಿ ಬಳಸುತ್ತಿದೆ. ಫ್ರೆಂಚ್, ಜರ್ಮನ್, ಜಪಾನಿ, ಡ್ಯಾನಿಷ್, ರಷ್ಯನ್ ಇಂಥ ಸಮೃದ್ಧ ಆರ್ಥಿಕ ಬೆನ್ನೆಲುಬುಳ್ಳ ಭಾಷೆ ಮತ್ತು ಸಂಸ್ಕೃತಿಗಳು ತಮ್ಮ ಸಮಾಜದಲ್ಲೇ ಇಂಗ್ಲಿಷಿಗೆ ಸೆಡ್ಡು ಹೊಡೆದು ಅನನ್ಯತೆಯಿಂದ ಬದುಕುತ್ತಿದ್ದರೆ, ಮೂರನೇ ಜಗತ್ತಿನ ಅನೇಕ ಭಾಷೆಗಳು ಆರ್ಥಿಕ ಅಧೀನತೆಯಿಂದಾಗಿಯೇ ಸಾಂಸ್ಕೃತಿಕ ಅಧೀನತೆಗೂ ಒಳಗಾಗಿವೆ.

ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯಿಂದಾಗುವ ಸಾಮಾಜಿಕ ಏಳ್ಗೆ ಮತ್ತು ಆರ್ಥಿಕ ಏಳ್ಗೆಗೂ ಭಾಷಿಕ ಏಳ್ಗೆಗೂ ಸಂಬಂಧವಿದೆ ಎಂಬುದು ಜರ್ಮನಿ ಜಪಾನ್‌ಗಳನ್ನ ನೋಡಿದರೆ ತಿಳಿಯುತ್ತದೆ. ಕೇವಲ ಒಂದು ಸಾವಿರ ವರ್ಷಗಳ ಇತಿಹಾಸವುಳ್ಳ ಫ್ರೆಂಚ್ ಭಾಷೆ ಫ್ರಾನ್ಸ್ (ಜಾಗತಿಕವಾಗಿ) ನಲ್ಲಿ ಪ್ರಧಾನ ಅಂತಸ್ತು ಪಡೆಯುವುದಾದರೆ ಎರಡು ಸಾವಿರ ವರ್ಷಗಳಿಗೂ ಹೆಚ್ಚು ಇತಿಹಾಸವುಳ್ಳ ಕನ್ನಡಕ್ಕೇಕೆ ಇದು ಸಾಧ್ಯವಾಗುತ್ತಿಲ್ಲ?

ಯಾವುದೇ ಭಾಷೆಯ ಇತಿಹಾಸ ಹೆಚ್ಚಾದಷ್ಟೂ ಅದರ ಅಂತಸ್ತು ಹೆಚ್ಚಾಗುವುದಿಲ್ಲ. ಬದಲಾಗಿ ಆ ಭಾಷಿಕ ಸಮಾಜವು ಪರಾವಲಂಬನೆಯಿಂದ ಸ್ವಾವಲಂಬನೆಗೆ, ಪ್ರತಿಷ್ಠಿತರ ಆಳ್ವಿಕೆಯಿಂದ ಜನಾಡಳಿತಕ್ಕೆ, ಸ್ತೋತ್ರ ಸಂಸ್ಕೃತಿಯಿಂದ ಆತ್ಮಾಭಿಮಾನಕ್ಕೆ, ವಿದೇಶೀ ವ್ಯಾಮೋಹದಿಂದ ದೇಸೀ ಹೆಮ್ಮೆಗೆ ಸಾಗಿದಾಗ ಮಾತ್ರ ಅದರ ಭಾಷಿಕ ಅಂತಸ್ತು ಹೆಚ್ಚಾಗಬಲ್ಲದು. ಆದರೆ ಈ ಸಾಗಾಟ ಅಷ್ಟು - ಮಾತಾಡಿದಷ್ಟು - ಸುಲಭವಲ್ಲ. ಸರ್ವಾಂಗೀಣ ಅಭಿವೃದ್ಧಿಗೂ ಜಾಗತಿಕ ಅಗತ್ಯಗಳನ್ನು ಪೂರೈಸಬಲ್ಲಂತಹ ಭಾಷಾಶಕ್ತಿ ನಿರ್ಮಾಣಕ್ಕೂ ಬಿಡಿಸಲಾಗದ ಸಂಬಂಧವಿದೆ. ಈ ಭಾಷಾ ಶಕ್ತಿ ನಿರ್ಮಾಣವು ಭಾಷೆಯ ಉತ್ಪಾದಕ ಶಕ್ತಿಯನ್ನು ಹೆಚ್ಚಿಸುವುದೂ ಆಗಿರುತ್ತದೆ. ಸ್ಥಳೀಯ ಅಗತ್ಯ ಮತ್ತು ದೇಸೀ ಉಳಿವಿನ ಅಗತ್ಯಗಳನ್ನು ಪೂರೈಸಬಲ್ಲ ಸಂಸ್ಕೃತಿ ಪೋಷಣೆಯೂ ಭಾಷಾಶಕ್ತಿ ನಿರ್ಮಾಣವೂ ಏಕಕಾಲಕ್ಕೆ ಆಗಬೇಕಾಗಿರುತ್ತದೆ. ಈ ರೀತಿಯ ಸಂಸ್ಕೃತಿ ಪೋಷಣೆಯು ಇನ್ನೊಂದು ಮುಖದಲ್ಲಿ ವಿಶ್ವಗ್ರಾಮ ಪ್ರಕ್ರಿಯೆಯ ಎದುರು, ಜಾಗತೀಕರಣವೆಂಬ ಅಮೆರಿಕೀಕರಣದ ಎದುರು ನಡೆಸುವ ಹೋರಾಟವೂ ಆಗಿರುತ್ತದೆ.

**ದ್ವೀಪ ಸಂಸ್ಕೃತಿ ಮತ್ತು ಸ್ಥಳೀಯ ಪ್ರತಿಷ್ಠೆ**

ವಿಕೃತ ನಾಗರಿಕತೆ ತನ್ನ ಪರಾಕಾಷ್ಠೆಗೆ ಹೋದಾಗ ಸಾಂಸ್ಕೃತಿಕ ದ್ವೀಪಗಳು ಸೃಷ್ಟಿಯಾಗುತ್ತವೆ. ಇಂದಿನ ನಗರಗಳಲ್ಲಿ ಒಂದೊಂದು ಕುಟುಂಬ-ಸಮುದಾಯಗಳೂ ಒಂದೊಂದು ದ್ವೀಪದಂತೆ ಆಗುತ್ತಿವೆ. ಮುಂಬೈ ಮತ್ತು ಬೆಂಗಳೂರಿನಂತಹ ನಗರಗಳಲ್ಲಿ ಮರಾಠಿ ಇಲ್ಲವೇ ಕನ್ನಡವನ್ನು ಕಲಿಯದೇ ಬದುಕುತ್ತಿರುವ ಶ್ರೀಮಂತ ಸಮುದಾಯಗಳೂ, ಕೊಳಚೇ ನಿವಾಸಿಗಳೂ ಇದ್ದಾರೆ. ಯಾವುದೇ ನೆಲದಲ್ಲಿ ಆ ಭಾಷೆಯ - ಸಂಸ್ಕೃತಿಯ ಸಂಪರ್ಕವೇ ಇಲ್ಲದಂತೆ ಒಂದು ಭಿನ್ನ ಸಂಸ್ಕೃತಿ - ಭಾಷೆಯ ಜನ ಬದುಕಲು ಸಾಧ್ಯ ಎಂಬುದಕ್ಕೆ ಮುಂಬೈ ಬೆಂಗಳೂರುಗಳು ಉತ್ತಮ ಉದಾಹರಣೆಗಳಾಗಿವೆ. ಈ ದ್ವೀಪ ಸಂಸ್ಕೃತಿಗಳ ಸಹಬಾಳ್ವೆಯು ಸಮಾನ ಸಹಬಾಳ್ವೆಯಾಗಿರದೆ ಅಸಮಾನ ಶ್ರೇಣೀಕರಣದ ಬಾಳ್ವೆಯಾಗಿರುತ್ತದೆ. ದ್ವೀಪ ಸಂಸ್ಕೃತಿಗಳ ಆರ್ಥಿಕ ಅಂತಸ್ತೇ ಸಾಮಾಜಿಕ - ಸಾಂಸ್ಕೃತಿಕ ಶ್ರೇಣೀಕರಣವನ್ನೂ ನಿರ್ಧರಿಸುತ್ತಿರುತ್ತದೆ. ಈ ಶ್ರೇಣೀಕರಣದ ಅಸ್ತಿತ್ವವೇ ಸ್ಥಳೀಯ ಪ್ರತಿಷ್ಠೆಗೆ ಪ್ರಚೋದನಕಾರಿಯಾಗಿರುತ್ತದೆ. ಇದು ಸ್ಥಳೀಯ ಪ್ರತಿಷ್ಠೆಗೆ ಒಂದು ಗುಪ್ತ ಸೇಡು - ಸಿಟ್ಟನ್ನು ಕೂಡಿಡುತ್ತದೆ. ಈ ಸಿಟ್ಟು ಎಂದೋ ಒಂದು ದಿನದ ಸ್ಫೋಟದ ಕಿಡಿಗಾಗಿ ಕಾಯುತ್ತಿರುತ್ತದೆ.

ತಮ್ಮ ಕಣ್ಣೆದುರೇ, ತಮ್ಮ ನೆಲದಲ್ಲಿಯೇ ಅನ್ಯ ಸಾಂಸ್ಕೃತಿಕ ಘಟಕವೊಂದು ತಲೆಯೆತ್ತುವುದನ್ನು ಸಹಿಸಲಾಗದ ಸ್ಥಳೀಯ ಭಾವುಕತೆಯು ತನ್ನ ಅಸ್ತಿತ್ವ ಮತ್ತು ಯಾಜಮಾನ್ಯಕ್ಕೆ ಒದಗುವ ಧಕ್ಕೆಯನ್ನು ಪ್ರತಿಷ್ಠೆಯ ವಿಷಯವಾಗಿಸಿಕೊಳ್ಳುತ್ತದೆ. ಇಂಥ ಧಕ್ಕೆಯನ್ನು ಹೇಗಾದರೂ ಎದುರಿಸಲು ಸಜ್ಜುಗೊಳ್ಳುತ್ತದೆ. ಇದು ಆತ್ಮರಕ್ಷಣೆಯ ಮಾರ್ಗವೂ ಅನ್ಯಾಕ್ರಮಣದ ಮಾರ್ಗವೂ ಆಗಿರುತ್ತದೆ. ಹೀಗಾಗಿಯೇ ಶಕ್ತಿ ಕೇಂದ್ರಗಳಂತಹ ಸಂಘಟನೆಗಳ ಬಗೆಗೆ ಕೆಲವೊಮ್ಮೆ ನಮಗೆ ಸಹಾನುಭೂತಿಯೂ ಮೂಡುತ್ತದೆ. ಇಂಥಲ್ಲಿ ನೆಲ, ಕುಲ, ಜಲ, ಧರ್ಮ ಮತ್ತು ಭಾಷಿಕ ವಿಚಾರಗಳು ಭಾವುಕ ಹೋರಾಟ ಮತ್ತು ವಿಕೃತ ದಂಗೆಗಳಿಗೆ, ಸಾಮಾಜಿಕ ಅನಾರೋಗ್ಯಕ್ಕೆ ಕಾರಣವಾಗುತ್ತವೆ.

ಯಾವುದೇ ಭಾಷಿಕ ಸಾಂಸ್ಕೃತಿಕ ಹೋರಾಟವು ರಾಜ್ಯಕ್ಕೆ ಸೀಮಿತಗೊಳ್ಳಬೇಕೇ ವಿನಃ ಪ್ರತ್ಯೇಕತಾವಾದಿ - ದೇಶವಿಭಜನಾ ಕಾರ್ಯಕ್ಕೆ ವಿಸ್ತಾರಗೊಳ್ಳಬಾರದು. ಭಾರತ ಜನನಿಯ ತನುಜಾತೆ ಎಂಬ ಮಾತು ನಮಗೆ ಸದ್ಯಕ್ಕೆ ಸಾಕು. ನಾವಿಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ರಾಷ್ಟ್ರೀಯ ಭಾಷಿಕ ದಮನವನ್ನಲ್ಲ. ಹಿಂದಿ ನಮಗೆ ಅಪಾಯಕಾರಿಯಾದರೂ ಇದು ಅಂಥ ದೊಡ್ಡ ಥ್ರೆಟ್ ಅಲ್ಲ. ಹಿಂದಿಗಿಂತ ದೊಡ್ಡ ಥ್ರೆಟ್ ವ್ಯಾಪಾರೀ ಸಂಸ್ಕೃತಿಯ, ಬಹುರಾಷ್ಟ್ರೀಯ ಕಂಪನಿಗಳ, ದೃಶ್ಯ, ಶ್ರವ್ಯ, ಮುದ್ರಣ ಹೀಗೆ ಅನೇಕ ಮುಖದ ಬಹುರೂಪಿ ಇಂಗ್ಲಿಷ್ ಆಗಿದೆ.

**ಭಾಷೆ ಮತ್ತು ಮೀಸಲಾತಿ**

ನಮ್ಮಲ್ಲಿಂದು ಕನ್ನಡವೇ ಬಾರದವನು ಪುರಸಭೆಯ ಸದಸ್ಯ ಆಗಬಲ್ಲ; ಮಂತ್ರಿಯೂ ಆಗಬಲ್ಲ. ಹದಿನೈದು ವರ್ಷ ಕರ್ನಾಟಕದಲ್ಲಿ ನೆಲೆಸಿದವರಿಗೆ ಕನ್ನಡಿಗರೆಂದು ಕರೆಯುವ ಕಾನೂನೂ ನಮ್ಮಲ್ಲಿದೆ. ಆದರೂ ದೀರ್ಘಕಾಲ ಕರ್ನಾಟಕದಲ್ಲಿ ನೆಲೆಸಿದವರಲ್ಲಿ ಎಷ್ಟು ಮಂದಿ ಕನ್ನಡ ಕಲಿತಿದ್ದಾರೆ? ಎಷ್ಟು ಜನ ಕನ್ನಡೇತರರು ಕರ್ನಾಟಕದಲ್ಲಿ ಬಂಡವಾಳ ಹೂಡಿದ್ದಾರೆ? ಎಷ್ಟು ಜನ ಕನ್ನಡಿಗರಿಗೆ ಕೆಲಸ ನೀಡಿದ್ದಾರೆ? ಎಷ್ಟು ಜನ ಕನ್ನಡೇತರರು ಸರ್ಕಾರಿ ಹುದ್ದೆಗಳಲ್ಲಿದ್ದಾರೆ? ಇವರೆಲ್ಲ ಕರ್ನಾಟಕದ ಒಳಿತಿಗೆ ಬದುಕುತ್ತಿದ್ದಾರೋ ಅಥವಾ ತಮ್ಮ ದ್ವೀಪ ಸಂಸ್ಕೃತಿಯ ಹಿತರಕ್ಷಣೆಗೆ ಬದುಕುತ್ತಿದ್ದಾರೋ ಎನ್ನುವುದು ಒಂದು ಆತಂಕಕಾರಿ ವಿಚಾರವಾಗಿದೆ. ಈ ಬಗ್ಗೆ ಕೂಡ ಸರ್ವೇಕ್ಷಣೆ ಆಗಬೇಕಿದೆ.

ಕರ್ನಾಟಕದಲ್ಲಿ ಜಾತಿಗೆ ಮೀಸಲಾತಿ ಕಲ್ಪಿಸಿದಂತೆ ಭಾಷೆಗೂ ಮೀಸಲಾತಿ ಕಲ್ಪಿಸಬೇಕಾದ ಸ್ಥಿತಿ ನಿರ್ಮಾಣವಾಗಿರುವುದು ನಿಜಕ್ಕೂ ನಮ್ಮ ಭಾಷೆ ಮತ್ತು ಸಮಾಜದ ಸಂಬಂಧ ಹೇಗಿದೆ ಎಂಬುದನ್ನೇ ತಿಳಿಸುವುದಾಗಿದೆ. ಈ ಭಾಷಿಕ ಮೀಸಲಾತಿಯು ಇಂದು ಕೇವಲ ಶಿಕ್ಷಣರಂಗಕ್ಕೆ ಮಾತ್ರ ಇದೆ. ಆದರೆ ಇನ್ನೂ ಹಲವಾರು ರಂಗಗಳಿಗೆ (ಉದ್ಯೋಗ-ರಾಜಕಾರಣ) ಇದನ್ನು ವಿಸ್ತರಿಸುವ ಮರುಪರಿಶೀಲನೆಯೂ ನಡೆಯಬೇಕಿದೆ. ಕನ್ನಡ ಮೀಸಲಾತಿಯ ಮೂಲಕ ಶಿಕ್ಷಣ ಪಡೆದವರಿಗೆ ಉದ್ಯೋಗವೂ ಆಡಳಿತಾವಕಾಶವೂ ಸಿಗುತ್ತದೆಂಬ ನಂಬಿಕೆಯೇನೂ ಇಲ್ಲ. ಸ್ಥಳೀಯ ಅಗತ್ಯ, ಸ್ಥಳೀಯ ಭಾಷೆ - ಸಂಸ್ಕೃತಿಗಳನ್ನು ಬಲ್ಲವರು ಸರ್ಕಾರಿ ಉದ್ಯೋಗಗಳನ್ನು ಸೇರಬೇಕಾಗಿದೆ. ಇದರಿಂದ ಸ್ಥಳೀಯ ಅಗತ್ಯಗಳನ್ನು ಸರ್ಕಾರಿ ಸವಲತ್ತುಗಳು ಮುಟ್ಟಲು ಸಾಧ್ಯವಾಗುತ್ತದೆ.

**ತರತಮದಲ್ಲಿ ಪ್ರಧಾನತೆ**

ಭಾರತೀಯ ಬಹುಮುಖೀ ಸಾಂಸ್ಕೃತಿಕ ಅಸ್ತಿತ್ವವನ್ನೇ 'ವಿವಿಧತೆಯಲ್ಲಿ ಏಕತೆ' ಎನ್ನಲಾಗಿದೆ. ಆದರೆ ಇದು ವಿವಿಧತೆಯಲ್ಲಿ ಏಕತೆ ಆಗಿರದೆ ವಿವಿಧತೆಯಲ್ಲಿನ ತರತಮತೆ ಆಗಿದೆ. ಈ ತರತಮ ಅಸ್ತಿತ್ವವು ಭಾಷಿಕ, ಜಾತಿ, ಧರ್ಮ, ವರ್ಗೀಯ ಮತ್ತು ಸಾಂಸ್ಕೃತಿಕ ಬಹುಳತೆಯಾಗಿದೆ. ಭಾಷೆ-ಉಪಭಾಷೆ, ಜಾತಿ-ಉಪಜಾತಿ, ಸಂಸ್ಕೃತಿ-ಉಪಸಂಸ್ಕೃತಿ ಹೀಗೆ ಸಮಾಜದ ಪ್ರತಿಯೊಂದನ್ನೂ ಪ್ರಧಾನ-ಅಧೀನ, ಶ್ರೇಷ್ಠ-ಕನಿಷ್ಠ ಈ ನೆಲೆಯಲ್ಲಿ ನೋಡುವುದೇ ತರತಮ ಪರಿಭಾವನೆಯಾಗಿದೆ. ಈ ಪರಿಭಾವನೆಯುಳ್ಳ ಸಾಮಾಜಿಕ ವಾಸ್ತವವು ಸದಾ ಪ್ರಧಾನತೆಯ ಕಡೆಗೆ ಚಲಿಸುವುದಾಗಿದೆ. ಈ ಚಲನೆಯು ಕೆಲವೊಮ್ಮೆ ಘರ್ಷಣಾಯುಕ್ತ ಪೈಪೋಟಿಯನ್ನೂ ಹೊಂದಿರುತ್ತದೆ. ಇದು ವ್ಯಕ್ತಿ-ವ್ಯಕ್ತಿ, ಗಂಡ-ಹೆಂಡತಿ, ಜಾತಿ-ಜಾತಿ, ವರ್ಗ-ವರ್ಗ, ಸಂಸ್ಕೃತಿ-ಸಂಸ್ಕೃತಿ, ದೇಶ-ದೇಶ ಹೀಗೆ ಬಿಡಿ ನೆಲೆಯಿಂದ ಇಡೀ ನೆಲೆಯವರೆಗೆ ವ್ಯಾಪಿಸಿರುವುದಾಗಿದೆ.

ಯಾವುದೇ ಸಂಸ್ಕೃತಿ, ಜಾತಿ, ಭಾಷೆ ಇತ್ಯಾದಿಗಳನ್ನು ಪ್ರಧಾನ - ಅಧೀನ ನೆಲೆಯಲ್ಲಾಗಲಿ, ಶ್ರೇಷ್ಠ - ಕನಿಷ್ಠ ನೆಲೆಯಲ್ಲಾಗಲಿ ನೋಡಬಾರದು. ಅದಕ್ಕಿಂತ ಇದು ಭಿನ್ನ, ಇದಕ್ಕಿಂತ ಅದು ಭಿನ್ನ, ಎಂಬ ನೆಲೆಯಿಂದ ನೋಡಬೇಕು ಎಂಬುದು ಭಿನ್ನತೆಯ ಪರಿಭಾವನೆಯಾಗಿದೆ. ಈ ಭಿನ್ನತೆಯ ಪರಿಭಾವನೆಯು ಶ್ರೇಣೀಕರಣ ಅಥವಾ ತರತಮತೆಯನ್ನು ಒಪ್ಪುವುದಿಲ್ಲ.

ನಮ್ಮ ಸಮಾಜದಲ್ಲಿ ಜಾತಿ ಭೇದ, ಭಾಷಿಕ ಭೇದ, ಆರ್ಥಿಕ ಭೇದ ಮತ್ತು ಸಾಂಸ್ಕೃತಿಕ ಭೇದಗಳಿಗೆ ಒಂದು ಅನ್ಯೋನ್ಯ ಸಂಬಂಧವಿದೆ. ಯಾವುದೇ ಸಮಾಜದಲ್ಲಿ ಬೇರೆ ಬೇರೆ ಕಾರಣಗಳಿಂದಾಗಿ ಭಾಷೆಗಳಿಗೂ ಒಂದು ತರತಮಶ್ರೇಣಿ ಸೃಷ್ಟಿಯಾಗಿರುತ್ತದೆ. ಇಂದು ಜಾತೀಯ ತರತಮಗಳು ಕಡಿಮೆಯಾಗುತ್ತಾ ವರ್ಗೀಯ ತರತಮಗಳು ಉಂಟಾಗುತ್ತಿರುವ ವಿದ್ಯಾವಂತ ಸಮುದಾಯದಲ್ಲಿ ಭಾಷಿಕ ತರತಮತೆ ಕೆಳ ಅಂತಸ್ತನ್ನು ನೀಡುವುದು ಜನವರ್ಗಗಳಿಗೆ ಬೇಕಾಗಿರುವುದಿಲ್ಲ. ಹಾಗಾಗಿ ಜನಸಮುದಾಯವು ಯಾವಾಗಲೂ ಹೆಚ್ಚಿನ ಅಂತಸ್ತುಳ್ಳ ಭಾಷೆಯೊಂದಿಗೆ ತನ್ನನ್ನು ಗುರ್ತಿಸಿಕೊಳ್ಳಲು ಯತ್ನಿಸುತ್ತಿರುತ್ತದೆ. ಸಾಮಾಜಿಕ - ಆರ್ಥಿಕ ಶ್ರೇಣೀಕರಣದೊಂದಿಗೆ ಬೆಸುಗೆಗೊಂಡ ಭಾಷಿಕ ಶ್ರೇಣೀಕರಣದಲ್ಲಿ ಮೇಲ್ವರ್ಗಗಳು ಮೇಲ್ವರ್ಗದ ಭಾಷೆಯನ್ನೇ ಆಯ್ಕೆ ಮಾಡಿಕೊಳ್ಳುತ್ತವೆ. ಇದು ಸರ್ವಾಂಗೀಣ ನೆಲೆಯಲ್ಲೂ ಶ್ರೇಷ್ಠತೆಯ ಕಡೆಗೆ, ಪ್ರಧಾನತೆಯ ಕಡೆಗೆ ತುಡಿಯುವ ಸಾಮಾಜಿಕ ಮನೋಭಾವವಾಗಿದೆ. ಹೀಗಾಗಿ ನಮ್ಮಲ್ಲಿ ಸಾಮಾಜಿಕ ಚಲನೆಯು ಭಿನ್ನತೆಯಲ್ಲಿ ಏಕತೆಯನ್ನು ಕಾಣುವುದು ಆಗಿರದೆ ತರತಮದಲ್ಲಿ ಪ್ರಧಾನತೆಯನ್ನು ಕಾಯುವುದು ಆಗಿದೆ. ಇದು ನಮ್ಮ ಪ್ರಜಾಪ್ರಭುತ್ವವು ಸಾಮ್ರಾಜ್ಯವಾದಿತ್ವ ಅಥವಾ ಬಂಡವಾಳಶಾಹಿತ್ವದ ಕಡೆಗೆ ಹರಿಯುತ್ತಿರುವುದರ ಲಕ್ಷಣವೂ ಹೌದು.

ಇಂಥ ಅಸಮಾನ ವರ್ಗ ಸಮಾಜದಲ್ಲಿ ಇಂಗ್ಲಿಷ್ ಉನ್ನತ ವರ್ಗದ ಭಾಷೆಯೆಂದೂ ಕನ್ನಡ ನಿಮ್ನ ವರ್ಗದ ಭಾಷೆಯೆಂದೂ ಆಗಿರುವ ಇಂದು ಕನ್ನಡವನ್ನು ಉನ್ನತ ವರ್ಗದ ಭಾಷೆಯನ್ನಾಗಿ ಮಾಡುವ ಕಡೆಗೆ ಆಲೋಚಿಸಬೇಕಾಗಿದೆ. ಸಮಾನ ಸಮಾಜವನ್ನು ಕಟ್ಟುವ, ಕಾಣುವ, ಸಮಾನ ಭಾಷಿಕ ವಾತಾವರಣವನ್ನು ನಿರ್ಮಿಸುವ ವಿಚಾರವು ಒಂದು ಆದರ್ಶವೇ ಹೌದು. ಆದ್ದರಿಂದ ನಮ್ಮ ಗುರಿಯು ಪ್ರಧಾನತೆಯ ಕಡೆಗಾಗಲಿ ಸಮಾನತೆಯ ಕಡೆಗಾಗಲಿ ಆಗಿರದೆ ಕಡಿಮೆ ಅಸಮಾನತೆಯ ಕಡೆಗೆ ಆದರೆ ಒಳಿತು ಎಂದು ಹೇಳಬಹುದು.

**ಕನ್ನಡ ಭಾಷೆ ಮತ್ತು ಜನಭಾಗಿತ್ವ**

ಯಾವುದೇ ಭಾಷೆ ಜನಬಳಕೆಯಿಲ್ಲದೆ, ಜನಭಾಗಿತ್ವವಿಲ್ಲದೆ ಉಳಿಯುವುದಿಲ್ಲ. ಭಾಷೆಯನ್ನು ಉಳಿಸುವುದು ಸರ್ಕಾರದ ಕೆಲಸ ಅಲ್ಲ, ಭಾಷೆಯ ಬಗೆಗೆ ಹೋರಾಡಲು ಯಾರೋ ಇದ್ದಾರೆ ಎಂದು ಜನ ಸುಮ್ಮನೆ ಇದ್ದರೆ ಆಗುವುದಿಲ್ಲ. ವೇಗಗತಿಯಲ್ಲಿ ಸಮಾಜವು ಲಿಪೀಕರಣಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ತಮಗರಿವಿಲ್ಲದೆಯೇ ಇಂಗ್ಲಿಷಿನ ದಾಳಿಗೆ ನೇರವಾಗಿ ಒಳಗಾಗುತ್ತಿರುವ ನಿರ್ಲಿಪಿಕ ಸಮುದಾಯಗಳುಳ್ಳ ನಮ್ಮ ಸಮಾಜದಲ್ಲಿ ಜನಭಾಗಿತ್ವವಿಲ್ಲದೆ ಯಾವುದೇ ಅಸ್ತಿತ್ವವಾದೀ ಹೋರಾಟಕ್ಕೆ ಅರ್ಥ ಇರುವುದಿಲ್ಲ.

ಯಾವುದೇ ಸರ್ಕಾರಿ ಯೋಜನೆಯ ಯಶಸ್ಸಿಗೆ ಜನಬಳಕೆ ಮತ್ತು ಜನಭಾಗಿತ್ವ ಹೇಗೆ ಅತ್ಯಗತ್ಯವೋ ಹಾಗೇ ಭಾಷಿಕ ಏಳ್ಗೆಗೂ ಕೂಡ ಜನಬಳಕೆ ಮತ್ತು ಜನಭಾಗಿತ್ವ ಅತ್ಯಗತ್ಯ.

ಆದರೆ ಇಂದು ಕರ್ನಾಟಕದಲ್ಲಿ ಏನಾಗುತ್ತಿದೆ ? ಕನ್ನಡಿಗರೇ ಕನ್ನಡವನ್ನು ಬಳಸುತ್ತಿಲ್ಲ. ಕನ್ನಡಿಗರೇ ಕನ್ನಡ ಕಟ್ಟುವ ಬಗ್ಗೆ ಸೀರಿಯಸ್ಸಾಗಿಲ್ಲ. ವಿದ್ಯಾವಂತ ಸಮುದಾಯ ತಮ್ಮ ಮಕ್ಕಳನ್ನು ಕನ್ನಡ ಶಾಲೆಗೆ ಕಳಿಸಲು ಇಚ್ಛಿಸುತ್ತಿಲ್ಲ. ಕನ್ನಡ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸುವವರು ಬಡವರಾಗಿದ್ದು ಅವರೂ ಕೂಡ ಆರ್ಥಿಕ ಕಾರಣಗಳಿಂದಾಗಿ ಮಾತ್ರ ತಮ್ಮ ಮಕ್ಕಳನ್ನು ಇಂಗ್ಲಿಷ್ ಶಾಲೆಗೆ ಸೇರಿಸಲಾಗಿಲ್ಲ. ನಿರ್ಲಿಪಿಕರೂ ಸೇರಿದಂತೆ ಬಹುಪಾಲು ಕನ್ನಡಿಗರು ಇಂದು ಅತ್ತ ಇಂಗ್ಲಿಷೂ ಅಲ್ಲದ ಇತ್ತ ಕನ್ನಡವೂ ಅಲ್ಲದ ಕಂಗ್ಲಿಷ್ ಬಳಸುತ್ತಿದ್ದಾರೆ. ಹೀಗಿರುವಾಗ ಏನು ಮಾಡುವುದು ? ''ರೋಗ ನಿವಾರಣೆ ನಿದಾನಗಳನ್ನು ಅರಿತಿಲ್ಲದ ಹುಸಿ ವೈದ್ಯರು ಜನಾರೋಗ್ಯದ ಹೊಣೆ ಹೊರಲು ಹೊರಟಾಗ ಎಲ್ಲ ಬಲ್ಲ ವೈದ್ಯನ ಹೊಣೆ ಹೆಚ್ಚಾಗುತ್ತದಷ್ಟೆ. ತನ್ನ ತಜ್ಞತೆಯನ್ನು ಶುದ್ಧವಾಗಿಸಿಕೊಳ್ಳಲು ಸಾಮಾಜಿಕ ಹೊಣೆಗಾರಿಕೆಯನ್ನು ಬಿಟ್ಟುಕೊಡುವುದು ಒಂದು ಅಪರಾಧವೇ ಆಗುವುದು. ಭಾಷಾಶಾಸ್ತ್ರಜ್ಞರು ಈ ಅಂಶವನ್ನು ಗಮನಿಸಬೇಕು.'' (*ಭಾಷೆಯ ಸುತ್ತಮುತ್ತ:* ಡಾ|| ಕೆ. ವಿ. ನಾರಾಯಣ, ಪು. ೪೫)

ತರತಮದಲ್ಲಿ ಪ್ರಧಾನತೆಯ ಕಡೆಗೆ ಸಮಾಜ ಸದಾ ತುಡಿಯುವುದರಿಂದ ಅಧಿಕ ಅಂತಸ್ತು, ಅಧಿಕ ಆದಾಯ, ಸುಲಭ ಉದ್ಯೋಗ ನೀಡಬಲ್ಲದೆಂಬ ನಂಬಿಕೆಯ ಇಂಗ್ಲಿಷನ್ನೇ ನಮ್ಮ ಜನ ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಇಂಥ ಆಯ್ಕೆಯಲ್ಲಿ ಅವರ ಬುದ್ಧಿವಂತಿಕೆ ಮತ್ತು ಅವಕಾಶವಾದಿತನ ಅಡಗಿಲ್ಲವೇ ಎಂದರೆ ಹೌದು ಎನ್ನಬೇಕಾಗುತ್ತದೆ. ಹಾಗೇ ವಿದ್ಯಾವಂತ ಅವಿದ್ಯಾವಂತರೆಲ್ಲ ತಮ್ಮದೇ ನೆಲೆಯಲ್ಲಿ ಇಂಗ್ಲಿಷ್ ಕಲಿಕೆ ಮತ್ತು ಬಳಕೆಯನ್ನು ಆಯ್ಕೆ ಮಾಡಿಕೊಳ್ಳುತ್ತಿರುವಾಗ ನಾವು ನೀವೊಬ್ಬರು ಮಾತ್ರ ಯಾಕೆ ಅದನ್ನ ವಿರೋಧಿಸಬೇಕು, ಹೀಗೆ (ವಿರೋಧಿಸುವುದು) ಜನ ಪ್ರವಾಹದ ಎದುರು ಈಜಿದಂತೆ ಅಲ್ಲವೇ ಎಂದರೆ ಹೌದು ಎನ್ನಲೇಬೇಕಾಗುತ್ತದೆ.

ಒಟ್ಟಾರೆ ಕನ್ನಡ ಇದೆಲ್ಲದರಿಂದ ಮೂಲೆಗುಂಪಾಗುತ್ತಿದೆ. ಇದಕ್ಕಾಗಿ ಏನು ಮಾಡಬೇಕು ? ಇದಕ್ಕಾಗಿ ಸರಳವಾದ ಮೂರು ಮಾರ್ಗಗಳಿವೆ.

೧. ಇಂದು ಇಂಥದೇ ಬಿಕ್ಕಟ್ಟನ್ನು ಎದುರಿಸುತ್ತಿರುವ ಅನ್ಯಭಾಷೆ ಸಂಸ್ಕೃತಿಗಳು ಏನು ಮಾಡುತ್ತಿವೆ ಎಂಬುದನ್ನು ನೋಡಿ ಕಲಿಯಬೇಕು.

೨. ಹಿಂದೆ ಇಂಥದೇ ಬಿಕ್ಕಟ್ಟನ್ನು ನಮ್ಮ ಭಾಷೆ ಚರಿತ್ರೆಯಲ್ಲಿ ಹೇಗೆ ಎದುರಿಸಿದೆ ಎಂಬುದನ್ನು ನೋಡಿ ಕಲಿಯುವುದು.

೩. ದೇಸೀ ಕಡೆಗೆ ಹೊರಳುವುದು.

ಈ ಮೂರನ್ನೂ ಈಗಾಗಲೇ ಅಲ್ಲಲ್ಲಿ ಚರ್ಚಿಸಲಾಗಿದೆ. ನಮ್ಮ ಚರಿತ್ರೆಯ ಕಡೆಗೆ ಇನ್ನೊಂದಿಷ್ಟು ನೋಡಬಹುದು.

ನಮ್ಮ ಚರಿತ್ರೆಯಲ್ಲಿ ಇಂಥ ಬಿಕ್ಕಟ್ಟುಗಳಿಗೆ ಎರಡು ನೆಲೆಯಲ್ಲಿ ಹೋರಾಟ ನಡೆದಿದೆ. ೧. ಶಿಷ್ಟನೆಲೆ, ೨. ದೇಸೀನೆಲೆ. ಶಿಷ್ಟನೆಲೆಯು ಪಂಡಿತವರ್ಗ, ಸಾಹಿತಿ, ಕವಿ ವರ್ಗಗಳಿಂದ ಕೂಡಿರುವುದಾಗಿದ್ದು ಇಲ್ಲಿ ಹೋರಾಟದ ದಾಖಲೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಇಲ್ಲಿ ಮೂರು ನೆಲೆಯಲ್ಲಿ ಅನ್ಯಭಾಷಿಕ (ಸಂಸ್ಕೃತ) ಯಾಜಮಾನ್ಯವನ್ನು ಎದುರಿಸಲಾಗಿದೆ.

೧. ಲಿಪಿಕ ಆವರಣದೊಳಕ್ಕೆ ಯಾಜಮಾನ್ಯ ಭಾಷೆಯನ್ನು ತಂದು ಇಲ್ಲಿ ಜೀರ್ಣಿಸಿಕೊಳ್ಳಲಾಗಿದೆ.

೨. ಯಾಜಮಾನ್ಯ ಭಾಷೆಯ ಅಂತಸ್ತಿಗೆ ತನ್ನನ್ನು ಎತ್ತಿಕೊಳ್ಳಲು ಯತ್ನಿಸಲಾಗಿದೆ.

೩. ಸಾಹಿತ್ಯ ಕೃತಿಯಲ್ಲಿ ದೇಸೀ ಭಾಷೆಯನ್ನು ಸಮೃದ್ಧವಾಗಿ ಬಳಸಲಾಗಿದೆ.

ಈ ಮೂರೂ ಕ್ರಿಯೆಗಳು ಪರಸ್ಪರ ಸಂಬಂಧವುಳ್ಳವು ಮತ್ತು ಶಿಷ್ಟವು ತನಗೆ ಬಿಕ್ಕಟ್ಟು ಒದಗಿದಾಗೆಲ್ಲ ದೇಸೀ ಕಡೆಗೆ ಪಯಣಿಸಿದೆ.

*(೧೮ನೇ ಪುಟಕ್ಕೆ)*

# ವಡ್ಡರ ಹಟ್ಟಿಯಲ್ಲಿ ಭೂಗತ ದಿನಗಳು



ಕರ್ನಾಟಕದಲ್ಲಿ ಕಮ್ಯುನಿಸ್ಟ್ ಆಂದೋಲನದ ಆರಂಭದ ದಿನಗಳಲ್ಲಿ ಸಕ್ರಿಯನಾಗಿ ಭಾಗಿಯಾಗಿದ್ದ ನೆನಪುಗಳು ನನ್ನ ಮನದಲ್ಲಿ ಇನ್ನೂ ಹಸಿರಾಗಿವೆ. ಆ ಸಂದರ್ಭದಲ್ಲಿ ನಾನು ಭೂಗತನಾಗಿದ್ದಾಗ ದಾವಣಗೆರೆಯ ವಡ್ಡರೊಂದಿಗೆ ಕಳೆದ ದಿನಗಳು ಬದುಕಿನಲ್ಲಿ ಜನ ಸಾಮಾನ್ಯರ ಬಗ್ಗೆ ನನ್ನ ಧೋರಣೆ ರೂಪುಗೊಳ್ಳಲು ಪ್ರಭಾವ ಬೀರಿದವು.

ದಾವಣಗೆರೆಯಲ್ಲಿ ಶ್ರೀ ಬಿ. ಮುರುಗಯ್ಯ ಅವರು ಕಾರ್ಮಿಕರನ್ನು ಸಂಘಟಿಸಿ ಆಂದೋಲನಕ್ಕೆ ಚಾಲನೆ ನೀಡಿದ್ದರು. ಆ ಹೊತ್ತಿನಲ್ಲಿ, ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಿ ಆಂದೋಲನವನ್ನು ಬಲಪಡಿಸಲಿಕ್ಕಾಗಿ ಅವರೊಂದಿಗೆ ಕೆಲಸ ಮಾಡಬೇಕೆಂದು ಕಮ್ಯುನಿಸ್ಟ್ ಪಾರ್ಟಿ (ಅವಿಭಜಿತ) ನನ್ನನ್ನು ಕೇಳಿಕೊಂಡಿತು. ಆ ಪ್ರಕಾರ ೧೯೪೮ರ ಜನವರಿ ೧ರಿಂದ ನಾನು ದಾವಣಗೆರೆಯಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಕಾರ್ಯಕರ್ತನಾಗಿ ದುಡಿದೆ.

**ಬಲಗೊಂಡ ಆಂದೋಲನ**

ಅನಂತರ ನಾವು ದಾವಣಗೆರೆಯಲ್ಲಿ ಕಮ್ಯುನಿಸ್ಟ್ ಪಾರ್ಟಿಯ ರಾಜ್ಯಮಟ್ಟದ ಸಮಾವೇಶ ನಡೆಸಿದೆವು. ಕೇಂದ್ರ ಸಮಿತಿಯ ಶ್ರೀ ಮೋಹನ ಕುಮಾರಮಂಗಲಂ ಅದರ ಅಧ್ಯಕ್ಷತೆ ವಹಿಸಿದ್ದರು. ಆ ಸಮ್ಮೇಳನವು ಕೈಗಾರಿಕಾ ಕಾರ್ಮಿಕರಲ್ಲಿ ಜಾಗೃತಿಯ ಅಲೆಯನ್ನೇ ಹಬ್ಬಿಸಿ, ಸಂಘಟನೆ ಬಲಗೊಂಡು, ಅಂತಿಮವಾಗಿ ದಾವಣಗೆರೆ ಹತ್ತಿ ಗಿರಣಿಯಲ್ಲಿ ಲಾಕೌಟ್ ಘೋಷಿಸಲಾಯಿತು.

ಆದರೂ ಹೋರಾಟ ಮುಂದುವರಿಯಿತು. ಪೊಲೀಸರು ನನ್ನನ್ನೂ ಇತರ ಕಾರ್ಮಿಕ ನಾಯಕರನ್ನೂ ಬಂಧಿಸಿ ದಾವೆ ಹೂಡಿದರು. ಅದರಿಂದಾಗಿ ನಮಗೆಲ್ಲರಿಗೂ ಒಂದೂವರೆ ತಿಂಗಳ ಕಠಿಣ ಶಿಕ್ಷೆ ವಿಧಿಸಲಾಯಿತು.

ಆದರೆ ಕಾರ್ಮಿಕರು, ಅದರಲ್ಲೂ ವಿಶೇಷವಾಗಿ ಶಿವಮ್ಮಳ ಮುಂದಾಳುತನದಲ್ಲಿ ಮಹಿಳಾ ಕಾರ್ಮಿಕರು, ಎಂಥ ಉತ್ಸಾಹದಿಂದ ತಮ್ಮ ಹೋರಾಟ ಮುಂದುವರಿಸಿದರೆಂದರೆ, ಸರಕಾರವು ಇವರ ಪ್ರತಿಭಟನೆಗೆ ಮಣಿಯಲೇ ಬೇಕಾಯಿತು. ನಮ್ಮ ಶಿಕ್ಷೆಯ ಅವಧಿ ಮುಗಿಯುವ ಮುನ್ನವೇ ಸರಕಾರವು ನಮ್ಮನ್ನೆಲ್ಲ ಬಿಡುಗಡೆಗೊಳಿಸಿತು ಮತ್ತು ವಿವಾದದ ವಿಚಾರಣೆಗಾಗಿ ಒಂದು ಟ್ರಿಬ್ಯುನಲನ್ನು ನೇಮಿಸಿತು.

ಇತ್ತ ಹೀಗೆ ಮಾಡುತ್ತ, ಅತ್ತ ಸರಕಾರವು ಕಾರ್ಮಿಕರ ಆಂದೋಲನವನ್ನು ದುರ್ಬಲಗೊಳಿಸಲು ಹವಣಿಸಿತು. ಅದಕ್ಕಾಗಿ ಸೆಕ್ಷನ್ ೧೪೪ನ್ನು ಹೇರಿ, ಕಾರ್ಮಿಕರು ಒಟ್ಟು ಸೇರುವುದನ್ನು ಪ್ರತಿಬಂಧಿಸಿತು. ಅದಲ್ಲದೆ ಸಂಘಟಿತ ಕಾರ್ಮಿಕರ ಮೇಲೆ ಗೂಂಡಾಗಳನ್ನು ಛೂ ಬಿಟ್ಟಿತು.

**ಎ. ಶಿವಶಂಕರ ರಾವ್**

**ಹಲ್ಲೆಯಿಂದಾಗಿ ಆಸ್ಪತ್ರೆಗೆ**

ಆಗೊಂದು ದಿನ ಕೆಲವು ಜನರು ನನ್ನ ಬಳಿ ಬಂದರು. ಅವರೆಗೆರೆ ಹಳ್ಳಿಯ ಕಾರ್ಮಿಕರು ಕೆಲಸಕ್ಕೆ ಹಾಜರಾಗದಂತೆ ನಾನು ಆ ಹಳ್ಳಿಗೆ ಬಂದು ಅವರ ಮನವೊಲಿಸಬೇಕೆಂದು ವಿನಂತಿಸಿದರು. ಅದರಂತೆ ನಾನು ಅವರೊಂದಿಗೆ ಅವರೆಗೆರೆಗೆ ಹೋದಾಗ, ಅಲ್ಲಿ ನನ್ನನ್ನು ಬಲವಾಗಿ ಥಳಿಸಿ, ನಾನು ನೆಲಕ್ಕುರುಳಿದಾಗ, ಸತ್ತುಹೋಗಿರಬೇಕೆಂದು ಭಾವಿಸಿ, ಅಲ್ಲೇ ಬಿಟ್ಟುಹೋದರು. ಅನಂತರ ಯಾರೋ ನನ್ನನ್ನು ನೋಡಿ ಆಸ್ಪತ್ರೆಗೊಯ್ದರು. ಅಲ್ಲಿ ನಾನು ೧೦ ದಿನಗಳ ಚಿಕಿತ್ಸೆ ಪಡೆದೆ.

ನಾನು ಆಸ್ಪತ್ರೆಯಲ್ಲಿದ್ದಾಗ ಅನೇಕ ಜನರು ನನ್ನನ್ನು ನೋಡಲು ಬರುತ್ತಿದ್ದರು. ಅಲ್ಲಿ ನಾನು ಕೆಲವು ವಡ್ಡ ಯುವಕರ ಸಂಪರ್ಕ ಗಳಿಸಿದೆ.

ತಲೆಗೆ ಬ್ಯಾಂಡೇಜು ಹಾಕಿಯೇ ನನ್ನನ್ನು ಆಸ್ಪತ್ರೆಯಿಂದ ಕಳಿಸಿಕೊಟ್ಟರು. ಅದೇ ಸ್ಥಿತಿಯಲ್ಲಿ ನಾನು ಕಾರ್ಮಿಕರನ್ನು ಭೇಟಿ ಮಾಡುತ್ತ, ದೀರ್ಘ ಹೋರಾಟಕ್ಕಾಗಿ ಸಜ್ಜಾಗಲು ಅವರನ್ನು ಹುರಿದುಂಬಿಸತೊಡಗಿದೆ. ಅದಾಗಲೇ ಸೆಕ್ಷನ್ ೧೪೪ನ್ನು ಹಿಂದೆಗೆಯಲಾಗಿತ್ತು. ಸಂಘಟಿತ ಹೋರಾಟಕ್ಕಾಗಿ ಕಾರ್ಮಿಕರ ಉತ್ಸಾಹ ದಿನದಿಂದ ದಿನಕ್ಕೆ ಹೆಚ್ಚತೊಡಗಿತು.

**ವಡ್ಡರ ಹಟ್ಟಿಯಲ್ಲಿ ಭೂಗತ**

ಅದರಿಂದಾಗಿ ನನ್ನ ಬಂಧನಕ್ಕೆ ವಾರಂಟ್ ಹೊರಡಿಸಲಾಯಿತು. ಹಾಗಾಗಿ ನಾನು ಭೂಗತನಾಗಲೇ ಬೇಕಾಯಿತು. ಪೊಲೀಸರು ನನ್ನ ಬಂಧನಕ್ಕಾಗಿ ದಾವಣಗೆರೆ ಜಾಲಾಡತೊಡಗಿದಾಗಲೇ ನಾನು ಮತ್ತು ಮುರುಗಯ್ಯ ಕೊರಬ ಹಟ್ಟಿಯಲ್ಲಿ ಭೂಗತರಾದೆವು.

ಮರುದಿನ ನನ್ನನ್ನು ವಡ್ಡರ ಹಟ್ಟಿಗೆ ಕರೆದೊಯ್ಯಲಾಯಿತು. ಯಾಕೆಂದರೆ ಅಲ್ಲಿ ಸಂಗಾತಿ ಮುರುಗಯ್ಯ ಚಿರಪರಿಚಿತರು ಹಾಗೂ ಎಲ್ಲರೂ ಅವರನ್ನು ಗೌರವಿಸುತ್ತಿದ್ದರು. ಈ ರೀತಿ ದಾವಣಗೆರೆಯ ವಡ್ಡರೊಂದಿಗೆ ನನ್ನ ಬದುಕಿನ ದಿನಗಳು ಆರಂಭವಾದವು.

ವಡ್ಡರ ಹಟ್ಟಿಯಲ್ಲಿ ವಡ್ಡರೊಂದಿಗೆ ನಾನು ಸುಮಾರು ಒಂದು ವರುಷ ದಿನಗಳೆದೆ. ಆ ಅವಧಿಯಲ್ಲಿ ನಡುನಡುವೆ ದಾವಣಗೆರೆ ಮತ್ತು ಹರಿಹರದ ಕೆಲವು ಗುಪ್ತ ಜಾಗಗಳಿಗೆ ಹೋಗಿ ಉಳಿದುಕೊಂಡಿದ್ದೆ. ನನ್ನ ಅಣ್ಣ ಕೆಲಸ ಮಾಡುತ್ತಿದ್ದ ಹೊಸಪೇಟೆಗೂ ಒಮ್ಮೆ ಹೋಗಿದ್ದೆ. ಇನ್ನೊಮ್ಮೆ ದಕ್ಷಿಣ ಕನ್ನಡದ ನನ್ನೂರು ಅಡ್ಡೂರಿಗೂ ಹೋಗಿದ್ದೆ. ಆದರೆ ಹೆಚ್ಚಿನ ಅವಧಿಯನ್ನು ನಾನು ದಾವಣಗೆರೆಯ ವಡ್ಡರ ಹಟ್ಟಿಯಲ್ಲೇ ಕಳೆದೆ. ಅಲ್ಲಿ ಅವರು ನನ್ನನ್ನು ಜೋಪಾನವಾಗಿ ರಕ್ಷಿಸಿ, ನಿಷ್ಠೆಯಿಂದ ನೋಡಿಕೊಂಡರು.

**ವಡ್ಡರ ಜೀವನೋಪಾಯ**

ವಡ್ಡರು ದಾವಣಗೆರೆಯಲ್ಲಿ ಎರಡು ಕಾಲೊನಿಗಳಲ್ಲಿ ವಾಸ ಮಾಡಿಕೊಂಡಿದ್ದರು. ಇವು ಪೇಟೆಯ ಅಂಚಿನಲ್ಲಿದ್ದವು. ಕಾಲೊನಿಗಳನ್ನು ಹೊಲಗಳು ಸುತ್ತುವರಿದಿದ್ದವು. ನನ್ನ ಪತ್ತೆಗಾಗಿ ಯಾರಾದರೂ ಬಂದರೆ, ಈ ಹೊಲಗಳಿಗೆ ಓಡಿಹೋಗಿ ತಪ್ಪಿಸಿಕೊಳ್ಳಬಹುದೆಂಬ ಯೋಚನೆ ನನ್ನಲ್ಲಿ ಸುರಕ್ಷಿತ ಭಾವ ಹುಟ್ಟಿಸುತ್ತಿತ್ತು.

ದಾವಣಗೆರೆಯ ವಡ್ಡರನ್ನು ಕ್ರಿಮಿನಲ್‌ಗಳೆಂದು ಪರಿಗಣಿಸುತ್ತಿರಲಿಲ್ಲ. ಆದರೆ, ಭದ್ರಾವತಿಯ ವಡ್ಡರಿಗೆ ಕ್ರಿಮಿನಲ್‌ಗಳೆಂಬ ಹಣೆಪಟ್ಟಿ ಹಚ್ಚಲಾಗಿತ್ತೆಂದು ಕೇಳಿದ್ದೆ ಮತ್ತು ಅವರು ಕತ್ತಲಾಗುವ ಮುನ್ನ ತಮ್ಮ ಕಾಲೊನಿಗೆ ವಾಪಾಸಾಗಬೇಕೆಂಬ ನಿರ್ಬಂಧವಿತ್ತು. ದಾವಣಗೆರೆಯ ವಡ್ಡರಿಗೆ ಆ ರೀತಿಯ ನಿರ್ಬಂಧವಿರಲಿಲ್ಲ.

ದಾವಣಗೆರೆಯ ವಡ್ಡರು ಮೈ ಬಗ್ಗಿಸಿ ದುಡಿಯುವವರಾಗಿದ್ದರು. ಮುಂಜಾನೆ ತಮ್ಮ ಎತ್ತಿನಗಾಡಿಗಳಲ್ಲಿ ಪೇಟೆಯ ಹೊರವಲಯಕ್ಕೆ ಸಾಗಿ, ಕಲ್ಲುಗಳನ್ನು ಸಂಗ್ರಹಿಸಿ, ಪಿಡಬ್ಲ್ಯುಡಿ ಇಲಾಖೆಗೆ ಸರಬರಾಜು ಮಾಡುತ್ತಿದ್ದರು. ಬಹುಪಾಲು ಮನೆಗಳಲ್ಲಿ ಒಂದೊಂದು ಗಾಡಿ ಇತ್ತು. ಇವನ್ನು ಎಳೆಯಲು ಎಮ್ಮೆಗಳನ್ನೇ ಬಳಸುತ್ತಿದ್ದರು. ಆದರೆ ಎಮ್ಮೆಗಳು ಹಾಲು ಕೊಡುವ ಅವಧಿಯಲ್ಲಿ ಅವನ್ನು ಗಾಡಿಗಳಿಗೆ ಬಿಗಿಯುತ್ತಿರಲಿಲ್ಲ. ಬದಲಾಗಿ, ಆಗ

ಎಮ್ಮೆಗಳನ್ನು ಮನೆಯೊಳಗೇ ಇರಿಸಿ ಆರೈಕೆ ಮಾಡುತ್ತಿದ್ದರು. ಯಾಕೆಂದರೆ ತಮ್ಮ ಜೀವನೋಪಾಯಕ್ಕಾಗಿ ವಡ್ಡರು ಎಮ್ಮೆಗಳನ್ನೇ ಅವಲಂಬಿಸಿದ್ದರು.

**ವಡ್ಡರ ಮನೆಗಳಲ್ಲಿ......**

ಕೋಣೆಯ ಮೂಲೆಯೊಂದರಲ್ಲಿ ಮರದ ಚೌಕಟ್ಟಿಗೆ ಹುರಿಹಗ್ಗದ ಎಳೆಗಳನ್ನು ಬಿಗಿದು ರಚಿಸಿದ ಮಂಚದಲ್ಲಿ ನಾನು ಮಲಗುತ್ತಿದ್ದೆ. ಅದೇ ಕೋಣೆಯಲ್ಲಿ ಎಮ್ಮೆಗಳನ್ನೂ ಕಟ್ಟಿಹಾಕುತ್ತಿದ್ದರು. ಎಮ್ಮೆಗಳು ಬಾಲ ಬೀಸಿದಾಗ, ಬಾಲಗಳಿಗೆ ಅಂಟಿಕೊಂಡಿದ್ದ ಸೆಗಣಿ ಮತ್ತು ಮೂತ್ರ ಅನೇಕ ಬಾರಿ ನನ್ನ ಮೇಲೆ ಸಿಂಚನವಾದದ್ದುಂಟು. ಕೆಲವೊಮ್ಮೆ, ಮನೆಗಳ ಹೊರಗೆ, ನೆಲದಿಂದ ೬"ನಿಂದ ೯"ಎತ್ತರದ ಜಗಲಿಯಲ್ಲೂ ಮಲಗಿದ್ದುಂಟು. ಆದರೆ ಅಂಥ ಜಗಲಿಗಳಿದ್ದ ಮನೆಗಳು ವಿರಳವಾಗಿದ್ದವು.

ವಡ್ಡರು ನನಗೇನು ಕೊಟ್ಟರೂ ಅದನ್ನೇ ತಿನ್ನುತ್ತಿದ್ದೆ. ನನಗೆ ಅನ್ನ ಮತ್ತು ಒಣಗಿದ ಮೀನಿನ ಸಾಂಬಾರನ್ನೇ ಕೊಡುತ್ತಿದ್ದರು. ಇದರ ಹೊರತಾಗಿ ಬೇರೇನನ್ನೂ ತಿಂದದ್ದು ನನಗೆ ನೆನಪಿಲ್ಲ.

ಅಲ್ಲಿ ಸೊಳ್ಳೆಗಳ ಕಾಟ ನೆನಪಿಲ್ಲವಾದರೂ ತಿಗಣೆಗಳ ಕಾಟ ಚೆನ್ನಾಗಿ ನೆನಪಿದೆ. ಅಬ್ಬ, ಸಾವಿರಾರು ಸಂಖ್ಯೆಯಲ್ಲಿದ್ದ ತಿಗಣೆಗಳು ಸಾಲುಗಟ್ಟಿ ಗೋಡೆ ಹತ್ತುತ್ತಿದ್ದದ್ದು ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಅಂಥಲ್ಲಿ ಅಂದೊಮ್ಮೆ ನಿದ್ದೆ ಮಾಡಿದ್ದೆನೆಂಬುದನ್ನು ಈಗ ನನಗೆ ನಂಬಲಿಕ್ಕೂ ಸಾಧ್ಯವಾಗುತ್ತಿಲ್ಲ.

ಒಮ್ಮೆ ನಾನು ಇದ್ದ ಹಟ್ಟಿಗೆ ನಮ್ಮನ್ನು ಹುಡುಕಲೆಂದು ಹಲವು ಪೊಲೀಸ್ ಅಧಿಕಾರಿಗಳು ಬಂದಿದ್ದರು. ಅವರು ಹುಡುಕಾಡುವಾಗ ನಮ್ಮ ಹುಡುಗರು ತವಕದಿಂದ ನೋಡುತ್ತಾ ಇದ್ದರು. ಆಗ ಒಬ್ಬ ಪೊಲೀಸ್ ಅಧಿಕಾರಿಯು ಅವರ ಹಿಂದೆ ಬರುತ್ತಿದ್ದ ಪೊಲೀಸರೊಂದಿಗೆ ಅನ್ನುತ್ತಿದ್ದರಂತೆ, ''ಲೋ, ಅವರನ್ನು ನೋಡಿದೊಡನೆ ಗಬಕ್ಕನೆ ಹಿಡಕೊಂಡುಬಿಟ್ಟೀರಾ ! ಅವರು ಜೀವದ ಮೇಲೆ ಆಸೆ ಇಲ್ಲದ ಸೂ - ಮಕ್ಕಳು.'' ಇದನ್ನು ಆ ಯುವಕರು ನನ್ನೊಂದಿಗೆ ಹೇಳಿದಾಗ ನನಗೆ ನಗು ಬಂತು. ಯಾಕೆಂದರೆ ಆಗಿನ ನನ್ನ ತವಕ ನನಗೇ ಗೊತ್ತು : ಎಲ್ಲಿಯಾದರೂ ಹಿಡಿದುಬಿಟ್ಟಾರೋ ಅಂತ. ಅಂತೂ ಅಂದು ಪೊಲೀಸರಿಂದ ತಪ್ಪಿಸಿಕೊಂಡೆ.

ಇನ್ನೊಮ್ಮೆ ನಾನು ಪೇಟೆಯ ಕೇಂದ್ರದಲ್ಲಿರುವವರೊಬ್ಬರ ಮನೆಗೆ ಸಂಜೆಯಾಗುತ್ತಲೇ ಹೋಗಿದ್ದೆ. ಅಲ್ಲಿಗೆ ನಾನು ಹೋಗಿದ್ದು ಭೂಗತನಾದ ಮೇಲೆ ಅದೇ ಪ್ರಥಮಬಾರಿ. ನನ್ನ ಎದೆ ಕಪಕಪ ಎನ್ನುತ್ತಿತ್ತು : ಎಲ್ಲಾದರೂ ಪೊಲೀಸಿನವರು ನನ್ನನ್ನು ಗುರುತಿಸುತ್ತಾರೋ ಎಂದು. ಮಧ್ಯಮ ವರ್ಗದವರ ವಠಾರದಲ್ಲಿ ನಮಗೆ ಹಲವು ಬೆಂಬಲಿಗರಿದ್ದರೂ ಅಲ್ಲಿ ವಾಸವಾಗಿರಲು ಹಿಂಜರಿಯುತ್ತಿದ್ದೆ. ಕಾರ್ಮಿಕರ ವಸತಿಗಳಲ್ಲಿ, ಅದರಲ್ಲೂ ವಡ್ಡರ ಹಟ್ಟಿಯಲ್ಲಿ, ನಾನು ಸುರಕ್ಷಿತನೆಂಬ ಅನುಭವವಿತ್ತು.

ನನ್ನನ್ನು ಕರೆದುಕೊಂಡು ಹೋಗುತ್ತಿದ್ದ ವಡ್ಡರ ಯುವಕ ನನಗೆ ಅಂಗರಕ್ಷಕ. ಅವನು ನನಗೆ ಧೈರ್ಯ ಹೇಳುತ್ತಿದ್ದ. ನನ್ನ ಆತಂಕ ನೋಡಿ ಕೊನೆಗೆ ಹೇಳಿದ: ''ಹಾಗೇನಾದರೂ ನಿಮ್ಮನ್ನು ಪೊಲೀಸರು ಹಿಡಿದು ಕೊಂಡರೆ ನಾನು ಅವರನ್ನು ಗಟ್ಟಿಯಾಗಿ ಅಪ್ಪಿಕೊಳ್ಳುತ್ತೇನೆ, ನೀವು ಓಡಿಬಿಡಿ.'' ಅದರ ಪರಿಣಾಮ ಏನೆಂದು ಅವನು ಆಲೋಚಿಸಿದ್ದನೋ ಇಲ್ಲವೋ ! ಅವರ ಪ್ರೀತಿ ನನ್ನನ್ನು ಮಂತ್ರಮುಗ್ಧಗೊಳಿಸಿತು. ಅದರ ಗುಂಗು ಈಗಲೂ ನನ್ನಲ್ಲಿ ಉಳಿದು ಎಲ್ಲಾ ಮಾನವರೂ ಸಮಾನರು ಎಂಬ ಮನೋಭಾವವನ್ನು ಉಳಿಸಿಕೊಂಡಿದ್ದೇನೆ. ಇದಕ್ಕೆ ನಾನು ಅವರಿಗೆ ಋಣಿ.

ಗೋರ್ಕಿಯವರು ಕಾರ್ಮಿಕ ಜನರ ಮಧ್ಯೆ ಜೀವನದ ಅನುಭವಗಳನ್ನು ಅವರ ಆತ್ಮಚರಿತ್ರೆಯಲ್ಲಿ ವಿವರಿಸಿದ್ದಾರೆ. ಅದರಲ್ಲಿ ಇಂತದ್ದೇ ಅನುಭವಗಳನ್ನು ಚಿತ್ರಿಸಿದ್ದಾರೆ.

ಇತ್ತೀಚೆಗೆ ಕಾ. ಎನ್.ಪಿ. ಶಂಕರನಾರಾಯಣರಾಯರ ಒಂದು ಪುಸ್ತಕದಲ್ಲಿ ಮೈಸೂರಿನ ಜಾಡಮಾಲಿಗಳ ಮಧ್ಯೆ ಅವರ ಜೀವನದ ಬಗ್ಗೆ ಸ್ವಲ್ಪ ಹಿಂಟ್ ಕೊಟ್ಟಿದ್ದಾರೆ. ಆಗ ನನಗನಿಸಿತ್ತು : ಎಲ್ಲಾ ಕಮ್ಯುನಿಸ್ಟರೂ ಇಂತಹ ಅನುಭವಗಳಿಂದಲೇ ಮಾನವತಾವಾದಿಗಳಾಗಿದ್ದಾರೆ ಅಂತ.

ಇವೆಲ್ಲ ಚಿಕ್ಕಪುಟ್ಟ ತೊಂದರೆಗಳಿದ್ದರೂ ಅಲ್ಲಿನ ಬದುಕು ಒಂದು ರೋಚಕ ಅನುಭವ. ವಡ್ಡರು ನನ್ನ ಬಗ್ಗೆ ತೋರಿದ ನಿಷ್ಠೆ ಮತ್ತು ಪ್ರೀತಿಯನ್ನಂತೂ ಮರೆಯಲಾಗದು. ಅವರೊಂದಿಗೆ ದಿನಗಳೆದಂತೆ ಅವರ ಬಗ್ಗೆ ನನ್ನಲ್ಲೂ ಪ್ರೀತಿ ಭಾವ ಬೆಳೆಯಿತು. ಅವರೂ ನನ್ನಂತೆಯೇ ಮನುಷ್ಯರೆಂಬ ಅರಿವು ಅನುಭವದಲ್ಲಿ ಬೇರೂರಿತು.

ಇದರಿಂದಾಗಿ ಜನಸಾಮಾನ್ಯರ ಬಗ್ಗೆ ನನ್ನ ಧೋರಣೆಯೇ ಸಕಾರಾತ್ಮಕವಾಯಿತು. ''ನಾವೆಲ್ಲರೂ ಸಮಾನರು, ನಾವೆಲ್ಲರೂ ಅಣ್ಣ ತಮ್ಮಂದಿರು ಹಾಗೂ ಅಕ್ಕತಂಗಿಯರು'' ಎಂದು ನಮ್ಮಲ್ಲಿ ಅನೇಕರು ಘೋಷಣೆ ಕೂಗಬಹುದು. ಭೂಗತನಾಗಿದ್ದ ನನಗೆ ಒಂದು ವರುಷ ಅನ್ನ ಆಶ್ರಯವಿತ್ತ ವಡ್ಡರು ಅದನ್ನು ಆಚರಿಸಿ ತೋರಿಸಿದರು. ವಡ್ಡರಿಂದ ಕಲಿತ ಇಂಥ ಅಮೂಲ್ಯ ಪಾಠವನ್ನು ಬದುಕಿನಲ್ಲಿ ಮರೆಯಲಿಕ್ಕುಂಟೇ ?

**ಎ. ಶಿವಶಂಕರ ರಾವ್**
'ಕೃಷ್ಣಾ ಫಾರ್ಮ್', ಅಡ್ಡೂರು ಅಂಚೆ
ಗುರುಪುರ, ಮಂಗಳೂರು ತಾಲ್ಲೂಕು - ೫೭೪ ೧೪೫

*(೧೬ನೇ ಪುಟದಿಂದ)*

ದೇಸೀ ನೆಲೆಯು ಸಂಸ್ಕೃತದ ಎದುರಿಗೆ ನಿರ್ಲಿಪಿಕ ಮತ್ತು ನವಲಿಪಿಕ ಎಂಬ ಎರಡು ಮಾರ್ಗಗಳಲ್ಲಿ ಹೋರಾಡಿದೆ. ನಿರ್ಲಿಪಿಕವು ಜನಪದವೂ ನವಲಿಪಿಕವು ವಚನ ಚಳುವಳಿಯಂತಹ ಸುಧಾರಣಾವಾದೀ ವರ್ಗವೂ ಆಗಿದೆ. ನಿರ್ಲಿಪಿಕರು ತಮ್ಮ ಆಡುಭಾಷೆಗೆ ತತ್ಸಮ-ತದ್ಭವ-ಜೋಡಿಪದ ಹೀಗೆ ಮೂರು ನೆಲೆಗಳಲ್ಲಿ ಯಜಮಾನ ಭಾಷೆಯನ್ನು ತಂದುಕೊಂಡರೆ, ನವಲಿಪಿಕವು ಯಾಜಮಾನ್ಯ ಲಿಪಿ ಶರೀರದ ಮೇಲೆ ದಾಳಿ ಮಾಡುವ ಮೂಲಕ ಅದನ್ನು ನಿರಾಕರಿಸಿ ತನ್ನದೇ ಮೌಲ್ಯ ವ್ಯವಸ್ಥೆಯ ಲಿಪಿ ಶರೀರವನ್ನು ಕಟ್ಟಿಕೊಳ್ಳುತ್ತದೆ. ಹಾಗೇ ತನ್ನೆಲ್ಲಾ ಮೌಖಿಕ ಜ್ಞಾನವನ್ನೂ ಲಿಪೀಕರಣಗೊಳಿಸಿಕೊಳ್ಳುವ ಮೂಲಕ ತನಗೂ ಒಂದು ಲಿಪಿಕ ಅಧಿಕೃತತೆ, ಆ ಮೂಲಕ ಶ್ರೇಷ್ಠತೆಯನ್ನು, ತಂದುಕೊಳ್ಳಲು ಯತ್ನಿಸುತ್ತದೆ.

ಈ ಶಿಷ್ಟ ಮತ್ತು ದೇಸೀ ಎರಡೂ ನೆಲೆಗಳ ಆತ್ಯಂತಿಕ ಉದ್ದೇಶವು ಅಂತಿಮವಾಗಿ ಯಾಜಮಾನ್ಯದ ಸರಿಸಮಾನ ಹಾಗೂ ಉನ್ನತ ಅಂತಸ್ತನ್ನು ಕಟ್ಟಿಕೊಳ್ಳುವುದೇ ಆಗಿರುತ್ತದೆ. ಇದಕ್ಕೆ ಉದಾಹರಣೆಗಾಗಿ ವಚನ ಚಳುವಳಿ, ಕೇಶೀರಾಜ, ಶ್ರೀವಿಜಯ ಇವರ ಭಾಷಿಕ ಆಕೃತಿಗಳನ್ನು ಅವಲೋಕಿಸಬಹುದಾಗಿದೆ.

ಇಷ್ಟೆಲ್ಲಾ ಚರ್ಚೆಗಳಿಂದ ತಿಳಿಯುವ ಮಾರ್ಗೋಪಾಯಗಳೆಂದರೆ :

೧. ಜ್ಞಾನದ ಲಿಪೀಕರಣ - ದೇಸೀ ಮತ್ತು ಜಾಗತಿಕ ಜ್ಞಾನಗಳೆರಡರ ಕನ್ನಡೀಕರಣ.

೨. ಕನ್ನಡದ ವೈಶ್ವೀಕರಣ - ಜಾಗತಿಕ ವ್ಯವಹಾರ ಮತ್ತು ಅಗತ್ಯಗಳಿಗೆ ತಕ್ಕಂತೆ ಕನ್ನಡದ ಉತ್ಪಾದಕತೆ ಮತ್ತು ಕಾರ್ಯಕ್ಷಮತೆಯನ್ನು ಹೆಚ್ಚಿಸುವುದು.

೩. ನುಡಿ ಬೆರಕೆಯನ್ನು ಮಡಿಯಿಲ್ಲದೆ ಮಾಡುವುದು.

೪. ಇಂಗ್ಲಿಷನ್ನು ನಿರ್ವ್ಯಾಕರಣ ಮಾಡುತ್ತಾ ಅದನ್ನು ಜೀರ್ಣಿಸಿಕೊಂಡು ಕಂಗ್ಲಿಷನ್ನು ಸೃಷ್ಟಿಸುವುದು. ಅಂದರೆ ನಮಗೆ ಹೇಗೆ ಬೇಕೋ ಹಾಗೆ ಇಂಗ್ಲಿಷನ್ನು ಬಳಸುವುದು.

೫. ಇಂಗ್ಲಿಷಿನ ಅಂತಸ್ತಿಗೆ ಕನ್ನಡವನ್ನು ಸರಿಗಟ್ಟುವಂತೆ ಕಟ್ಟುವುದು. ಕನ್ನಡದ ಆಯ್ಕೆ ಕೀಳರಿಮೆ ಹುಟ್ಟಿಸದಂತಹ - ಗೌರವ ಮೂಡಿಸುವಂತಹ ವಾತಾವರಣ ನಿರ್ಮಿಸುವುದು, ಇತ್ಯಾದಿ.

ಇವುಗಳಲ್ಲಿ ಬಹುಪಾಲು ಕೆಲಸವನ್ನು ನಾವಿಂದು ಮಾಡುತ್ತಿದ್ದೇವೆ. ಜನಾಭಿಪ್ರಾಯ ಮತ್ತು ವಾಸ್ತವ ಏನೆಂದರೆ, ಇಂಗ್ಲಿಷನ್ನು ಕಲಿಯಬೇಕೆಂಬ ಆಮಿಷಕ್ಕೆ ಕನ್ನಡಿಗರು ಒಳಗಾಗಿದ್ದಾರೆ. ಜಾಗತಿಕ ಅಗತ್ಯಗಳಿಗಾಗಿ ಇಂಗ್ಲಿಷ್ ಕಲಿಯುವುದು ಇಂದು ಅನಿವಾರ್ಯ ಎಂಬ ಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದ ವ್ಯವಹಾರಕ್ಕೆ ಅಗತ್ಯವಾದಷ್ಟು ಇಂಗ್ಲಿಷನ್ನು ಕನ್ನಡದ ಮೂಲಕವೇ ಕಲಿಸುವ ವ್ಯವಸ್ಥೆ ಮಾಡುವುದು ಉಚಿತ. ಕನ್ನಡದ ಮೂಲಕ ಇಂಗ್ಲಿಷನ್ನು ಕಲಿಯುವುದು ಸುಲಭ ಹಾಗೂ ಹಾಗೆ ಕಲಿತರೆ ನಮ್ಮದೇ ಕಂಗ್ಲಿಷ್ ನಿರ್ಮಾಣವಾದಂತೆಯೂ ಆಗುತ್ತದೆ. ಹಾಗಾಗಿ ಕಾನ್ವೆಂಟುಗಳಲ್ಲಿ ಇಂದು ಇಂಗ್ಲಿಷ್ ಮಾಧ್ಯಮದ ಮೂಲಕ ಕಲಿಸುತ್ತಿರುವ ಇಂಗ್ಲಿಷನ್ನು ಕನ್ನಡ ಮಾಧ್ಯಮ ಮತ್ತು ವಿಧಾನದ ಮೂಲಕ ಕಲಿಸುವ ಏರ್ಪಾಟಾಗಬೇಕಿದೆ. ಜಾಗತಿಕ ಸಂಸ್ಕೃತಿ - ಸ್ಥಳೀಯ ಸಂಸ್ಕೃತಿಗಳ ವಸ್ತು ವಿವರಗಳಿಗೆ ತಲಾ ಶೇ. ೫೦-೫೦ ಪಠ್ಯಭಾಗವನ್ನು ಮೀಸಲಿಡುವ ಮೂಲಕ ಜಾಗತಿಕ ವಸ್ತು ವಿವರಗಳನ್ನು ಕನ್ನಡೀಕರಿಸಿ ಕಲಿಸುವ ವ್ಯವಸ್ಥೆಯನ್ನೂ ಅನುಸರಿಸುವುದು ತಾತ್ಕಾಲಕ್ಕೆ ಜನಭಾಗಿತ್ವವನ್ನು ಸೆಳೆಯುವ ಸರಳ ಮಾರ್ಗವಾಗಿದೆ.

**ರಾಮಲಿಂಗಪ್ಪ ಟಿ. ಬೇಗೂರು**
ನಂ. ೪೧೬, ೨ನೇ ಕ್ರಾಸ್, ಗೌರೀಪೇಟೆ, ಕೋಲಾರ- ೫೬೩ ೧೦೧

# ದಲಿತರು ಮತ್ತು ಹಿಂಸೆ

ಐ. ಜಿ. ಮ್ಯಾಗೇರಿ

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ 'ಹೊನ್ನಾಳಿ ಹೊಡ್ತ'ದ ಒಂದು ಶಿಕ್ಷೆಯ ಚಿತ್ರಣ ಬರುತ್ತದೆ. ಅದು ದಲಿತರಿಗೆ, ಬಡಬಗ್ಗರಿಗೆ ಮಲೆನಾಡಿನ ಹೆಗ್ಗಡೆಗಳು ಕೊಡುವ ಭಯಾನಕ ಶಿಕ್ಷೆಯ ಹಿಂಸೆಯ ಸ್ವರೂಪ. ಇಲ್ಲಿ ಮಲೆನಾಡು ಹಳೆಯ ಊಳಿಗಮಾನ್ಯ ಸಾಮಾಜಿಕ ಸಂಬಂಧಗಳನ್ನು ಪ್ರತಿನಿಧಿಸುತ್ತದೆ. ಈ ಕಾದಂಬರಿಯ ಮೂಲಕ ಕುವೆಂಪು ಅವರು ನೀಡುವ ೧೯ನೇ ಶತಮಾನದ ಮಲೆನಾಡಿನ ಚಿತ್ರಣಕ್ಕೂ, ೨೦ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸಂಭವಿಸುತ್ತಿರುವ ದಲಿತ ಶೋಷಣೆಯ ಚಿತ್ರಣಕ್ಕೂ ದೊಡ್ಡ ವ್ಯತ್ಯಾಸವೇನೂ ಇಲ್ಲ. ಹಿಂದೆ ಕರ್ನಾಟಕದ ಮೂಲೆಯೊಂದರಲ್ಲಿ ಕಾಣದ ಹಾಗೆ ನಡೆಯುತ್ತಿದ್ದ ಹಿಂಸೆಯ ಚಟುವಟಿಕೆಗಳು ಈಗ ಅಖಿಲ ಕರ್ನಾಟಕದ ವ್ಯಾಪ್ತಿಗೆ ವಿಸ್ತರಿಸಿಕೊಂಡಿದ್ದೆ ಒಂದು ಶತಮಾನದ ವೈಶಿಷ್ಟ್ಯ.

ಸಮಾಜದಲ್ಲಿ ಬಲಿಷ್ಠ ಮತ್ತು ಹಿಂದುಳಿದ ವರ್ಗಗಳ ಮಧ್ಯೆ ನಡೆಯುತ್ತಿರುವ ಸಂಘರ್ಷಗಳು ಈಚಿನವಲ್ಲ. ಕಲೆ, ಆಚರಣೆ, ಶಾಸನ ಮತ್ತು ಆ್ಯಂಟಿಕ್ವರಿಗಳಿಂದ ಈ ಬಗೆಯ ಸಂಘರ್ಷವನ್ನು ಸಾಂಸ್ಕೃತೀಕರಣಗೊಳಿಸುವುದರ ಮೂಲಕ ಸಂಸ್ಕೃತಿಯ ರೂಪವನ್ನು ಸಿರಿವಂತಗೊಳಿಸುವ ಅಧ್ಯಯನಗಳು ಅದಕ್ಕೆ ಕಾರಣವಾಗಿರುವ ಅಪಮಾನ ನೀತಿಯ ಆಳಕ್ಕೆ ಹೋಗಲಿಲ್ಲ. ಸಮಾಜವೊಂದರಲ್ಲಿ ಉಳ್ಳವರ ಮತ್ತು ಬಡವರ ಮಧ್ಯೆ ಯಾಕೆ ಸಂಘರ್ಷಗಳು ಜರುಗುತ್ತವೆ ಎಂಬ ಬಗ್ಗೆ ಬಹುಶಃ ಕನ್ನಡದ ಚೋಮನ ದುಡಿ ಮತ್ತು ಒಡಲಾಳ ಕಾದಂಬರಿಗಳು ತುಂಬಾ ಮುಕ್ತವಾಗಿ ಮತ್ತು ತಾತ್ವಿಕವಾಗಿ ಚರ್ಚಿಸುತ್ತವೆ ಮತ್ತು ಅವು (ಕುವೆಂಪು ಒಳಗೊಂಡಂತೆ) ಹಿಂಸೆಯನ್ನು ಮನುಷ್ಯ ವಿರೋಧಿ ನಿಲುವನ್ನಾಗಿ ಪರಿಗಣಿಸುತ್ತವೆ. ಕುವೆಂಪು ದಲಿತರ ಹಿಂಸೆಯ ಸ್ವರೂಪವನ್ನು ವಿವರಿಸಿದರೆ, ಚೋಮನ ದುಡಿ ಮತ್ತು ಒಡಲಾಳಗಳು ಹಿಂಸೆಗೆ ಮೂಲವಾದ ಸಾಮಾಜಿಕ ಮತ್ತು ರಾಜಕೀಯ ಕಾರಣಗಳನ್ನು ಶೋಧಿಸಲು ತೊಡಗುತ್ತವೆ. ಚೋಮ ಮತ್ತು ಸಾಕವ್ವಳ ಕನಸೇ ಇಂದಿನ ಒಟ್ಟು ದಲಿತ ಜನಾಂಗದ ಕನಸಾಗಿದ್ದರಿಂದ, ಹೀಗೆ ಕನಸು ಕಾಣುವ ಹಕ್ಕನ್ನೂ ಸಹಿಸದ ಬಲಿಷ್ಠ ಶಕ್ತಿಗಳು ಅವರ ಕನಸನ್ನು ಛಿದ್ರೀಕರಣಗೊಳಿಸುವ ಕೆಲಸ ಮಾಡುತ್ತಿವೆ. ಸ್ವಂತ ನೆಲವನ್ನು ಉಳುವ ಕಾರಣಕ್ಕಾಗಿ ಚೋಮನನ್ನು ಪ್ರತಿನಿಧಿಸುವ ದಲಿತರು ದಣಿಯರ ಹಿಂಸೆಗೆ ಗುರಿಯಾದರೆ, ಹಸಿವು, ಅನ್ನ, ನೀರಿಗಾಗಿ ಸಾಕವ್ವನನ್ನು ಪ್ರತಿನಿಧಿಸುವ ದಲಿತರು ಕ್ರಿಮಿನಲ್ ಪಟ್ಟಿಯಲ್ಲಿ ಸೇರುವಂತಾಗಿದೆ. ಇಂದು ದಲಿತರ ಮತ್ತು ಬಲಿಷ್ಠ ಜನಾಂಗಗಳ ಮಧ್ಯೆ ನಡೆಯುತ್ತಿರುವ ಅಂತರ್ಯುದ್ಧದ ಸ್ವರೂಪ ಸ್ಥೂಲವಾಗಿ ಇದೇ ಬಗೆಯದ್ದಾಗಿದೆ. ಹೀಗಾಗಿ ಅಂತಿಮವಾಗಿ ದಲಿತರು ತಮ್ಮ ನೆಲದಿಂದಲೂ, ಬೇರೆಯವರ ನೆಲದಿಂದಲೂ ಅನೇಕ ಬಗೆಯ ಹಿಂಸೆಯನ್ನು ಅನುಭವಿಸಬೇಕಾಗಿ ಬಂದಿರುವುದು ಆಧುನಿಕ ಸಾಮಾಜಿಕ ಸಂಬಂಧಗಳು ಇನ್ನಷ್ಟು ಹಿಂಸಾತ್ಮಕವಾಗಿರುವುದನ್ನು ಸೂಚಿಸುತ್ತದೆ. ಹೇಗೆ ಚೋಮ ಮತ್ತು ಸಾಕವ್ವಳಿಗೆ ಸಾಮಾಜಿಕ, ರಾಜಕೀಯ ಬೆಂಬಲವಿಲ್ಲವೋ ಹಾಗೆ ಇಂದಿನ ದಲಿತರಿಗೆ ಇಂಥ ಬೆಂಬಲವಿಲ್ಲ. ಮೀಸಲಾತಿ ಎಂಬ ರಾಜಕೀಯ ಬೆಂಬಲ ದಲಿತರ ಮಾನಸಿಕ ಹಿಂಸೆಯನ್ನು ತಪ್ಪಿಸಬಹುದೇ ಹೊರತು ದೈಹಿಕ ಹಿಂಸೆಯನ್ನಲ್ಲ.

**ವ್ಯವಸ್ಥೆ ಮತ್ತು ಹಿಂಸೆ**

ಜಾತಿ ಧರ್ಮಗಳಿಂದ ಹೊರತಾಗಿ ಜೀವನದ ಮೂಲಭೂತ ಬೇಡಿಕೆಗಳಿಂದ ವಂಚಿತವಾದ ಎಲ್ಲ ಶೋಷಿತ ಸಮುದಾಯಗಳನ್ನು 'ದಲಿತ' ಎಂದು ನಿರ್ವಚಿಸುವುದಾದರೆ, ಆ ಸಮುದಾಯಗಳು ಅನುಭವಿಸುತ್ತಿರುವ ಹಿಂಸೆ ಸಾಮಾಜಿಕ ಮತ್ತು ರಾಜಕೀಯವಾಗಿ ಭಿನ್ನವಾಗಿವೆ. ವರ್ಣಾಶ್ರಮ ಆಧಾರವಾದ ದಲಿತ ವರ್ಗ ಜಾತಿ-ಧರ್ಮಗಳ ಕಠೋರತನದಿಂದ ಹಿಂಸೆಗೆ ಒಳಪಟ್ಟರೆ ಆರ್ಥಿಕ ಮೂಲದ ದಲಿತ ವರ್ಗ ರಾಜಕೀಯವಾಗಿ ಹಿಂಸೆಗೆ ಒಳಪಟ್ಟಿದೆ. ಅಂತಿಮವಾಗಿ ಎರಡೂ ವರ್ಗಗಳ ಹಿಂಸೆಯ ಮೂಲ ಆರ್ಥಿಕ ಶಕ್ತಿಗಳಲ್ಲಿದೆ. ಕರ್ನಾಟಕದಲ್ಲಿ ಸಾಮಾಜಿಕವಾಗಿ ಸವರ್ಣೀಯರಿಂದ, ಆಂಧ್ರಪ್ರದೇಶದಲ್ಲಿ ಜಮೀನ್ದಾರರಿಂದ ಮತ್ತು ಬಿಹಾರದಲ್ಲಿ ಮೇಲ್ವರ್ಗದಿಂದ ದಲಿತರು ಹಿಂಸೆಗೆ ಒಳಗಾಗುತ್ತಿದ್ದುದನ್ನು ಗಮನಿಸಿದರೆ ಧರ್ಮಾರ್ಥವಾಗಿ ಬಲಿಷ್ಠಗೊಂಡ ಸಮುದಾಯಗಳ ಉದ್ದೇಶ ಸ್ಪಷ್ಟವಾಗುತ್ತದೆ. ಸವರ್ಣೀಯರಿಗೆ ಅಥವಾ ಬಲಿಷ್ಠ ಜನಾಂಗಗಳಿಗೆ ಉತ್ಪಾದನೆ ಬೇಕು ಮತ್ತು ಬಡ ಕೂಲಿ ಕಾರ್ಮಿಕರು ರಕ್ತ ಸುಟ್ಟುಕೊಂಡು ಅವರ ಉತ್ಪಾದನೆಯನ್ನು ಹೆಚ್ಚಿಸಬೇಕು. ''ನಿಮ್ಮ ಉತ್ಪಾದನೆಗೆ ನಮ್ಮ ಶ್ರಮ ಬೇಕು, ಬೆವರು ಬೇಕು, ಆದರೆ ನಮ್ಮ ದಟ್ಟ ದಾರಿದ್ರ್ಯದ ಬದುಕು ಬೇಡ'' ಎಂದು ಪ್ರತಿಭಟಿಸುವ ದಲಿತ ಸಮುದಾಯಗಳಿಗೆ ದಿಗ್ಬಂಧನ ಹೇರುವ ಪ್ರವೃತ್ತಿಯಿಂದಾಗಿ ಹಿಂಸೆ ಉತ್ಪಾದಿತಗೊಳ್ಳುತ್ತದೆ. ಊಳಿಗಮಾನ್ಯಶಾಹಿ ವಿರುದ್ಧದ ಫ್ರೆಂಚ್ ಕ್ರಾಂತಿಗೂ ಇದೇ ಮೂಲ ಕಾರಣವಾಯಿತು. ಈ ಕ್ರಾಂತಿಯ ಕನಸುಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತೆಗಳು ಇಂದಿನ ದಲಿತ ಹೋರಾಟದ ಹಿಂದಿನ ಶಕ್ತಿಗಳಾಗಿದ್ದು ಆಶ್ಚರ್ಯವೇನಲ್ಲ.



ಯಾರೋ ಕೇಳಿದ್ರು, ಇಲ್ಲಿ ಅಸ್ಪೃಶ್ಯಗಳಿಲ್ಲ.
ಇಡೀ ಭಗವದ್ಗೀತೆಯನ್ನು ಫೋನಿನಲ್ಲಿ
ಓದಿ ಬರುವಾಗ ಇಷ್ಟೊತ್ತಾಯಿತು....

ಹಿಂಸೆಯನ್ನು ಹುಟ್ಟುಹಾಕುವವರು ಯಾರು ? ಮತ್ತು ಅದನ್ನು ಅನುಭವಿಸುವವರು ಯಾರು ? ಎಂಬ ಪ್ರಶ್ನೆಗಳು ಹಿಂಸೆಯನ್ನು ಸಾಧ್ಯವಾಗಿಸುವ ಸಂಸ್ಕೃತಿಯ ರೂಪವನ್ನು ವಿಶ್ಲೇಷಿಸುವಂತೆ ಒತ್ತಾಯಿಸುತ್ತದೆಯಾದ್ದರಿಂದ ಅದರ ಸ್ವರೂಪ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕತೆಗಳ ಸಂಕೀರ್ಣ ಚೌಕಟ್ಟಿನಲ್ಲಿ ವ್ಯಕ್ತವಾಗುತ್ತದೆ. ಈ ಚೌಕಟ್ಟು ಒಂದು ವರ್ಗ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ಇನ್ನೊಂದು ವರ್ಗವನ್ನು ದಮನಿಸುವ ಶಕ್ತಿಯನ್ನು ಪಡೆದುಕೊಂಡಿರುತ್ತದೆ. ಇಂತಹ ವ್ಯವಸ್ಥೆ ಪ್ರಭು - ಭೃತ್ಯ; ಜಮೀನ್ದಾರ - ಕೂಲಿಕಾರ; ಬಂಡವಾಳಶಾಹಿ - ಕಾರ್ಮಿಕ ಇತ್ಯಾದಿ ರೂಪಗಳಲ್ಲಿ ಪ್ರಕಟವಾಗುತ್ತದೆ. ಪುರೋಹಿತಶಾಹಿ ಕಾಲದಲ್ಲಿ ರೂಪುಗೊಂಡ ಪ್ರಭು ಭೃತ್ಯ ವ್ಯವಸ್ಥೆಗಳು ಊಳಿಗಮಾನ್ಯಶಾಹಿ ಕಾಲದಲ್ಲಿ ಜಮೀನ್ದಾರ - ಗುಲಾಮ ರೂಪಗಳಲ್ಲಿ ವ್ಯಕ್ತವಾಯಿತು. ಬಂಡವಾಳಶಾಹಿ ಕಾಲದಲ್ಲಿ ಅದು ಬಂಡವಾಳಗಾರ-ಕಾರ್ಮಿಕರ ಜೊತೆಗೆ ದಲಿತ ರೂಪದ ಶೋಷಣೆಯಲ್ಲಿ ವ್ಯಕ್ತವಾಯಿತು. ಆದರೆ ಭಾರತದಂತಹ ಜಾತಿನಿಷ್ಠ ದೇಶದಲ್ಲಿ ಈ ಸಮಸ್ಯೆ ಇನ್ನಷ್ಟು ಸಂಕೀರ್ಣಗೊಂಡು ಅನೇಕ ಬಗೆಯ ಜಾತಿ ವ್ಯವಸ್ಥೆಗಳಾದವು. ಇಲ್ಲಿ ಬ್ರಾಹ್ಮಣರ ಜಾತಿ ವ್ಯವಸ್ಥೆಯ ಹಾಗೆ ದಲಿತರ ವ್ಯವಸ್ಥೆ ಇಲ್ಲದ್ದರಿಂದ ಅಂಥ ವ್ಯವಸ್ಥೆಗಳನ್ನು ಶ್ರೇಣೀಕರಣಕ್ಕೆ ಒಳಪಡಿಸಲಾಯಿತು. ಮೊದಲಿನಿಂದಲೂ ಭಾರತದಲ್ಲಿ ಮನುಷ್ಯನ ಜಾತಿ ಹಾಗೂ ಶ್ರೇಷ್ಠತೆಗಳು ಹುಟ್ಟಿನಿಂದಲೇ ನಿರ್ಧರಿಸಲ್ಪಡುವುದರಿಂದ ದಲಿತರ ಬದುಕು ಮತ್ತು ಸಮುದಾಯವನ್ನು ವ್ಯಕ್ತಿಯೇತರ ಹಾಗೂ ಪ್ರಕೃತಿದತ್ತ ನೆಲೆಯಿಂದ ವ್ಯಾಖ್ಯಾನಿಸಲಾಯಿತು. ಆದ್ದರಿಂದಲೇ ಬಡವ-ಕೂಲಿಕಾರ-ದಲಿತ ಸಮುದಾಯಗಳನ್ನು ಪ್ರಕೃತಿಯಿಂದಲೇ ಉದ್ಭವಿಸಿದ ಗುಣಗಳೆಂದು ಹೇಳಿ, ಆ ವ್ಯವಸ್ಥೆಯ ಶಾಶ್ವತ ಜೀವಂತಿಕೆಗಾಗಿ ಅನುಗುಣವಾದ ಹಿಂಸೆಯನ್ನು ಪ್ರಭುತ್ವವೇ ರೂಪಿಸಿತು. ಹೀಗಾಗಿ ''ಇರುವ ವ್ಯವಸ್ಥೆ ಎಷ್ಟೇ ಹಿಂಸಾತ್ಮಕವಾಗಿದ್ದರೂ ಅದನ್ನು ಸಹಿಸಿಕೊಳ್ಳಬೇಕು. ಏಕೆಂದರೆ ಅದನ್ನು ಬದಲಾಯಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ವ್ಯಕ್ತಿ ಈ ವ್ಯವಸ್ಥೆಯನ್ನು ಒಪ್ಪಿಕೊಂಡು ಅದು ಕೊಡುವ ಹಿಂಸೆಗೆ ಹೊಂದಿಕೊಂಡು ಹೋಗುವುದರ ವಿನಃ ಅನ್ಯಮಾರ್ಗವೇ ಇಲ್ಲ,'' ಎಂದು ಬೋಧನೆ ಮಾಡಲಾಯಿತು. ವಾಸ್ತವವಾಗಿ ಹೀಗೆ ಬೋಧಿಸುವವರು ಪ್ರಭುತ್ವದ ಪ್ರತಿನಿಧಿಗಳಾಗಿರುತ್ತಾರೆ ಮತ್ತು ಈ ಪ್ರತಿನಿಧಿಗಳು ಧಾರ್ಮಿಕ ಶ್ರೇಣಿಯ ಶಿಖರದಲ್ಲಿರುತ್ತಾರೆ. ಅಂದರೆ ಹಿಂಸೆ

ದಲಿತರಿಗಾಗಿ ಮತ್ತು ದಲಿತರಿರುವುದೇ ಹಿಂಸೆಗಾಗಿ ಎಂಬ ಸಮೀಕರಣ ಇಲ್ಲಿಂದಲೇ ಸಿದ್ಧಗೊಳ್ಳುತ್ತದೆ.

**ನಂಬಿಕೆಯ ಪ್ರಶ್ನೆ**

ಚೋಮನ ಆಸ್ತಿಯ ಸಂಬಂಧದ ವಿಷಮ ಪರಿಸ್ಥಿತಿ ವರ್ಗಗಳ ದ್ವೈವಿಕತೆಯಲ್ಲಿದೆ. ಅಂದರೆ ದಲಿತರಿಗೆ ಭೂಮಿಯನ್ನು ಕೊಡುವ ನಿರ್ಧಾರ ಧಾರ್ಮಿಕ ನಂಬಿಕೆಯ ಭಾಗವಾಗಿಯೇ ಹುಟ್ಟಿಕೊಳ್ಳುತ್ತದೆ. ಈ ನಂಬಿಕೆಯ ಸ್ಥಿತಿಯಿಂದಾಗಿಯೇ ಆಸ್ತಿಯ ಮೇಲಾಗಲಿ ಮತ್ತು ಸಮಾಜದ ಸಂಪನ್ಮೂಲಗಳ ಮೇಲಾಗಲಿ ದಲಿತರಿಗೆ ಹಕ್ಕಿಲ್ಲ. ಗೇಣಿ ಭೂಮಿಗಳಲ್ಲಿ ದುಡಿಯುವ ದಲಿತ ರೈತ ಕೇವಲ ಉತ್ಪಾದನೆಯ ಒಂದು ಭಾಗ ಮಾತ್ರ. ಈ ಉತ್ಪಾದನೆಯ ಭಾಗದಲ್ಲಿ ಪಾಲು ಕೇಳುವಾಗ ದಲಿತನಿಗೆ ಎದುರಾಗುವ ಮುಖ್ಯ ಸಮಸ್ಯೆಯೆಂದರೆ ನಂಬಿಕೆಯದು. ದಲಿತರ ಬದುಕಿಗೆ ಅಗತ್ಯವಾದ ಆರ್ಥಿಕ ವ್ಯವಸ್ಥೆ ನಂಬಿಕೆಯ ಬೆಳವಣಿಗೆಯ ಜೊತೆಗೆ ಸಂಬಂಧ ಹೊಂದಿದ್ದರಿಂದ ಅವರು ತುಂಡು ಭೂಮಿಯನ್ನು ಕೇಳುವ ಹಾಗಿಲ್ಲ. ಕುರುಡು ಶ್ರದ್ಧೆಯ ತಮ್ಮ ತಾಯಿ ಅಡ್ಡ ಬರದಿದ್ದರೆ ಸಂಕಪ್ಪಯ್ಯ ಚೋಮನಿಗೆ ಒಂದು ತುಂಡು ನೆಲವನ್ನಾದರೂ ಗೇಣಿಗೆ ಕೊಡುತ್ತಿದ್ದರೋ ಏನೋ, ಆದರೆ ಅವರ ತಾಯಿ ಬದುಕಿರುವವರೆಗೆ ಅದು ಸಾಧ್ಯವಿಲ್ಲ. ದಲಿತರಿಗೆ ಭೂಮಿಯನ್ನು ಕೊಟ್ಟರೆ ತಮ್ಮ ಐಸಿರಿ ಹಾಳಾಗಿ ಹೋಗುವುದೆಂಬ ತಮ್ಮ ಅವನತಿಯ ನಂಬಿಕೆಯಲ್ಲಿ ಅತ್ಯಂತ ಶ್ರದ್ಧೆಯಿಂದ ವಿಶ್ವಾಸವಿರಿಸಿಕೊಂಡ ಮೇಲ್ಜಾತಿ/ಮೇಲ್ವರ್ಗಗಳು ದಲಿತರಿಗೆ ಕರುಣಾಜನಕವಾಗಿಯಾದರೂ ಭೂಮಿ ನೀಡುವುದಿಲ್ಲ. ಇದಕ್ಕಿರುವ ಎರಡನೇ ಸಮಸ್ಯೆ ಜಾತಿಯದು. ಧರ್ಮ ಮತ್ತು ಜಾತಿ ದಲಿತರ ನಾಶದ ಎರಡು ದೊಡ್ಡ ಮತ್ತು ಕೆಟ್ಟ ಶಕ್ತಿಗಳು. ಜಾತಿಯ ಸಂಬಂಧವನ್ನು ಇನ್ನೂ ಆದಿಮ ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ನೋಡುತ್ತಿರುವುದರಿಂದ ಆಧುನಿಕರ ದೃಷ್ಟಿಯಲ್ಲಿ ಜಾತಿ ಇನ್ನೂ ಸಮಸ್ಯೆಯಾಗಿಯೇ ಉಳಿದಿದೆ. ಹೀಗಾಗಿಯೇ ದಲಿತ ಅಸ್ಪೃಶ್ಯ ಎಂಬ ಕಾರಣದಿಂದ ಭಾರತದಲ್ಲಿ ಪೂರ್ಣ ಪ್ರಮಾಣದಲ್ಲಿ ದಲಿತರು ಭೂಮಿಯ ಒಡೆಯರಾಗಿಲ್ಲ. ಅಸ್ಪೃಶ್ಯರನ್ನು ಮುಟ್ಟಿಸಿಕೊಳ್ಳುವ ಜಾತಿ ಪ್ರಜ್ಞೆ ಕೂಡಾ ಕುರುಡು ನಂಬಿಕೆಯಿಂದಲೇ ಜೀವ ತಳೆದದ್ದು. ಹೇಗೆ ಅಸ್ಪೃಶ್ಯನನ್ನು ಮುಟ್ಟಿಸಿಕೊಂಡರೆ ವಿನಾಶ ಕಾದಿದೆಯೆಂದು ನಂಬಲಾಗಿದೆಯೋ ಹಾಗೆ ಆಸ್ತಿ ಕೊಡದಿರುವುದರಲ್ಲಿಯೂ ಬಲಗೊಂಡಿದೆ.

**ಹೋಟೆಲ್ ಜಗಳ ಮತ್ತು ಸಾಮಾಜಿಕ ನ್ಯಾಯ**

ಹೋಟೆಲ್ ದಲಿತರ ಸಾಮಾಜಿಕ ನ್ಯಾಯದ ಹೋರಾಟವನ್ನು ಸೂಕ್ಷ್ಮವಾಗಿ ಸಂಕೇತಿಸುತ್ತದೆ. ಅಸ್ಪೃಶ್ಯತೆ ಆಚರಣೆಯಲ್ಲಿರುವ ಬಹುಮುಖ್ಯ ಸ್ಥಳಗಳಲ್ಲಿ ಅದೂ ಒಂದು. ಮೊದಲಿನಿಂದಲೂ ಊರೊಟ್ಟಿನ ಸಂಬಂಧಗಳಲ್ಲಿ ಪ್ರತ್ಯೇಕತೆಯ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿದ್ದೇ ಹೋಟೆಲ್ಲು. ದಲಿತರು ಪ್ರಜ್ಞಾವಂತರಾದಂತೆಲ್ಲ ಈ ಮಾನವ ಸಂಬಂಧವನ್ನು ವಿರೋಧಿಸುವ ಚಟುವಟಿಕೆಗಳು ಕಾಣಿಸಿಕೊಂಡವು. ಹೋಟೆಲ್ಲುಗಳಲ್ಲಿ ಎಲ್ಲರೊಂದಿಗೆ ಕೂತು ಚಹಾ ಕುಡಿಯುವ ಬಯಕೆ ಪ್ರತಿಗಾಮಿ ಶಕ್ತಿಗಳ ಮಧ್ಯೆ ಸಾಧ್ಯವಾಗುತ್ತಿಲ್ಲ. ಆರ್ಥಿಕ ಘಟ್ಟದಿಂದ ಸಾಮಾಜಿಕ ನ್ಯಾಯಕ್ಕೆ ಕಾಲಿಟ್ಟ ದಲಿತ ಹೋರಾಟಗಳು "ಇಂದು ನಮ್ಮ ಸಮಸ್ಯೆ ಆರ್ಥಿಕವಾದದ್ದಲ್ಲ, ಸಾಮಾಜಿಕ ನ್ಯಾಯದ್ದಾಗಿದೆ. ಹೀಗಾಗಿ ಬಡ ದಲಿತರಿಗೆ ಭೂಮಿ ಕೇಳುವುದಕ್ಕಿಂತ ನಮಗೆ ಮುಖ್ಯವಾದದ್ದು ಹಳ್ಳಿಯ ಹೋಟೆಲ್‌ಗಳಲ್ಲಿ ಎಲ್ಲರೊಂದಿಗೆ ಕೂತು ಚಹ ಕುಡಿಯುವುದು" ಎಂದು ಹೇಳುತ್ತಿವೆ. ಎಲ್ಲರೊಂದಿಗೆ ಕೂತು ಚಹ ಕುಡಿಯುವುದರಿಂದಲೇ ದಲಿತ ಜನಾಂಗದ ಉದ್ಧಾರ ಸಾಧ್ಯವಿಲ್ಲ. ಭೂಮಿ ಮತ್ತು ದುಡಿಮೆಗೆ ಕನಿಷ್ಠ ಕೂಲಿ ಕೇಳುವ ಹೋರಾಟಗಳ ಮಧ್ಯೆ ಈ ಮಾತುಗಳು ತಮಾಷೆಯಾಗಿ ಕಂಡರೂ ದಲಿತ ಜನಾಂಗವು ಅಸ್ಪೃಶ್ಯತೆಯ ಆಘಾತದಿಂದ ತತ್ತರಿಸಿಹೋದ ಸಂಗತಿ ಮತ್ತು ಸಾಮಾಜಿಕ ನ್ಯಾಯದ ತೀವ್ರ ಸ್ವರೂಪವನ್ನು ಒತ್ತಿ ಹೇಳುತ್ತಿವೆ.

ದಲಿತರು ಸಾಮಾಜಿಕವಾಗಿ ಅನುಭವಿಸುತ್ತಿರುವ ಹಿಂಸೆಯ ಸ್ವರೂಪ ಚಾರಿತ್ರಿಕವಾಗಿ ಹೊಸದು ಮತ್ತು ಅದು ೨೦ನೇ ಶತಮಾನದ ಕೊಡುಗೆ. ಹೀಗಾಗಿ ಹಿಂಸೆಯ ಸಾಮಾಜಿಕ ನೆಲೆಯನ್ನು ಸ್ಪಷ್ಟವಾಗಿ ಗುರುತಿಸುವ ಯತ್ನ ಇತ್ತೀಚಿನದು. ಈವರೆಗೆ ದಲಿತರು ಬೌದ್ಧಿಕವಾಗಿ ಅಥವಾ ಮಾನಸಿಕವಾಗಿ ಅನುಭವಿಸುತ್ತಿರುವ ಹಿಂಸೆ ಈಗ ಭೌತಿಕ ಸ್ವರೂಪಕ್ಕೆ ತಿರುಗಿದೆ. ಚರಿತ್ರೆಯಲ್ಲಿ ಮಲ ಹೊರುವ, ಕಸ ಗುಡಿಸುವ, ಚಮ್ಮಾರಿಕೆ ಮುಂತಾದವು ವೃತ್ತಿ ಸಂಬಂಧಿ ಹಿಂಸೆಗಳಾಗಿದ್ದವು. ಈವರೆಗೆ ಅವುಗಳಿಗೆ ಪ್ರತ್ಯೇಕ ಅಸ್ತಿತ್ವವಿರಲಿಲ್ಲ. ಆದರೆ ಯಾವಾಗ ವಸಾಹತುಶಾಹಿ ಫಲದಿಂದ ಅಂಬೇಡ್ಕರರ ಹೋರಾಟಗಳು ಮುಂಚೂಣಿಗೆ ಬಂದವೋ ಆಗ ದಲಿತರು ಮಾಡುತ್ತಿರುವ ವೃತ್ತಿಗಳೂ ಒಂದು ಬಗೆಯ ಹಿಂಸಾತ್ಮಕ ರೂಪಗಳೇ ಎಂಬುದರ ಅರಿವು ಅವರಿಗೆ ಬಂತು. ಹಾಗಾಗಿಯೇ ಧಾರ್ಮಿಕ ಮೂಲವಾದ ಶೋಷಣೆಯನ್ನು ತಪ್ಪಿಸಿ ಸಾಮಾಜಿಕ ಸಮಾನತೆಗಾಗಿ ದಲಿತರು ಒಟ್ಟಾಗಿ ಹೋರಾಟಕ್ಕಿಳಿದರು. ದಲಿತ ಸಂಘಟನೆಗಳು, ಚಳವಳಿಗಳು, ದಲಿತರನ್ನು ಆಧುನಿಕಗೊಳಿಸಲು ಯತ್ನಿಸಿದವು. ಇದರಿಂದಾಗಿ ದಲಿತರು ಮತ್ತು ಕೆಳಜಾತಿಗೆ ಸೇರಿದ ಜನರು ಆಧುನಿಕತೆಯ ವಿಮೋಚನಾ ಸಾಮರ್ಥ್ಯದಲ್ಲಿ ಅತಿಯಾದ ನಂಬಿಕೆ ಇರಿಸಿಕೊಂಡರು. ಆಶ್ಚರ್ಯವೆಂದರೆ ಗತಕಾಲದ ದಮನಕಾರೀ ರಚನೆಗಳಿಂದ ದಲಿತರನ್ನು ವಿಮುಕ್ತಿಗೊಳಿಸುವ ಕಾರ್ಯದಲ್ಲಿ ಆಧುನಿಕ ಬಂಡವಾಳಶಾಹಿ ಸಮಾಜದಲ್ಲಿ ಅಂಬೇಡ್ಕರ್ ಕೂಡಾ ಹೆಚ್ಚೇ ವಿಶ್ವಾಸವಿರಿಸಿಕೊಂಡಿದ್ದರು. ಆದರೆ ಬಂಡವಾಳಶಾಹಿ ಭಾರತದಲ್ಲಿ ಹೊಸಬಗೆಯ ಅನ್ಯಾಯಗಳು ಮತ್ತು ಹಿಂಸೆಗಳು ತಲೆದೋರಿದ್ದನ್ನು ದಲಿತ ಚಳುವಳಿಗಳು ಗ್ರಹಿಸದೇ ಹೋಗಿದ್ದರಿಂದ ದಲಿತರ ಹಿಂಸೆಯ ಸ್ವರೂಪ ಕ್ರಮೇಣ ದಮನಕಾರಿ ರೂಪ ತಾಳುತ್ತಿರುವುದು ಶೋಚನೀಯವೇ ಸರಿ.

ಐ. ಜಿ. ಮ್ಯಾಗೇರಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

ತಿಂಗಳ ಪತ್ರಿಕೆ **ಹೊಸತು** **ಚಂದಾ ನವೀಕರಿಸುವವರಿಗೆ ಸೂಚನೆ**

*'ಹೊಸತು' ಪತ್ರಿಕೆ ಹೊತ್ತು ತರುವ ಲಕೋಟೆಯ ಮೇಲೆ ನಿಮ್ಮ ಈಗಿನ ಚಂದಾ ರಸೀದಿ ಸಂಖ್ಯೆ ಹಾಗೂ ಚಂದಾ ಅವಧಿ ಇರುವುದನ್ನು ಗಮನಿಸಿ. ಚಂದಾ ನವೀಕರಿಸುವಾಗ ನಿಮ್ಮ ವಿಳಾಸದ ಸಹಿತ ಲಕೋಟೆ ಮೇಲಿರುವ ಆ ಮಾಹಿತಿಯನ್ನು ಕತ್ತರಿಸಿ ಕಳಿಸಿಕೊಡಿ. ಇಲ್ಲವೇ ಚಂದಾ ರಸೀದಿ ಸಂಖ್ಯೆ ತಿಳಿಸಿ.*

ವ್ಯವಸ್ಥಾಪಕರು ದಿನಾಂಕ : ......................
ಹೊಸತು', 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು- 560 001

ಪ್ರಿಯರೇ,

ಇದರೊಂದಿಗೆ ಹೊಸತು ಪತ್ರಿಕೆಗಾಗಿ *ಮೂರು/ಎರಡು/ಒಂದು ವರ್ಷದ ಚಂದಾ ಹಣ *ರೂ 250/180/100ಕ್ಕೆ 'ಹೊಸತು' ಹೆಸರಿನಲ್ಲಿ ಡಿ.ಡಿ./ಎಂ.ಓ. ಕಳಿಸುತ್ತಿದ್ದೇನೆ (ಡಿ.ಡಿ./ಎಂ.ಓ. ಸಂಖ್ಯೆ.............. ದಿನಾಂಕ....................). ಹಣ ತಲುಪಿದ ಕೂಡಲೇ ನನ್ನ ಚಂದಾವನ್ನು ನವೀಕರಿಸಿಕೊಂಡು / ನೋಂದಾಯಿಸಿಕೊಂಡು ಅಧಿಕೃತ ರಸೀದಿ ಕಳಿಸಿಕೊಡಿ. ಕೆಳಗಿರುವ ನನ್ನ ವಿಳಾಸಕ್ಕೆ ಪತ್ರಿಕೆ ಕಳಿಸಿಕೊಡಿ. (*ಬೇಡವಾದುದ್ದನ್ನು ಹೊಡೆದುಹಾಕಿ)

ಹೆಸರು / ವಿಳಾಸ
..............................................................
..............................................................
..............................................................
.............................................................. ಸಹಿ

*(ಹೊಸದಾಗಿ ಚಂದಾದಾರರಾಗಬಯಸುವವರೂ ಈ ನಮೂನೆಯನ್ನೇ ಬಳಸಬಹುದು)*



# ಹಿತ್ಲ ತೋಟದಲ್ಲೊಂದು.... ಗಂಡಭೇರುಂಡ... !

ಒಂದು ಬೇಸಿಗೆ ಮುಂಜಾನೆ. ಅವನು ಹಿಂದಿನ ದಿವಸ ಉಳಿದಿದ್ದ ದೋಸೆ ತಿಂತಾ ಕಿಟಕಿ ಹತ್ತಿರ ನಿಂತಿದ್ದ. ನೋಡ್ತಾನೆ... ಹಿತ್ಲ ತೋಟದಲ್ಲೊಂದು ಗಂಡಭೇರುಂಡಾ ! ಬಚ್ಚಲ ನೀರಲ್ಲಿ ಪೊಗದಸ್ತಾಗಿ ಬೆಳೆದಿದ್ದ ದೊಡ್ಡ ಕುಂಬಳಕಾಯಿ ತಿಂತಾ ಇದೆ ! ದೋಸೆ ಮುಕ್ತಾ ಮುಕ್ತಾನೇ ಅವನು ಬೆಡ್‌ರೂಮ್‌ಗೆ ಹೋದ. ಅವಳು ಇನ್ನೂ ಮುಸುಕು ಹಾಕ್ಕೊಂಡ್ ಮಲಗಿದ್ದಳು.

''ಹೆಯ್.... ಹೇ.... ಹಿತ್ಲಲ್ಲಿ ಒಂದು ಗಂಡಭೇರುಂಡ ಬಂದಿದೆ.'' ಅವಳು ಮಗ್ಗಲು ಬದಲಾಯಿಸಿ ಇವನ ಕಡೆ ಬೆನ್ನು ಹಾಕಿ ಮಲಗಿದಳು.

''ಮುಂದಿನ ವಾರ ಕಿತ್ತಬೇಕೂಂತ ಇದ್ಯಲ್ಲ ಕುಂಬಳಕಾಯಿ.... ಅದನ್ನ ತಿಂತಾ ಇದೆ.''

ಅವಳು ಮುಸುಕು ತೆಗೆದು ಇವನ ಕಡೆಗೆ ಕೆಟ್ಟದಾಗಿ ಕೆಕ್ಕರಿಸಿ ನೋಡಿದಳು.

''ಗಂಡಭೇರುಂಡಾ ಅನ್ನೋದು ಗರುಡಪುರಾಣದಲ್ಲಿ ಬರೋದು.'' ಮತ್ತೆ ಮುಸುಕು ಹಾಕ್ಕೊಂಡು ಮಲಗಿದಳು. ಅವನು ದೋಸೆ ತಟ್ಟೆ ಹಿಡಕೊಂಡು ಮತ್ತೆ ಕಿಟಕಿ ಹತ್ತಿರ ಹೋದ. ಗಂಡಭೇರುಂಡ ಇನ್ನೂ ಅಲ್ಲೇ ಕುಂತಿತ್ತು.

''ಗಂಡಭೇರುಂಡಾ.... ಗಂಡಭೇರುಂಡಾ.... ದೋಸೆ ತಿಂತೀಯಾ ? ತೊಗೋ.... ದೋಸೆ ತಿನ್ನು.'' ಒಣಗಿ ಚರ್ಮದ ಹಾಗಿದ್ದ ದೋಸೇನ್ನ ಅದಕ್ಕೆ ಕೊಟ್ಟ. ಗಂಡಭೇರುಂಡ ತನ್ನ ಎರಡೂ ತಲೆಗಳನ್ನು ಒಟ್ಟಿಗೆ ತಂದು ಕೊಂಡು ದೋಸೇನ್ನ ಫರ್ ಅಂತ ಹರಕೊಂಡು ಎರಡೂ ಬಾಯಲ್ಲಿ ಕಚಕಚ ಅಂತ ತಿಂದ್ಹಾಕ್‌ಬಿಡ್ತು. ಆಗಲೇ ಅವನಿಗೆ ಅದು ಗಂಡಭೇರುಂಡ ಅಂತ ಕನ್‌ಫರ್ಮ್ ಆಗಿದ್ದು. ಮತ್ತೆ ಬೆಡ್‌ರೂಮ್‌ಗೆ ಬಂದ. ಅಪಾರವಾಗಿದ್ದ ಅವಳ ಹಿಂಭಾಗವನ್ನು ಮೆಲ್ಲಗೆ ಒಂದ್ಹೇ ಬೆರಳಿಂದ ಅಲ್ಲಾಡಿಸಿದ.

''ಗಂಡಭೇರುಂಡ... ನಿನ್ನೆ ನೀನು ಮಾಡಿಟ್ಟಿದ್ಯಲ್ಲ ದೋಸೆ ? ಆ ದೋಸೇನ್ನ ತಿಂತು !'' ಅವಳು ಠಕ್ ಅಂತ ಸ್ಪ್ರಿಂಗ್ ಬೊಂಬೆ ಥರಾ ಎದ್ದು ಕೂತುಕೊಂಡಳು. ಇವನು ನಡನಡಗ್ತಾ ''ದೋಸೆ ವೇಸ್ಟ್ ಮಾಡ್ಲಿಲ್ಲ ಕಣೇ. ನಾನೂ ತಿಂದೆ. ಒಂದು ಚೂರು ಮಾತ್ರ ಅದಕ್ಕೆ ಕೊಟ್ಟೆ,'' ಅಂದ. ಅವಳು ಧಡ್ ಅಂತ ಎದ್ದುನಿಂತಳು. ಅವನು ಅವಳಿಂದ ತಪ್ಪಿಸಿಕೊಳ್ಳಕ್ಕೆ ಮಂಚದ ಕೆಳಗೆ ಹೋಗಬೇಕೋ, ಬೀರೂ ಹಿಂದೆ ಹೋಗಬೇಕೋ ಗೊತ್ತಾಗದೇ ಪೆದ್ದುಪೆದ್ದಾಗಿ ಅಲ್ಲೇ ನಿಂತಿದ್ದ.

''ಏಯ್.... ಸೀಬೈಟೂ. ನೀನು ಕ್ರ್ಯಾಕ್ ಆಗೋಗಿದಿಯ ಇರು, ಇವತ್ತು ನಿನ್ನ ಹುಚ್ಚಾಸ್ಪತ್ರೆಗೆ ಸೇರಿಸ್ತೀನಿ.'' ಅವಳು ಬುಸುಗುಟ್ಟಿದಳು. ಇವನಿಗೆ ಭಾಳಾ ಬೇಜಾರಾಯ್ತು. ''ಗಂಡನಿಗೆ ಸೀಬೈಟೂ ಅಂತಾರಾ, ಕ್ರ್ಯಾಕ್ ಅಂತಾರಾ, ಹುಚ್ಚಾಸ್ಪತ್ರೆಗೆ ಸೇರಿಸ್ ಬೇಕೂಂತಾರಾ.'' ಛೇ ಛೇ, ಮನಸ್ಸಿನಲ್ಲೇ ಪೇಚಾಡಿದ. ''ಇರು. ನಿಂಗೇ ಗೊತ್ತಾಗತ್ತೇ'' ಅಂತ ಅಂದವನೇ ಮತ್ತೆ ಅದೇ ಕಿಟಕಿ ಹತ್ತಿರ ಹೋಗಿ ನಿಂತ.

''ನನ್ನಷ್ಟು ಎತ್ತರ ಇದೆ. ಬಹುಶಃ ಮರೀ ಇರಬೇಕು. ಎರಡು ತಲೆ. ತನ್ನ ಕೊಕ್ಕನ್ನ ತಾನೇ ತಿವಿಕೋತಾ ಇದೆ !'' ಅದನ್ನ ಹತ್ತಿರದಿಂದ ನೋಡಬೇಕೂಂತ ಅವನು ಗಂಡಭೇರುಂಡದ ಪಕ್ಕಕ್ಕೇ ಹೋದ. ಅದು ಇವನು ಬಂದದ್ದು ನೋಡಿ, ಒಂದು ತಲೇನ ಇನ್ನೊಂದು ತಲೆ ಹತ್ತಿರಕ್ಕೆ ತಂದು ಇವನು ಬಂದ ಸುದ್ದೀನ ಚರ್ಚೆ ಮಾಡಿಕೊಂಡಿತು. ಆಮೇಲೆ ತನ್ನ ದೊಡ್ಡ ದೊಡ್ಡ ರೆಕ್ಕೆಗಳನ್ನ ಬೀಸಿಕೊಂಡು, ಕುಂಬಳಕಾಯಿ ಚೂರನ್ನು ಕಚ್ಚಿಕೊಂಡು ಆಕಾಶ ಮಾರ್ಗವಾಗಿ ಹಾರಿಕೊಂಡು ಹೋಯ್ತು.

ಅವಳು ದಡಬಡ ಎದ್ದು, ಸ್ನಾನಾಗೀನಾ ಮಾಡಿ, ಬಟ್ಟೆಗಿಟ್ಟೆ ಹಾಕ್ಕೊಂಡು, ಮೇಕಪ್ ಮಾಡ್ಕೊಂಡು ತಯಾರಾದಳು. ಅವಳ ಕಣ್ಣುಗಳಲ್ಲಿ ಒಂಥರಾ ವಿಚಿತ್ರವಾದ ಹೊಳಪಿತ್ತು. ಪೊಲೀಸರಿಗೊಂದು ಫೋನ್ ಮಾಡಿದಳು. ಹುಚ್ಚಾಸ್ಪತ್ರೆ ಡಾಕ್ಟರ್‌ಗೂ ಒಂದು ಫೋನ್ ಮಾಡಿದಳು.

''ಹೌದು ಹೌದು, ವ್ಯಾನ್ ತೊಗೊಂಬನ್ನಿ. ಬೇಗ ಬನ್ನಿ. ಹಗ್ಗ, ಬೇಡೀ ಇನ್ನೂ ಏನೇನು ಬೇಕೋ.... ಎಲ್ಲ ತೊಗೊಂಡ್ ಬನ್ನಿ. ಬೇಗ.....''

ವ್ಯಾನ್ ಬಂತು. ಪೊಲೀಸರು ಬಂದ್ರು. ಹುಚ್ಚಾಸ್ಪತ್ರೆ ಡಾಕ್ಟರೂ ಬಂದರು. ಅವಳು ಹ್ಹೀ... ಹ್ಹೀ... ಅಂತ ನಗುತ್ತಾ ಎಲ್ಲರನ್ನೂ ಸೋಫಾದಲ್ಲಿ ಕೂರಿಸಿದಳು.

''ನನ್ ಗಂಡಾ.....'' ಅವಳು ಮಾತು ಪ್ರಾರಂಭಿಸಿದಳು. ''ಇವತ್ತು ಬೆಳಿಗ್ಗೆ ಹಿತ್ತಲ ತೋಟದಲ್ಲಿ ಗಂಡಭೇರುಂಡ ನೋಡಿದಾನೆ.'' ಅವಳು ಕಿಲಕಿಲ ನಕ್ಕಳು. ಪೊಲೀಸು ಡಾಕ್ಟರ್ ಕಡೆ ನೋಡಿದರು. ಡಾಕ್ಟರು ಪೊಲೀಸರ ಕಡೆ ನೋಡಿದರು.

''ವೇಸ್ಟ್ ಮಾಡಬೇಡಾ.... ನಿನ್ನೇದಾದರೂ ಪರವಾಗಿಲ್ಲ ತಿನ್ನು ಅಂತಾ ದೋಸೆ ಇಟ್ಟಿದ್ರೆ.....'' ಮತ್ತೆ ಕಿಲಕಿಲ. ''ಅದನ್ನು ಗಂಡಭೇರುಂಡಕ್ಕೆ ಕೊಟ್ಟಂತೆ !'' ಮತ್ತೆ ಕಿಲಕಿಲ. ಡಾಕ್ಟರು ಪೊಲೀಸರ ಕಡೆ ನೋಡಿದರು; ಪೊಲೀಸರು ಡಾಕ್ಟರ ಕಡೆ ನೋಡಿದರು.

''ದೋಸೇನ್ನ ಎರಡೂ ತಲೆಯಿಂದ ಹಿಡಕೊಂಡು ಪರಪರಾಂತ ಹರಕೊಂಡು ತಿಂದು ಬಿಡತಂತೇ.'' ಅವಳು ಕಿಲಕಿಲ ಅಂತ ನಕ್ಕಳು.

ಕರುಣಾಳು ಡಾಕ್ಟರ್ ಪೊಲೀಸರಿಗೆ ಸಣ್ಣದಾಗಿ ಸಿಗ್ನಲ್ ಕೊಟ್ಟರು. ಪೊಲೀಸರು ಸುಳಿವೇ ಕೊಡದೆ ಸಡನ್ನಾಗಿ ಛಂಗ್ ಅಂತ ಅವಳ ಮೇಲೆಗರಿ, ಬಲವಾಗಿ ಹಿಡಿದು ಗರಬರಾಂತ ಹಗ್ಗ ಸುತ್ತಿ ಕೈಗಳಿಗೆ ಬೇಡಿ ಹಾಕೇಬಿಟ್ಟರು. ಅವಳು ವಿಕಾರವಾಗಿ ಕಿರಚುತ್ತಾ, ಭಯಂಕರವಾಗಿ ಪರದಾಡಿ ಬಂದಿದ್ದವರಿಗೆಲ್ಲ ಭಾಳ ಕಾಟಾ ಕೊಟ್ಟಳು. ಅವಳನ್ನ ಹೆಡೆಮುರಿ ಬಿಗಿದಾದ ಮೇಲೆ ಪಾಪ, ಪೊಲೀಸರು, ಡಾಕ್ಟರು ಏದುಸಿರು ಬಿಡ್ತಾ ಸುಧಾರಿಸಿಕೋತಿದ್ದಾಗ ಹೊರಗಡೆ ವಾಕಿಂಗ್ ಹೋಗಿದ್ದ ಅವನು ವಾಪಸ್ ಬಂದ.

''ರೀ.... ಮಿಸ್ಟರ್.... ನಿಮ್ಮ ಹಿತ್ತಲಿಗೆ ಗಂಡಭೇರುಂಡಾ ಬಂದಿತ್ತು ಅಂತ ನಿಮ್ಮನೆಯವರಿಗೇನಾದ್ರೂ ತಿಳಿಸಿದ್ರಾ ಸಾರ್ ?'' ಪೊಲೀಸರು ಕೇಳಿದರು.

''ಛೇ ಛೇ.... ಇಲ್ಲಪ್ಪ.... ಗಂಡಭೇರುಂಡಾನೇ ? ಗಂಡಭೇರುಂಡಾ ಗರುಡ ಪುರಾಣದಲ್ಲಿ ಬರೋದು.''

''ಗೊತ್ತಾಯ್ತು ಬಿಡಿ ಸಾರ್. ಪಾಪ.'' ಡಾಕ್ಟರ್ ಮುಂದುವರೆಸಿದರು. ''ಪಾಪ. ಐ ಯಾಮ್ ವೆರಿ ಸಾರೀ ಸಾರ್, ನಿಮ್ಮನೆಯವರಿಗೆ..... ಸ್ವಲ್ಪ ಹುಚ್ಚು ಸಾರ್..... ಗಂಡಭೇರುಂಡಾ - ಹುಚ್ಚು. ನನ್ನ ಸರ್ವೀಸಿನಲ್ಲಿ ಇದೇ ಮೊದಲ ಕೇಸು.... ಛೇ ಛೇ....''

ಅವಳನ್ನ ಹುಚ್ಚಾಸ್ಪತ್ರೆ ವ್ಯಾನ್‌ನಲ್ಲಿ ಹಾಕ್ಕೊಂಡು ಕರ್ಕೊಂಡುಹೋದ್ರು. ಆಮೇಲಿಂದ ಗಂಡ ಸುಖವಾಗಿದ್ದ.

ಮೂಲ : **'ಯೂನಿಕಾರ್ನ್' – ಜೇಮ್ಸ್ ಥರ್ಬರ್**

ಕನ್ನಡಕ್ಕೆ : ವಿಜಯವಾಮನ
ನಂ. ೧, ಗುಲ್‌ಮೋಹರ್, ಕೆ.ಎಚ್.ಬಿ. ಕಾಲೋನಿ
ಗಾಂಧಿನಗರ, ಸಾಗರ-೫೭೭೪೦೧



# ಬೊಂಬೆ ಮನೆ

ಇಂಗ್ಲಿಷ್ ಮೂಲ : ಕ್ಯಾಥರೀನ್ ಮ್ಯಾನ್ಸ್‌ಫೀಲ್ಡ್

**ಮ**ಕ್ಕಳ ಮುದ್ದಿನ ಅಜ್ಜಿ ಹೇ ಅವರು ಬರ್ನೆಲ್ ಅವರ ಮನೆಯಲ್ಲಿ ಅತಿಥಿಯಾಗಿ ನಾಲ್ಕು ದಿನವಿದ್ದು ತಮ್ಮೂರಿಗೆ ಮರಳಿದಾಗ ಮಕ್ಕಳಿಗೆ ಒಂದು ಬೊಂಬೆ ಮನೆಯನ್ನು ಉಡುಗೊರೆಯಾಗಿ ಕಳಿಸಿಕೊಟ್ಟರು. ತುಂಬ ದೊಡ್ಡದಾದ ಬೊಂಬೆ ಮನೆ. ಗಾಡಿಯವನು ಮತ್ತು ಪ್ಯಾಟ್ ಅದನ್ನು ಮನೆಯಂಗಳದಲ್ಲಿ ತಂದಿಟ್ಟರು. ಅಲ್ಲಿ – ಮಲಗುವ ಕೋಣೆಯ ಪಕ್ಕದಲ್ಲಿ – ಎರಡು ಮರದ ಪೆಟ್ಟಿಗೆಗಳ ಮೇಲೆ ಊರೆ ಕೊಟ್ಟು ಅದನ್ನು ಇಡಲಾಗಿತ್ತು. ಅದು ಸ್ಥಳದಲ್ಲಿ ಸುರಕ್ಷಿತವಾಗಿತ್ತು. ಬೇಸಿಗೆಯ ಕಾಲ. ಆ ಬೊಂಬೆ ಮನೆಯನ್ನು ಮನೆಯೊಳಗೆ ತಂದಿಡುವ ಹೊತ್ತಿಗೆ ಅದರ ಬಣ್ಣದ ವಾಸನೆ ಹೋಗುವುದು ನಿಶ್ಚಿತ ಎಂದು ಹೇಳಬಹುದಿತ್ತು. ನಿಜವಾಗಿಯೂ ಆ ಬೊಂಬೆ ಮನೆಯ ಬಣ್ಣದ ವಾಸನೆ (ಹೇ ಅವರು ನಿಜವಾಗಿಯೂ ಎಷ್ಟು ಒಳ್ಳೆಯವರು, ಎಷ್ಟು ಉದಾರ ಸ್ವಭಾವದವರು !) - ಬೆರಿಲ್ ಆಂಟಿಯ ಅಭಿಪ್ರಾಯದಲ್ಲಿ – ಎಷ್ಟಿತ್ತೆಂದರೆ ಆ ವಾಸನೆ ಕುಡಿದು ಯಾರೇ ಆಗಲಿ ಬೊಂಬೆ ಮನೆಯನ್ನು ಸುತ್ತಿದ್ದ ಗೋಣಿ ಬಟ್ಟೆಯನ್ನು ಬಿಚ್ಚಿ ಹಾಕುವುದರೊಳಗಾಗಿಯೇ ಕಾಯಿಲೆ ಬೀಳುವಷ್ಟಿತ್ತು.

ಆಮೇಲೆ ಅದನ್ನು......

ಈಗ ನೋಡಿ ಈ ಬೊಂಬೆ ಮನೆ, ಹೇಗೆ ನಿಂತಿದೆ ! ಕಂದು ಬಣ್ಣದ, ಎಣ್ಣೆಯಲ್ಲಿ ನೆನೆದಂಥ, ಬಸಲೆ ಸೊಪ್ಪಿನ, ಹಸಿರು ಬಣ್ಣದ ಹಾಗೂ ಹಳದಿ ಬಣ್ಣದ ಬೊಂಬೆ ಮನೆ. ಅದರ ಛಾವಣಿಗೆ ಅಂಟಿಸಿದ ಎರಡು ಗಟ್ಟಿಮುಟ್ಟಾದ ಸಣ್ಣ ಹೊಗೆ ಕೊಳವೆಗಳು ಕೆಂಪು ಹಾಗೂ ಬಿಳಿ ಬಣ್ಣದ್ದು. ಹಳದಿ ವಾರ್ನೀಸ್ ಬಳಿದ ಅದರ ಫಳಫಳ ಹೊಳೆಯುವ ಬಾಗಿಲು ಸಕ್ಕರೆ ಮಿಠಾಯಿಯ ಸಣ್ಣ ಫಲಕದಂತಿತ್ತು. ಆ ಮನೆಗೆ ನಾಲ್ಕು ಕಿಟಕಿಗಳು. ನಿಜವಾದ ಕಿಟಕಿಗಳು. ಅವಕ್ಕೆ ದಟ್ಟ ಹಸಿರು ಪಟ್ಟಿಗಳ ಕನ್ನಡಿಗಳು. ವಾಸ್ತವವಾಗಿ ಒಂದು ಸಣ್ಣ ದ್ವಾರ ಮಂಟಪ ಕೂಡಾ ಇತ್ತು - ಹಳದಿ ಬಣ್ಣದ್ದು. ಅದರ ಅಂಚಿಗೆ ಗೆಡ್ಡೆ ಕಟ್ಟಿದ ಬಣ್ಣದ ದೊಡ್ಡ ಗಡ್ಡೆಗಳು ಇಳಿಬಿದ್ದಿದ್ದವು.

ಒಟ್ಟಿನಲ್ಲಿ ಪರಿಪೂರ್ಣ, ಅಖಂಡ, ಪುಟ್ಟ ಮನೆ ! ವಾಸನೆಯ ಬಗ್ಗೆ ಹೇಳುವುದಾದರೆ, ಅದೇನೂ ಪರವಾಗಿಲ್ಲ ಬಿಡಿ. ಅದು ಸಂತಸದ, ನಾವೀನ್ಯತೆಯ ಒಂದು ಭಾಗವೇ ಆಗಿತ್ತು.

''ಬೇಗ ಬಿಚ್ಚಿರಿ ಅದನ್ನು ಯಾರಾದ್ರೂ ವೇ !''

ಕೊಂಡಿ ಬಿಗಿಯಾಗಿತ್ತು. ಅದನ್ನು ಪ್ಯಾಟ್ ತನ್ನ ಸಣ್ಣ ಚಾಕುವಿನಿಂದ ಬಿಚ್ಚಿದ. ತಕ್ಷಣ ಮನೆಯ ಇಡೀ ಮುಂಭಾಗ ಹಿಂದಕ್ಕೆ ವಾಲಿತು. ಅಗೋ ! ಒಂದು ಸಲ ಕಣ್ಣು ಹಾಯಿಸಿದರೆ ಸಾಕು, ದಿವಾನ್‌ಖಾನೆ, ಊಟದ ಮನೆ, ಅಡಿಗೆ ಮನೆ ಮತ್ತು ಮಲಗುವ ಕೋಣೆಗಳು ನಿಮಗೆ ಗೋಚರಿಸುತ್ತವೆ, ಅಲ್ಲವೇ ? ಒಂದು ಮನೆ ಅಂದರೆ ಹೀಗೇ ತೆರೆದುಕೊಳ್ಳಬೇಕು ! ಆದರೆ ಎಲ್ಲ ಮನೆಗಳು ಹೀಗೇಕೆ ತೆರೆದುಕೊಳ್ಳುವುದಿಲ್ಲ ? ಒಂದು ಹ್ಯಾಟ್ ಸ್ಟ್ಯಾಂಡ್, ಎರಡು ಕೊಡೆಗಳು ನಿಂತಿರುವ ಒಂದು ಹಜಾರವನ್ನು ಬಾಗಿಲ ಸಂದಿಯಿಂದ ನೋಡಿದಾಗ ಆಗುವ ಸಾಮಾನ್ಯ ಅನುಭವ ಎಂಥದ್ದು ಮತ್ತು ಇಂಥ ಬೊಂಬೆ ಮನೆಯನ್ನು ನೋಡಿದಾಗ ಆಗುವ ಭಾವೋದ್ರೇಕ ಎಂಥದ್ದು! ಎಷ್ಟು ವ್ಯತ್ಯಾಸ ಅಲ್ಲವೆ ? ಒಂದು ಮನೆ ಹೇಗಿದೆ ಎಂದು ನೋಡಲಿಕ್ಕೋಸ್ಕರ ನೀವು ಬಾಗಿಲು ತೆರೆಯಲಿಕ್ಕೆ ಹೋಗುವುದು ಇಂಥದೇ ಆಸೆಯಿಂದ, ಅಲ್ಲವೇ ? ದೇವರು ದಟ್ಟ ಕತ್ತಲಿನ ರಾತ್ರಿಯ ಹೊತ್ತು ದೇವತೆಯೊಬ್ಬನ ಜೊತೆ ಸದ್ದಿಲ್ಲದೆ, ನಿಧಾನವಾಗಿ ಅಡ್ಡಾಡುವಾಗ ಮನೆಗಳನ್ನು ತೆರೆಯುವುದು ಹೀಗೇ ಎಂದು ಕಾಣುತ್ತೆ.....

''ಓ ! ಓ !'' ಎಂದು ಒಂದು ಥರ ಸುಸ್ತಾದವರಂತೆ ಉದ್ಗರಿಸಿದರು ಬರ್ನೆಲ್ ಮಕ್ಕಳು. ಬೊಂಬೆ ಮನೆ ಅತ್ಯದ್ಭುತವಾಗಿತ್ತು ; ತಡೆದುಕೊಳ್ಳಲಿಕ್ಕಾಗದಷ್ಟು ಸಂತೋಷವನ್ನು ಕೊಡುವಂಥದ್ದಾಗಿತ್ತು. ಅವರು ತಮ್ಮ ಜೀವಮಾನದಲ್ಲೇ ಇಂಥದ್ದನ್ನು ಕಂಡಿರಲಿಲ್ಲ. ಬೊಂಬೆ ಮನೆಯ ಕೋಣೆಗಳ ಗೋಡೆಗಳನ್ನೆಲ್ಲಾ ಚಿತ್ರಕಾಗದದಿಂದ ಅಲಂಕರಿಸಲಾಗಿತ್ತು. ಕಾಗದದ ತುಂಬ ಚಿತ್ರಗಳು. ಗೋಡೆಗೆ ತೂಗುಹಾಕಿದ್ದ ಚಿತ್ರಗಳಿಗೆಲ್ಲಾ ಬಂಗಾರದ ಚೌಕಟ್ಟುಗಳು. ಅಡಿಗೆ ಮನೆಯೊಂದನ್ನು ಬಿಟ್ಟು ಉಳಿದೆಲ್ಲ ಕಡೆ ನೆಲದ ಮೇಲೆ ಕೆಂಪು ರತ್ನಗಂಬಳಿಗಳು. ದಿವಾನ್ ಖಾನೆಯಲ್ಲಿ ಮಖಮಲ್ಲಿಗಿಂತ ಮೃದುವಾದ ರೇಷ್ಮೆ-ಹತ್ತಿಯ ಬಟ್ಟೆಗಳಿಂದ ಸಿಂಗರಿಸಿಕೊಂಡ ಕುರ್ಚಿಗಳು. ಊಟದ ಮನೆಯಲ್ಲಿ ಹಸಿರು ಬಣ್ಣದ ಕುರ್ಚಿಗಳು. ಆಮೇಲೆ, ಮೇಜುಗಳು; ನಿಜವಾದ ದುಪ್ಪಟಿಗಳು; ತೊಟ್ಟಿಲು; ಒಲೆ; ಸಣ್ಣ ಸಣ್ಣ ತಟ್ಟೆಗಳು ಹಾಗೂ ಒಂದು ದೊಡ್ಡ ಜಗ್ ಇಟ್ಟಿರುವ ಸ್ಟ್ಯಾಂಡ್. ಆದರೆ ಕೇಜಿಯಾಗೆ ಎಲ್ಲದಕ್ಕಿಂತ ಹೆಚ್ಚು ಇಷ್ಟವಾಗಿದ್ದುದೆಂದರೆ ದೀಪ. ಅದು ಊಟದ ಮನೆಯ ಮೇಜಿನ ಮೇಲಿತ್ತು. ಒಂದು ಬಿಳಿ ಗೋಳವಿದ್ದ,

ಕನ್ನಡಕ್ಕೆ : ಶ್ರೀನಿವಾಸ್ ಎ. ಸುತ್ರಾವೆ

ಮನೋಹರವಾದ ಹೊಂಬಣ್ಣದ ದೀಪ. ಅದನ್ನು ಹಚ್ಚಲಿಕ್ಕೆ ಕೂಡ ಎಲ್ಲ ಸಿದ್ಧವಾಗಿರುವಂಥದ್ದು. ಆದರೆ ಹಚ್ಚಲಿಕ್ಕೆ ಆಗುವುದಿಲ್ಲ. ನಿಜ. ಅದರೊಳಗೆ ಎಣ್ಣೆಯಂಥದ್ದು ಏನೋ ಇತ್ತು. ನೀವು ಅದನ್ನು ಅಲುಗಾಡಿಸಿದರೆ ಕಲಕುತ್ತಿತ್ತು.

ಅಪ್ಪ-ಅಮ್ಮ ಬೊಂಬೆಗಳು ಮೂರ್ಛೆ ಹೋಗಿದ್ದವೇನೋ ಎಂಬಂತೆ ಸೆಡೆತುಕೊಂಡು ಬಿದ್ದಿದ್ದವು. ಎರಡು ಮರಿ ಬೊಂಬೆಗಳು ಮಹಡಿಯ ಮೇಲೆ ಮಲಗಿದ್ದವು. ದೊಡ್ಡ ಬೊಂಬೆಗಳು ಆ ಬೊಂಬೆ ಮನೆಗೆ ಸ್ವಲ್ಪ ದೊಡ್ಡವೇ ಆಗಿದ್ದವು. ಆ ಮನೆಗೆ ಸೇರಿದ್ದಲ್ಲವೇನೋ ಎಂಬಂತಿದ್ದವು. ಆದರೆ ದೀಪ ಮಾತ್ರ ಕಳಂಕರಹಿತವಾಗಿತ್ತು. ಅದು ''ನಾನಿಲ್ಲಿದ್ದೇನೆ'' ಎಂದು ಹೇಳಲಿಕ್ಕೆಂಬಂತೆ ಕೇಜ಼ಿಯಾ ಕಡೆ ನೋಡಿ ಮುಗುಳ್ನಗುತ್ತಿರುವಂತೆ ಕಾಣುತ್ತಿತ್ತು. ದೀಪ ನಿಜವಾಗಿಯೂ ನಿಜವಾದ ದೀಪವೇ ಆಗಿತ್ತು.

ಮಾರನೆಯ ದಿನ ಬರ್ನೆಲ್ ಮಕ್ಕಳಿಗೆ ಶಾಲೆಯನ್ನು ಬೇಗನೆ ತಲುಪಲು ಸಾಧ್ಯವಾಗಲಿಲ್ಲ. ಶಾಲೆಯ ಗಂಟೆ ಹೊಡೆಯುವುದರೊಳಗಾಗಿ ಬೊಂಬೆ ಮನೆಯ ಬಗ್ಗೆ ಎಲ್ಲರಿಗೂ ಹೇಳಬೇಕೆಂಬ ತವಕ ಅವರಿಗೆ. ಅದನ್ನು ವರ್ಣಿಸಬೇಕು; ನಿಜ ಹೇಳಬೇಕೆಂದರೆ, ಅದರ ಬಗ್ಗೆ ಹೆಮ್ಮೆಯಿಂದ ಬೀಗಬೇಕು –

''ನಾನು ಹೇಳೋದು'' ಎಂದಳು ಇಸಾಬೆಲ್. ''ಯಾಕೆಂದರೆ ಎಲ್ಲರಿಗಿಂತ ದೊಡ್ಡವಳು ನಾನು. ನೀವು ಆಮೇಲೆ ಹೇಳಬಹುದು. ಒಟ್ಟಿನಲ್ಲಿ ಮೊದ್ಲು ಹೇಳೋದು ನಾನು.'' ಯಾರೂ ಮಾರುತ್ತರ ಹೇಳುವಂತಿದ್ದಿಲ್ಲ. ಇಸಾಬೆಲ್ ಯಜಮಾನಿಕೆ ಮಾಡುವಂಥವಳು. ಆದರೆ ಅವಳು ಯಾವುದೇ ಆಗಲಿ, ಯಾವತ್ತೂ ಸರಿಯಾಗೇ ಹೇಳುವವಳು, ಮಾಡುವವಳು. ಹಿರಿಯವಳ ಅಧಿಕಾರ ಏನು ಎಂಬುದು ಲಾಟ್ಟೀ ಮತ್ತು ಕೇಜ಼ಿಯಾಗೆ ಚೆನ್ನಾಗೇ ಗೊತ್ತಿತ್ತು. ದಾರಿ ಬದಿಯ ಹಳದಿ ಹೂ ಗಿಡಗಳ ನಡುವೆ ನಡೆದುಕೊಂಡು ಹೋಗುವಾಗ ಅವರು ಏನೂ ಮಾತಾಡಲಿಲ್ಲ.

''ಆಮೇಲೆ, ಬೊಂಬೆ ಮನೇನ ನೋಡ್ಲಿಕ್ಕೆ ಮೊದ್ಲು ಬರೋದು ಯಾರು ಅನ್ನೋದು ಕೂಡಾ ನಾನೇ ಹೇಳೋದು. ಆಗ್ಬಹುದು ಅಂತ ಅಮ್ಮ ಹೇಳಿದಾಳೆ.''

ಒಂದು ಸಲಕ್ಕೆ ಇಬ್ಬಿಬ್ಬರ ಹಾಗೆ ಶಾಲೆಯ ಹುಡುಗಿಯರನ್ನು ಕರೆತಂದು ಅಂಗಳದಲ್ಲಿನ ಬೊಂಬೆ ಮನೆಯನ್ನು ತೋರಿಸುವುದು ಎಂದು ನಿರ್ಣಯಿಸಲಾಗಿತ್ತು. ಟೀ ಕುಡಿದು ಹೋಗಲಿಕ್ಕೆ ಅಂತ ಯಾರೂ ನಿಲ್ಲುವ ಹಾಗೇನೂ ಇಲ್ಲ ಅಥವಾ ಮನೆಯೊಳಗೆ ಅಲ್ಲಿ - ಇಲ್ಲಿ ಅಂತ ಓಡಾಡುವ ಹಾಗೂ ಇಲ್ಲ. ಸುಮ್ಮನೆ ಸದ್ದಿಲ್ಲದೆ ಅಂಗಳದಲ್ಲಿ ನಿಂತಿರಬೇಕು - ಇಸಾಬೆಲ್ ಬೊಂಬೆ ಮನೆಯ ಅಂದ ಚೆಂದವನ್ನು ತೋರಿಸುವಾಗ ಮತ್ತು ಲಾಟ್ಟೀ ಹಾಗೂ ಕೇಜ಼ಿಯಾ ಆ ಹೊತ್ತಿನಲ್ಲಿ ಇಸಾಬೆಲ್ಲಳ ಮಾತಿನ ಬಗ್ಗೆ ತಮ್ಮ ತಮ್ಮ ಮುಖಗಳಲ್ಲಿ ತೃಪ್ತಿ ಹಾಗೂ ಸಂತೋಷವನ್ನು ಸೂಸುತ್ತ ನಿಂತಿರುವಾಗ......

ಎಷ್ಟೇ ಅವಸರದಿಂದ ನಡೆದರೂ ಹುಡುಗರ ಆಟದ ಬಯಲಿನ ಡಾಂಬರೆಣ್ಣೆ ಬಳಿದ ದಸಿ ಬೇಲಿಯನ್ನು ತಲುಪುವ ಹೊತ್ತಿಗಾಗಲೇ ಶಾಲೆಯ ಗಂಟೆ ಹೊಡೆದಿತ್ತು. ಹಾಜರಿ ಕೂಗುವ ಮುನ್ನ ತಮ್ಮ ತಮ್ಮ ಹ್ಯಾಟುಗಳನ್ನು ತಟಕ್ಕನೆ ತೆಗೆದುಹಾಕಿ ಸಾಲಾಗಿ ನಿಲ್ಲಲಿಕ್ಕಷ್ಟೇ ಅವರಿಗೆ ಸಮಯವಿದ್ದಿದ್ದು. ಏನೇ ಆಗಲಿ, ಇಸಾಬೆಲ್ಲಳ ಮುಖದಲ್ಲಿ ನಿಗೂಢ ಹಾಗೂ ಪ್ರತಿಷ್ಠೆಯ ಸೂಚನೆ ಇತ್ತು. ಹಿಂದುಗಡೆಯ ಹುಡುಗಿಯರಿಗೆ ಪಿಸುಮಾತಿನಲ್ಲಿ ಹೇಳಿದಳು, ''ಆಟದ ಹೊತ್ತಿನಲ್ಲಿ ನಾನು ನಿಮಗೇನೋ ಹೇಳೋದಿದೆ.''

ಮಕ್ಕಳಿಗೆ ಆಟಕ್ಕೆ ಬಿಟ್ಟಾಗ ಇಸಾಬೆಲ್ಲಳ ಸುತ್ತ ಹುಡುಗಿಯರು ನೆರೆದರು. ಅವಳ ತರಗತಿಯ ಹುಡುಗಿಯರು ಅವಳನ್ನು ತಬ್ಬಿಕೊಳ್ಳಲು, ಅವಳ ಜೊತೆ ನಡೆದುಹೋಗಲು, ಅವಳ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡುತ್ತ ಖುಷಿಪಡಲು ಮತ್ತು ತಾವು ಅವಳ ಆಪ್ತ ಗೆಳತಿಯರು ಎಂದು ತೋರಿಸಲು ಪೈಪೋಟಿ ನಡೆಸಿದರು. ಆಟದ ಬಯಲಿನ ಪಕ್ಕದ ಪೈನ್ ಮರಗಳಡಿ ಇಸಾಬೆಲ್ ಒಂದು ದೊಡ್ಡ ದರ್ಬಾರನ್ನೇ ನಡೆಸಿದಳು. ಮೊಳಕೈಯಿಂದ ಒಬ್ಬರು ಇನ್ನೊಬ್ಬರಿಗೆ ಮೆತ್ತಗೆ ತಿವಿಯುತ್ತ, ಕಿಲಕಿಲನೆ ನಗುತ್ತ ಹುಡುಗಿಯರು ಅವಳ ಹತ್ತಿರಕ್ಕೆ ಬಂದರು. ಈ ವಲಯದಾಚೆ ನಿಂತ ಇಬ್ಬರೇ ಹುಡುಗಿಯರೆಂದರೆ ಯಾವತ್ತೂ ಹೊರಗೇ ಉಳಿಯುತ್ತಿದ್ದ ಪುಟ್ಟ ಕೆಲ್ವಿ ಮಕ್ಕಳು. ತಾವು ಯಾವತ್ತೂ ಬರ್ನೆಲ್ ಮನೆಯವರ ಜೊತೆ ಬೆರೆಯುವ ಹಾಗಿಲ್ಲ ಎಂಬುದರ ಸ್ಪಷ್ಟ ಅರಿವಿತ್ತು ಅವರಿಗೆ. ನಿಜಸ್ಥಿತಿ ಏನೆಂದರೆ, ಬರ್ನೆಲ್ ಅವರು ತಮ್ಮ ಮಕ್ಕಳನ್ನು ಆ ಶಾಲೆಗೆ ಖಂಡಿತ ಕಳಿಸುತ್ತಿರಲಿಲ್ಲ - ತಾವು ಆಯ್ಕೆ ಮಾಡುವ ಸ್ಥಿತಿಯಲ್ಲಿದ್ದಿದ್ದರೆ. ಆದರೆ ತಮ್ಮ ಮಕ್ಕಳನ್ನು ಆ ಶಾಲೆಗೆ ಕಳುಹಿಸದೆ ಬೇರೆ ದಾರಿಯೇ ಇರಲಿಲ್ಲ. ಹತ್ತಿರದ ಶಾಲೆಯೆಂದರೆ ಅದೊಂದೇ. ಪರಿಣಾಮವಾಗಿ, ಸುತ್ತಮುತ್ತಲಿನವರೆಲ್ಲ – ನ್ಯಾಯಾಧೀಶರ ಮಕ್ಕಳು, ವೈದ್ಯರ ಮಕ್ಕಳು, ಉಗ್ರಾಣಿಕನ ಮಕ್ಕಳು, ಹಾಲಿನವನ ಮಕ್ಕಳು – ಎಲ್ಲರೂ ಅನಿವಾರ್ಯವಾಗಿ ಒಟ್ಟಿಗೇ ಬೆರೆಯಬೇಕಾಗಿತ್ತು; ಹುಡುಗಿಯರಿದ್ದಷ್ಟೇ ಒರಟು ಹುಡುಗರೂ ಕೂಡಾ ಇದ್ದರು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದರೂ, ಎಲ್ಲೋ ಒಂದು ಕಡೆ ಗೆರೆ ಎಳೆಯಬೇಕಾಗಿತ್ತು. ಅದನ್ನು ಕೆಲ್ವಿ ಮಕ್ಕಳ ಕಡೆ ಎಳೆದಾಯಿತು. ಸಾಧಾರಣವಾಗಿ ಯಾರೂ – ಬರ್ನೆಲ್ ಮಕ್ಕಳು ಸೇರಿದಂತೆ – ಅವರ ಜೊತೆ ಮಾತೂ ಆಡಲಿಕ್ಕೆ ಆಸ್ಪದವಿದ್ದಿಲ್ಲ. ಬರ್ನೆಲ್ ಮಕ್ಕಳು ಕೆಲ್ವಿ ಮಕ್ಕಳ ಮುಂದೆ ಠೀವಿಯಿಂದ, ಜಂಬದಿಂದ ನಡೆಯುತ್ತಿದ್ದರು. ನಡವಳಿಕೆಯ ಎಲ್ಲ ವಿಷಯದಲ್ಲಿ ಸಂಪ್ರದಾಯ ಹಾಕುವವರು ಅವರೇ. ಹಾಗಾಗಿ, ಎಲ್ಲರೂ ಕೆಲ್ವಿ ಮಕ್ಕಳನ್ನು ದೂರವಿಟ್ಟಿದ್ದರು. ಲಿಲ್ ಕೆಲ್ವಿ ಅತ್ಯಂತ ಸಾಮಾನ್ಯವಾದ ಹಾಗೂ ದರಿದ್ರವಾಗಿ ಕಾಣುವ ಹೂಗುಚ್ಛವನ್ನು ಕೈಯಲ್ಲಿ ಹಿಡಿದುಕೊಂಡು ಡೆಸ್ಕಿನೆಡೆ ನಡೆದಾಗ ಉಪಾಧ್ಯಾಯರು ಆ ಇಬ್ಬರು ಹುಡುಗಿಯರನ್ನು ಮಾತಾಡಿಸುತ್ತಿದ್ದುದು ಒಂದು ವಿಶಿಷ್ಟ ಧಾಟಿಯಲ್ಲಿ. ಇತರೇ ಮಕ್ಕಳಿಗೆ ಅವರದು ಬೇರೆಯದೇ, ವಿಶೇಷವಾದ ಮುಗುಳ್ನಗೆ.

ಈ ಹುಡುಗಿಯರು ಲವಲವಿಕೆಯ, ಕಷ್ಟಪಟ್ಟು ದುಡಿಯುವ, ಸಣ್ಣಗಿನ ಒಬ್ಬ ಅಗಸಗಿತ್ತಿಯ ಮಕ್ಕಳು. ಆಕೆ ಕೆಲಸದ ಮೇಲೆ ಬೆಳಗಿನ ಹೊತ್ತೆಲ್ಲ ಒಂದು ಮನೆಯಿಂದ ಇನ್ನೊಂದು ಮನೆಗೆ ಹೋಗುತ್ತಿದ್ದಳು. ಹೀನ ಸ್ಥಿತಿ! ಅಂದ ಹಾಗೆ, ಅವಳ ಗಂಡ ಎಲ್ಲಿ? ಯಾರಿಗೂ ಸರಿಯಾಗಿ ಗೊತ್ತಿಲ್ಲ. ಆದರೆ ಎಲ್ಲರೂ ಹೇಳುತ್ತಿದ್ದುದು ಅವನು ಜೈಲಿನಲ್ಲಿದ್ದ ಎಂದು. ಅಂದರೆ, ಈ ಹುಡುಗಿಯರು ಒಬ್ಬ ಅಗಸಗಿತ್ತಿಯ ಹಾಗೂ ಒಬ್ಬ ಕೈದಿಯ ಮಕ್ಕಳು. ಬೇರೆ ಮಕ್ಕಳಿಗೆ ಒಳ್ಳೇ ಜೊತೆ! ಅವರು ನೋಡಲಿಕ್ಕೂ ಥೇಟ್ ಅದೇ ತರಹ ಇದ್ದರು. ಆ ಹುಡುಗಿಯರನ್ನು ಅವರ ಅಮ್ಮ ಯಾಕೆ ಹಾಗೆ ಎದ್ದು ಕಾಣುವಂತೆ ಇಟ್ಟಿದ್ದಳು ಅನ್ನುವುದು ಅರ್ಥವಾಗುವುದಿಲ್ಲ. ಆಕೆ ಕೆಲಸ ಮಾಡಿಕೊಡುತ್ತಿದ್ದ ಜನರು ಕೊಟ್ಟ ಹಳೆಯ ತುಂಡು ಬಟ್ಟೆಗಳನ್ನೇ ಆ ಹುಡುಗಿಯರು ಹಾಕಿಕೊಳ್ಳುತ್ತಿದ್ದುದು. ದಪ್ಪಗೆ, ತುಂಬ ಸಾದಾ ಇದ್ದ ಹಾಗೂ ಮೈ ತುಂಬ ನಸುಗಂದು ಮಚ್ಚೆಗಳಿದ್ದ ಲಿಲ್ ಶಾಲೆಗೆ ಧರಿಸಿ ಬರುತ್ತಿದ್ದುದು ಬರ್ನೆಲ್ ಅವರು ಕೊಟ್ಟ ಒಂದು ಹಸಿರು ಬಣ್ಣದ ಕೃತಕ ಉಣ್ಣೆ ಬಟ್ಟೆಯ ಟೇಬಲ್ ಕ್ಲಾತ್‌ನಿಂದ ಮಾಡಿದ್ದ ಉಡುಪು. ಅದರ ಕೆಂಪು, ರೇಷ್ಮೆ ಬಟ್ಟೆಯ ತೋಳುಗಳು ಲೋಗಾನ್ ಅವರು ಕೊಟ್ಟ ಕರ್ಟನ್ ಬಟ್ಟೆಗಳದ್ದು. ಅವಳ ವಿಶಾಲವಾದ ಹಣೆಯ ಮೇಲಿದ್ದ ಹ್ಯಾಟು – ದೊಡ್ಡವರು ಹಾಕಿಕೊಳ್ಳುವ ಹ್ಯಾಟು – ಒಂದಾನೊಂದು ಕಾಲದಲ್ಲಿ ಪೋಸ್ಟ್ ಮಿಸ್ಟೆಸ್ ಲೆಕಿ ಅವರ ಸ್ವತ್ತಾಗಿದ್ದುದು. ಹ್ಯಾಟಿನ ಹಿಂಭಾಗ ಮೇಲಕ್ಕೆ ಮಡಚಿತ್ತು ಮತ್ತು ಅದು ಒಂದು ದೊಡ್ಡ, ಕಡುಗೆಂಪು ಪುಕ್ಕದಿಂದ ಅಲಂಕೃತವಾಗಿತ್ತು. ಈ ವೇಷದಲ್ಲಿ ಲಿಲ್ ಒಳ್ಳೆಯ ಹುಡುಗನಂತೆ ಕಾಣುತ್ತಿದ್ದಳು! ಯಾರೇ ಆಗಲಿ, ಅವಳನ್ನು ನೋಡಿ ನಗದೆ ಇರಲಿಕ್ಕೆ ಸಾಧ್ಯವಿದ್ದಿಲ್ಲ. ಅವಳ ತಂಗಿ - ನಮ್ಮ ಎಲ್ಸಿ - ಒಂದು ದೊಡ್ಡ ಬಿಳಿ ಉಡುಪನ್ನು ಧರಿಸುತ್ತಿದ್ದಳು. ಅದು ಒಂದು ಥರ ನೈಟ್ ಗೌನಿನಂತಿತ್ತು. ಅವಳ ಬೂಟುಗಳು ಒಬ್ಬ ಹುಡುಗಂದು. ನಮ್ಮ ಎಲ್ಸಿ ಯಾವುದೇ ಬಟ್ಟೆ ಧರಿಸಲಿ ವಿಚಿತ್ರವಾಗೇ ಕಾಣುತ್ತಿದ್ದಳು. ಒಳ್ಳೆಯ ಹಕ್ಕಿಯ ಮೂಳೆ! ಕ್ರಾಪು ಮಾಡಿದ ಕೂದಲು; ದೊಡ್ಡ ಅಗಲವಾದ, ಗಂಭೀರ ಕಣ್ಣುಗಳು. ಘನ ಗಂಭೀರದ ಪುಟ್ಟ ಹುಡುಗಿ. ಅವಳು ನಕ್ಕಿದ್ದು ಯಾರೂ ಯಾವತ್ತೂ ಕಂಡಿದ್ದಿಲ್ಲ. ಮಾತಂತೂ ತುಂಬ ವಿರಳ. ಅವಳು ಜೀವನವನ್ನು ಕಳೆದ ರೀತಿಯೇ ಹಾಗೆ - ಲಿಲ್‌ಗೆ ಅಂಟಿಕೊಂಡು. ಅವಳು ಯಾವಾಗಲೂ ಲಿಲ್‌ನ ಲಂಗ ಹಿಡಿದುಕೊಂಡು ಇರುತ್ತಿದ್ದಳು. ಲಿಲ್ ಎಲ್ಲಿ ಹೋದರೂ, ನಮ್ಮ ಎಲ್ಸಿ ಅವಳ ಹಿಂದೆ. ಆಟದ ಬಯಲಲ್ಲಿ; ಮನೆಯಿಂದ ಶಾಲೆಗೆ, ಶಾಲೆಯಿಂದ ಮನೆಗೆ ಹೋಗುವ ರಸ್ತೆಯಲ್ಲಿ ಲಿಲ್ ಮುಂದೆ ಮತ್ತು ನಮ್ಮ ಎಲ್ಸಿ ಹಿಂದೆ. ಉಸಿರು ಕಟ್ಟಿಕೊಂಡಾಗ ಮಾತ್ರ ನಮ್ಮ ಎಲ್ಸಿ ಲಿಲ್ಲಳ ಲಂಗವನ್ನು ಜಗ್ಗುವಳು. ಆಗ ಲಿಲ್ ನಿಂತು, ಹಿಂತಿರುಗಿ ನೋಡುವಳು. ಈ ಕೆಲ್ವಿ ಹುಡುಗಿಯರು ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳುವುದರಲ್ಲಿ ಯಾವತ್ತೂ ಸೋತಿಲ್ಲ.

ಈಗ ಅವರು ಹುಡುಗಿಯರು ನೆರೆದಿರುವ ಕಡೆ ಸುಮ್ಮನೆ ನಿಂತಿದ್ದಾರೆ. ಆ ಹುಡುಗಿಯರ ಮಾತು ಇವರ ಕಿವಿಗೆ ಬೀಳದೆ ಇರಲಿಕ್ಕೆ ಸಾಧ್ಯವಿದ್ದಿಲ್ಲ. ಅವರು ಇವರ ಕಡೆ ನೋಡಿ ತಿರಸ್ಕಾರದ ನಗೆ ನಕ್ಕಾಗ ಲಿಲ್ ಎಂದಿನಂತೆ ಪೆದ್ದು ಪೆದ್ದಾಗಿ , ನಾಚಿಕೆಯಿಂದ ಮುಗುಳ್ನಕ್ಕಳು. ನಮ್ಮ ಎಲ್ಸಿ ಮಾತ್ರ ಬರಿ ನೋಡುತ್ತ ನಿಂತಳು.

ಹೆಮ್ಮೆಯಿಂದ ಬೀಗುತ್ತಾ ಇಸಾಬೆಲ್ ಮಾತಾಡುತ್ತಿದ್ದಳು. ರತ್ನಗಂಬಳಿ ಕೋಲಾಹಲವೆಬ್ಬಿಸಿತು. ಜೊತೆಗೇ, ನಿಜವಾದ ದುಪ್ಪಟಿಗಳನ್ನು ಹಾಸಿದ್ದ ಹಾಸಿಗೆಗಳು ಮತ್ತು ಮುಚ್ಚಳವಿದ್ದ ಗೂಡು ಒಲೆ.

ಅವಳು ಮಾತು ಮುಗಿಸಿದ ತಕ್ಷಣ ಕೇಜ಼ಿಯಾ ಹೇಳಿದಳು, "ಏಯ್, ಇಸಾಬೆಲ್, ನೀನು ದೀಪಾನೇ ಮರೆತುಬಿಟ್ಟೆಯಲ್ಲ !"

"ಓ ಹೌದು," ಎಂದಳು ಇಸಾಬೆಲ್. "ಹೌದು, ಊಟದ ಮನೆಯ ಮೇಜಿನ ಮೇಲೆ ಬಿಳಿ ಗೋಳ ಇರೋ ಹಳದಿ ಗಾಜಿಂದು ಒಂದು ಪುಟಾಣಿ ದೀಪ ಇದೆ. ಆ ದೀಪಕ್ಕೂ ನಿಜವಾದ ದೀಪಕ್ಕೂ ವ್ಯತ್ಯಾಸಾನೇ ಇಲ್ಲ."

"ಎಲ್ಲಕ್ಕಿಂತ ಚೆನ್ನಾಗಿರೋದು ಅಂದ್ರೆ ಆ ದೀಪ," ಎಂದಳು ಕೇಜ಼ಿಯಾ. ಆ ಪುಟ್ಟ ದೀಪದ ಬಗ್ಗೆ ಇಸಾಬೆಲ್ ಒಂದರ್ಧದಷ್ಟೂ ಸರಿಯಾಗಿ ಹೇಳಲಿಲ್ಲ ಅನ್ನಿಸಿತು ಅವಳಿಗೆ. ಆದರೆ ಯಾರೂ ಕೇಜ಼ಿಯಾಳ ಮಾತಿಗೆ ಸರಿಯಾಗಿ ಗಮನ ಕೊಡಲಿಲ್ಲ. ಆ ದಿನ ಮಧ್ಯಾಹ್ನ ಅದನ್ನು ನೋಡಲಿಕ್ಕೆ ಬರುವ ಇಬ್ಬರು ಹುಡುಗಿಯರು ಯಾರು ಎಂಬುದನ್ನು ಇಸಾಬೆಲ್ ಯೋಚಿಸುತ್ತಿದ್ದಳು. ಕೊನೆಗೆ, ಅವಳು ಎಮ್ಮಿ ಕೋಲ್ ಮತ್ತು ಲೇನಾ ಲೋಗಾನ್ ಬರುವುದು ಎಂದು ಹೇಳಿದಳು. ಆಮೇಲೆ, ಬರಲಿಕ್ಕೆ ಎಲ್ಲರಿಗೂ ಅವಕಾಶ ಇದೆ ಎಂದು ಇಸಾಬೆಲ್ ಹೇಳಿದಾಗ ಬೇರೆ ಹುಡುಗಿಯರಿಗೆ ಅಷ್ಟೇನೂ ತೃಪ್ತಿಯಾಗಲಿಲ್ಲ. ಒಬ್ಬರಾದ ಮೇಲೆ ಒಬ್ಬರು ಇಸಾಬೆಲ್‌ಳ ಸೊಂಟವನ್ನು ಬಳಸಿ, ಅವಳ ಜೊತೆ ಸ್ವಲ್ಪ ದೂರ ನಡೆದರು. ಅವರು ಪಿಸುಮಾತಿನಲ್ಲಿ ಗುಟ್ಟಾಗಿ ಹೇಳುವಂಥ ಒಂದು ಮಾತಿತ್ತು : "ಇಸಾಬೆಲ್ ನನ್ನ ಸ್ನೇಹಿತೆ."

ಕೆಲ್ವಿ ಹುಡುಗಿಯರು ಮಾತ್ರ ದೂರ ಉಳಿದರು. ಅವರನ್ನು ಎಲ್ಲರೂ ಮರೆತಿದ್ದರು. ಅವರು ಬೇರೆ ಏನೂ ಕೇಳಿಸಿಕೊಳ್ಳುವಂಥದ್ದಿಲ್ಲ.

ದಿನಗಳು ಉರುಳಿದವು. ಹುಡುಗಿಯರು ಬೊಂಬೆ ಮನೆಯನ್ನು ನೋಡಲಿಕ್ಕೆ ಹೋದಂತೆಲ್ಲ ಅದರ ಪ್ರಸಿದ್ಧಿ ಹೆಚ್ಚಾಯಿತು. ಅದೇ ಒಂದು ಮುಖ್ಯ, ಅತ್ಯಾಸಕ್ತಿಯ ವಿಷಯವಾಯಿತು. ಎಲ್ಲರ ಬಾಯಲ್ಲೂ ಒಂದೇ ಪ್ರಶ್ನೆ : "ನೀನು ಬರ್ನೆಲ್ ಅವರ ಬೊಂಬೆ ಮನೇನ ನೋಡಿದೀಯಾ ? ಓ ಎಷ್ಟು ಚೆನ್ನಾಗಿದೆ ಅಲ್ವಾ ? ಏನು, ನೀನು ನೋಡಿಲ್ವಾ ? ಅಯ್ಯೋ !"

ಊಟದ ಬಿಡುವಿನಲ್ಲೂ ಅದೇ ವಿಷಯ. ಪೈನ್ ಮರಗಳಡಿ ಹುಡುಗಿಯರು ದೊಡ್ಡ ದೊಡ್ಡ ಮಟನ್ ಸ್ಯಾಂಡ್‌ವಿಚ್‌ಗಳನ್ನು, ಬೆಣ್ಣೆ ಹಚ್ಚಿದ ಜಾನಿ ಕೇಕ್‌ಗಳನ್ನು ತಿನ್ನುತ್ತ ಕೂತಿರುತ್ತಿದ್ದರು. ಆಗ, ಎಂದಿನಂತೆ, ಕೆಲ್ವಿ ಹುಡುಗಿಯರು – ನಮ್ಮ ಎಲ್ಸಿ ಲಿಲ್‌ಗೆ ಅಂಟಿಕೊಂಡು – ಅವರ ಮಾತುಗಳನ್ನಾಲಿಸುತ್ತ ಮತ್ತು ದೊಡ್ಡ ಕೆಂಪು ಹನಿಗಳಿಂದ ಒದ್ದೆಯಾದ ವೃತ್ತ ಪತ್ರಿಕೆಯಲ್ಲಿ ಸುತ್ತಿದ ಜ್ಯಾಮ್ ಸ್ಯಾಂಡ್‌ವಿಚ್‌ಗಳನ್ನು ತಿನ್ನುತ್ತಾ ಕೂತಿರುತ್ತಿದ್ದರು.

"ಅಮ್ಮಾ, ಕೆಲ್ವಿಯವರನ್ನು ಒಂದೇ ಒಂದ್ಸಲ ಕರೀಲಾ ?" ಎಂದು ಕೇಳಿದಳು ಕೇಜ಼ಿಯಾ.

"ಖಂಡಿತ ಇಲ್ಲ, ಕೇಜ಼ಿಯಾ."

"ಯಾಕೆ ?"

"ಹೋಗಾಚೆ ಕೇಜ಼ಿಯಾ. ಯಾಕಂತ ನಿನಗೆ ಗೊತ್ತೇ ಇದೆ."

ಕೊನೆಗೆ ಕೆಲ್ವಿ ಹುಡುಗಿಯರ ಹೊರತಾಗಿ ಉಳಿದವರೆಲ್ಲ ಬೊಂಬೆ ಮನೆಯನ್ನು ನೋಡಿದ್ದಾಯಿತು.

ಅವತ್ತಿನ ದಿನ ಆ ವಿಷಯದ ಬಗ್ಗೆ ಅಷ್ಟು ಉತ್ಸಾಹ ಇದ್ದಿಲ್ಲ. ಊಟದ ಬಿಡುವಿನ ಸಮಯದಲ್ಲಿ ಹುಡುಗಿಯರು ಪೈನ್ ಮರಗಳಡಿ ನಿಂತಿದ್ದರು. ಯಾವಾಗಲೂ ಇಬ್ಬರೇ ಆಗಿ, ಯಾವಾಗಲೂ ಆಲಿಸುತ್ತಿರುವವರಾಗಿ, ಕೆಲ್ವಿಯವರು ಪೇಪರಿನಲ್ಲಿ ಸುತ್ತಿದ್ದ ಆಹಾರವನ್ನು ತಿನ್ನುತ್ತಿದ್ದಾಗ ಅವರನ್ನು ಪೀಡಿಸಬೇಕು ಅನ್ನಿಸಿತು ಆ ಹುಡುಗಿಯರಿಗೆ. ಎಮ್ಮಿ ಕೋಲ್ ಪಿಸುಮಾತು ಶುರುಮಾಡಿದಳು :

"ಲಿಲ್ ಕೆಲ್ವಿ ದೊಡ್ಡವಳಾದಾಗ ಕೆಲಸದಾಳು ಆಗೋವಳಿದಾಳೆ."

"ಅಯ್ಯೋ !" ಎಂದಳು ಇಸಾಬೆಲ್ ಬರ್ನೆಲ್. ಹಾಗೆ ಹೇಳಿ, ಆಕೆ ಎಮ್ಮಿಗೆ ಕಣ್ಣು ಹೊಡೆದಳು.

ಹೌದು ಎನ್ನುವ ಹಾಗೆ ಎಮ್ಮಿ – ಆ ತರಹದ ಮಾತು ಕೇಳಿದಾಗ ತನ್ನ ತಾಯಿ ಮಾಡುತ್ತಿದ್ದ ಹಾಗೆ – ತಲೆಯಾಡಿಸಿದಳು.

"ನಿಜ, ನಿಜ, ನಿಜ !" ಎಂದಳು.

ಆಮೇಲೆ, ಲೇನಾ ಲೋಗಾನ್ ಕಣ್ಣು ಹೊಡೆದಳು. "ನಾನವಳನ್ನು ಕೇಳ್ಲಾ ?" ಎಂದಳು, ಮೆಲ್ಲನೆ.

"ನಿನ್ನಿಂದ ಖಂಡಿತ ಆಗಲ್ಲ ಬಿಡು" ಎಂದಳು ಜೆಸ್ಸಿ ಮೇ.

"ಅಯ್ಯೋ, ನಂಗೇನೂ ಭಯ ಇಲ್ಲ ಕಣೆ," ಎಂದಳು ಲೇನಾ. ತಕ್ಷಣ ಕೋಪದಿಂದ ಚೀರಿ, ಕುಣಿದಳು.

"ನೋಡಿ ಬೇಕಾದ್ರೆ. ನನ್ನ ಕಡೆ ನೋಡಿ ! ಈಗ


*With Best wishes from*




**ACADEMIC (INDIA) PUBLISHERS**

PUBLISHERS ○ DISTRIBUTORS ○ EXPORTERS

Publishers of Largest Range of Competition Books for Various Exams and Subject Dictionaries on almost all the Subjects

*B-9, Rattan Jyoti Building*
*18, Rajendra Place, New Delhi - 110 008*
*Phone : 5742171, 5812181*
*Fax : 91-11-5772171*
*E-mail : angelaip@del3.vsnl.net.in*

ನೋಡಿ ನನ್ನ ಕಡೆ!'' ಎನ್ನುತ್ತ ಲೇನಾ ಮೆಲ್ಲಗೆ, ನಿಧಾನವಾಗಿ ಮುನ್ನಡೆದು, ಹಿಂತಿರುಗಿ ನೋಡಿ ಕಿಲಕಿಲ ನಕ್ಕು, ಕೆಲ್ವಿಯವರ ಕಡೆ ನಡೆದಳು.

ಊಟ ಮಾಡುತ್ತಿದ್ದ ಲಿಲ್ ತಲೆಯೆತ್ತಿ ನೋಡಿದಳು. ತಿನ್ನುವುದನ್ನು ನಿಲ್ಲಿಸಿ, ಉಳಿದದ್ದನ್ನು ತಕ್ಷಣ ಕಾಗದದಲ್ಲಿ ಸುತ್ತಿಟ್ಟಳು. ನಮ್ಮ ಎಲ್ಸಿ ಅಗಿಯುವುದನ್ನು ನಿಲ್ಲಿಸಿದಳು. ಏನು ಬಂತಪ್ಪ ಗ್ರಹಚಾರ!

''ನೀನು ದೊಡ್ಡವಳಾದಾಗ ಕೆಲಸದಾಳಾಗ್ತೀಯಂತೆ, ನಿಜಾನಾ, ಲಿಲ್ ಕೆಲ್ವಿ ?'' ಎಂದಳು ಲೇನಾ - ಕೀರಲು ಧ್ವನಿಯಲ್ಲಿ.

ಗಾಢ ಮೌನ. ಉತ್ತರ ಕೊಡುವುದರ ಬದಲು ಲಿಲ್ ಪೆದ್ದು ಪೆದ್ದಾಗಿ, ನಾಚಿಕೆಯಿಂದ ನಸುನಕ್ಕಳು - ಆ ಪ್ರಶ್ನೆಯಿಂದ ತನಗೇನೂ ಬೇಸರವಾಗಲಿಲ್ಲ ಎನ್ನುವಂತೆ. ಲೇನಾ ಹೇಗೆ ಬೇಸ್ತುಬಿದ್ದಳು, ನೋಡಿ! ಹುಡುಗಿಯರು ಕಿಸಕ್ ಅಂತ ನಕ್ಕರು.

ಲೇನಾಗೆ ಸಿಟ್ಟು ಬಂತು. ಸೊಂಟದ ಮೇಲೆ ಕೈ ಇಟ್ಟುಕೊಂಡು ಈಗ ಇನ್ನೂ ಗಟ್ಟಿಯಾಗಿ,

''ನಿಮ್ಮಪ್ಪ ಜೈಲಿನಲ್ಲಿದ್ದಾನಂತೆ, ಹೌದೇನೇ ?'' ಎಂದು ಹಗೆ ತೀರಿಸಿಕೊಳ್ಳುವ ಹಾಗೆ ಬುಸುಗುಟ್ಟಿದಳು.

ಈ ಮಾತು ಹುಡುಗಿಯರಿಗೆ ಎಷ್ಟು ಆಶ್ಚರ್ಯ ಉಂಟುಮಾಡಿತು ಎಂದರೆ, ಅವರೆಲ್ಲ ಸಂಭ್ರಮದಿಂದ, ಸಂತೋಷದಿಂದ ಹುಚ್ಚೆದ್ದು ಒಟ್ಟಿಗೇ ಓಡಿದರು. ಆಮೇಲೆ, ಅಲ್ಲಿ ಯಾರಿಗೋ ಒಂದು ಹಗ್ಗ ಸಿಕ್ಕಿತು. ಅದನ್ನು ತೆಗೆದುಕೊಂಡು ಎಲ್ಲರೂ ಜಿಗಿಯಲಿಕ್ಕೆ ಶುರು ಮಾಡಿದರು. ಅವರು ಯಾವತ್ತೂ ಅಷ್ಟು ಎತ್ತರಕ್ಕೆ ಜಿಗಿದಿದ್ದಿಲ್ಲ; ಅಷ್ಟು ವೇಗದಿಂದ ಆ ಕಡೆ ಈ ಕಡೆ ಓಡಿದ್ದಿಲ್ಲ ಅಥವಾ ಅಷ್ಟು ಧೈರ್ಯದ ಕೆಲಸ ಮಾಡಿದ್ದಿಲ್ಲ.

ಮಧ್ಯಾಹ್ನ ಬರ್ನೆಲ್ ಮಕ್ಕಳನ್ನು ಮನೆಗೆ ಕರೆದುಕೊಂಡು ಹೋಗಲು ಪ್ಯಾಟ್ ಗಾಡಿಯನ್ನು ತಂದಿದ್ದ. ಅವರು ಗಾಡಿಯಲ್ಲಿ ಕುಳಿತು ಮನೆಗೆ ಹೋದರು. ಮನೆಗೆ ಯಾರೋ ಬಂದಿದ್ದರು. ಯಾರಾದರೂ ಮನೆಗೆ ಬಂದರೆ ಖುಷಿಪಡುವ ಇಸಾಬೆಲ್ ಮತ್ತು ಲಾಟ್ಟೀ ಲಂಗದ ಮೇಲು ಹೊದಿಕೆಗಳನ್ನು ತೆಗೆಯಲು ಮಹಡಿಯ ಮೇಲೆ ಹೋದರು. ಆದರೆ ಕೇಜ಼ಿಯಾ ಕಳ್ಳ ಹೆಜ್ಜೆಯಲ್ಲಿ ಹಿತ್ತಲ ಕಡೆ ನಡೆದಳು. ಅಲ್ಲಿ ಯಾರೂ ಇದ್ದಿಲ್ಲ. ಅಂಗಳದ ಬಿಳಿ ಗೇಟಿನ ಮೇಲೆ ಕೂತು ಜೋಕಾಲಿಯಾಡಲು ಶುರುಮಾಡಿದಳು. ಆ ಹೊತ್ತಿಗೆ, ಹಾಗೇ ರಸ್ತೆಯ ಕಡೆ ನೋಡುತ್ತಿದ್ದಾಗ, ಆಕೆ ಎರಡು ಸಣ್ಣ ಚುಕ್ಕೆಗಳನ್ನು ಕಂಡಳು. ಅವು ಕ್ರಮೇಣ ದೊಡ್ಡದಾಗುತ್ತ ಹೋದವು; ಅವಳ ಕಡೆಯೇ ಬರುತ್ತಿದ್ದವು. ಅದು ಕೆಲ್ವಿಗಳು ಎಂದು ಈಗ ಅವಳಿಗೆ ಸ್ಪಷ್ಟವಾಯಿತು. ಎದ್ದು ಓಡಲು ಸಿದ್ಧಳಾಗಿದ್ದಳು ಎಂಬಂತೆ ಗೇಟಿನಿಂದ ಕೆಳ ಹಾರಿದಳು. ನಂತರ, ಹಿಂದೇಟು ಹಾಕಿ, ಸ್ವಲ್ಪ ಹೊತ್ತು ಸುಮ್ಮನೆ ನಿಂತಳು. ಕೆಲ್ವಿಗಳು ಈಗ ಹತ್ತಿರ ಬಂದರು. ಅವರ ಪಕ್ಕದಲ್ಲಿ ಉದ್ದಕ್ಕೆ, ರಸ್ತೆಯುದ್ದಕ್ಕೂ, ಹಳದಿ ಹೂ ಗಿಡಗಳ ಮಧ್ಯದವರೆಗೆ ಚಾಚಿಕೊಂಡಿದ್ದ ರೀತಿಯಲ್ಲಿ ಅವರ ನೆರಳು. ಕೇಜ಼ಿಯಾ ಪುನಃ ಗೇಟನ್ನು ಹತ್ತಿ ಕುಳಿತಳು. ಅವರನ್ನು ಕರೆಯಬೇಕು ಎಂದು ಈಗ ಆಕೆ ನಿರ್ಧಾರ ಮಾಡಿದ್ದಳು. ತೂಗಾಡುತ್ತ ಗೇಟಿನಿಂದ ಕೆಳಗಿಳಿದಳು.

''ಹಲೋ!'' ಎಂದಳು, ಹಾದು ಹೋಗುತ್ತಿದ್ದ ಕೆಲ್ವಿಯವರನ್ನು ಕಂಡು.

ಅವರಿಗೆ ಗಾಬರಿಯಾಗಿ ತಕ್ಷಣ ನಿಂತರು. ಲಿಲ್ ತನ್ನ ಪೆದ್ದು ನಗುವನ್ನು ನಕ್ಕಳು. ನಮ್ಮ ಎಲ್ಸಿ ಬಿರುಗಣ್ಣಿನಿಂದ ನೋಡಿದಳು.

''ನೀವು ಬೇಕಾದ್ರೆ ನಮ್ಮ ಬೊಂಬೆ ಮನೇನ ನೋಡ್ಲಿಕ್ಕೆ ಬರ್ಬಹುದು,'' ಎಂದಳು ಕೇಜ಼ಿಯಾ. ಅವರನ್ನು ಒಳಗೆ ಕರೆದುಕೊಂಡು ಹೋಗಲೆಂದು ಮೆಲ್ಲಗೆ ಮುಂದೆ ಹೆಜ್ಜೆ ಇಟ್ಟಳು. ಆದರೆ ಅದನ್ನು ಕಂಡು ಗಾಬರಿಯಿಂದ ಲಿಲ್ಲಳ ಮುಖ ಕೆಂಪಾಯಿತು. ಅವಳು ತಕ್ಷಣ ತಲೆ ಅಲ್ಲಾಡಿಸಿದಳು.

''ಯಾಕೆ, ಬರಲ್ವಾ ?'' ಎಂದಳು ಕೇಜ಼ಿಯಾ. ಲಿಲ್ ಉಸಿರಿಗಾಗಿ ಬಾಯಿಬಿಟ್ಟಳು. ಆಮೇಲೆ ನಿಧಾನವಾಗಿ ಹೇಳಿದಳು, ''ನಿಮ್ಮಮ್ಮ ನಮ್ಮಮ್ಮನಿಗೆ ಹೇಳಿದಾರೆ ನೀನು ನಮ್ಮ ಜೊತೆ ಮಾತಾಡೋ ಹಾಗಿಲ್ಲ ಅಂತ.''

''ಹೌದಾ ?'' ಎಂದಳು ಕೇಜ಼ಿಯಾ. ಈಗ ಏನು ಹೇಳಬೇಕು ಎಂದು ಅವಳಿಗೆ ತಿಳಿಯಲಿಲ್ಲ.

''ಪರವಾಗಿಲ್ಲ, ನೀವು ಬಂದು ನಮ್ಮ ಬೊಂಬೆ ಮನೆಯನ್ನು ನೋಡ್ಬಹುದು. ಬನ್ನಿ ಒಳಕ್ಕೆ. ಯಾರೂ ನೋಡ್ತಾ ಇಲ್ಲ.''

ಆದರೆ ಲಿಲ್ ಪುನಃ ತಲೆ ಅಲ್ಲಾಡಿಸಿದಳು, ಖಂಡಿತ ಬೇಡ ಅನ್ನುವ ಹಾಗೆ.

''ಯಾಕೆ, ನೋಡ್ಬೇಕು ಅಂತ ಆಸೆ ಇಲ್ವಾ ?'' ಎಂದಳು ಕೇಜ಼ಿಯಾ. ತಕ್ಷಣ ಎಲ್ಸಿ ಲಿಲ್ಲಳ ಲಂಗ ಹಿಡಿದೆಳೆದಳು; ಮೊರೆಯಿಡುವ ಕಣ್ಣುಗಳಿಂದ ಲಿಲ್ ಕಡೆ ನೋಡಿದಳು. ಬೊಂಬೆ ಮನೆಯನ್ನು ನೋಡಬೇಕು ಎಂಬ ಆಸೆ ಅವಳಿಗೆ. ಲಿಲ್ ನಮ್ಮ ಎಲ್ಸಿಯ ಕಡೆ ಒಂದು ಕ್ಷಣ ಆಶ್ಚರ್ಯದಿಂದ ನೋಡಿದಳು. ಆದರೆ ನಮ್ಮ ಎಲ್ಸಿ ಅವಳ ಲಂಗವನ್ನು ಪುನಃ ಜಗ್ಗಿದಳು; ಹೆಜ್ಜೆ ಮುಂದಿಟ್ಟಳು. ಕೇಜ಼ಿಯಾ ಅವರನ್ನು ಕರೆದುಕೊಂಡು ಮುಂದೆ ನಡೆದಳು. ಅವರು ಎರಡು ಬೀದಿ ಬೆಕ್ಕುಗಳಂತೆ ಬೊಂಬೆ ಮನೆಯನ್ನಿಟ್ಟಿದ್ದ ಅಂಗಳದೊಳಗೆ ನಡೆದರು.

''ಅಗೋ, ಅಲ್ಲಿದೆ ನೋಡಿ,'' ಎಂದಳು ಕೇಜ಼ಿಯಾ. ಸ್ವಲ್ಪ ಹೊತ್ತು ಮೌನ. ಲಿಲ್ ಜೋರಾಗಿ ಉಸಿರಾಡಿದಳು; ಹೆಚ್ಚು ಕಡಿಮೆ ಘೂಂಕರಿಸಿದಳು. ನಮ್ಮ ಎಲ್ಸಿ ಕಲ್ಲಿನಂತೆ ಮೌನವಾಗಿದ್ದಳು.

''ನಿಮಗೆ ನಾನದನ್ನ ಬಿಚ್ಚಿ ತೋರಿಸ್ತೇನೆ, ತಾಳಿ'' ಎಂದಳು ಕೇಜ಼ಿಯಾ - ತುಂಬ ಆತ್ಮೀಯತೆಯಿಂದ. ಆಕೆ ಬೊಂಬೆ ಮನೆಯ ಕೊಂಡಿಯನ್ನು ಬಿಚ್ಚಿದಳು. ಅವರು ಒಳಗೆ ಇಣುಕಿ ನೋಡಿದರು.

''ಅದು ಡ್ರಾಯಿಂಗ್ ರೂಮ್. ಆಮೇಲೆ ಅದು ಡೈನಿಂಗ್ ಹಾಲ್. ಆಮೇಲೆ ಅದು....''

''ಕೇಜ಼ಿಯಾ !''

ಓ, ಅವರು ಬೆಚ್ಚಿಬಿದ್ದರು !

ಕೂಗಿದ್ದು ಬೆರಿಲ್ ಆಂಟಿ. ಹುಡುಗಿಯರು ಹಿಂತಿರುಗಿ ನೋಡಿದರು. ಹಿತ್ತಲ ಬಾಗಿಲಲ್ಲಿ ಬೆರಿಲ್ ಆಂಟಿ ನಿಂತಿದ್ದರು - ತಾವು ನೋಡಿದ್ದು ನಂಬಲಿಕ್ಕಾಗುವುದಿಲ್ಲ ಎನ್ನುವ ರೀತಿಯಲ್ಲಿ ದಿಟ್ಟಿಸಿ ನೋಡುತ್ತ.

''ಕೆಲ್ವಿಗಳಿಗೆ ಒಳಗೆ ಕರೀಲಿಕ್ಕೆ ನಿನಗೆಷ್ಟು ಧೈರ್ಯ ಅಂತೀನಿ !'' ಎಂದರು ಕಠೋರವಾಗಿ. ''ನೀನು ಅವರ ಜೊತೆ ಮಾತಾಡೋ ಹಾಗಿಲ್ಲ ಅಂತ ಗೊತ್ತಿಲ್ವಾ ? ಏಯ್ ಮಕ್ಕಳೇ, ಓಡಿ ಇಲ್ಲಿಂದ. ತಕ್ಷಣ ಹೊರಡಿ. ಆಮೇಲೆ, ಮತ್ಯಾವತ್ತೂ ಇಲ್ಲಿಗೆ ಬರಬೇಡಿ'' ಎಂದರು ಬೆರಿಲ್ ಆಂಟಿ. ಆಕೆ ಮುಂದೆ ಬಂದು ಆ ಹುಡುಗಿಯರು ಕೋಳಿಮರಿಗಳು ಎಂಬಂತೆ ಅವರನ್ನು 'ಉಷ್' ಎಂದು ಹೊರ ಓಡಿಸಿದರು.

''ತಕ್ಷಣ ಓಡಿ ಇಲ್ಲಿಂದ !'' ಎಂದರು - ಕಠೋರವಾಗಿ ಹಾಗೂ ಅಹಂಕಾರದಿಂದ.

ಕೆಲ್ವಿಯವರಿಗೆ ಎರಡನೇ ಸಲ ಹೇಳುವ ಅಗತ್ಯವಿದ್ದಿಲ್ಲ. ತೀವ್ರ ಅಪಮಾನದಿಂದ ಇಬ್ಬರೂ ಮುದುರಿಕೊಂಡು – ಲಿಲ್ ತನ್ನ ತಾಯಿಯಂತೆ – ಮತ್ತು ನಮ್ಮ ಎಲ್ಸಿ ದಿಗ್ಭ್ರಮೆಗೊಂಡು, ಆ ದೊಡ್ಡ ಅಂಗಳವನ್ನು ಹೇಗೋ ದಾಟಿ ಬಿಳಿ ಗೇಟಿನ ಮುಖಾಂತರ ನುಸುಳಿ ಹೊರನಡೆದರು.

''ಕೆಟ್ಟ ಹುಡುಗಿ ! ತುಂಟಿ !'' ಎಂದು ಬೆರಿಲ್ ಆಂಟಿ ಕೇಜ಼ಿಯಾಗೆ ಹೇಳಿ ಬೊಂಬೆ ಮನೆಯ ಬಾಗಿಲನ್ನು ರಪ್ಪನೆ ಮುಚ್ಚಿದರು.

ಅವತ್ತಿನ ಗ್ರಹಚಾರ ಚೆನ್ನಾಗಿದ್ದಿಲ್ಲ. ವಿಲ್ಲಿ ಬ್ರೆಂಟ್ ಅವರಿಂದ ಒಂದು ಪತ್ರವೂ ಬಂದಿತ್ತು. ಭಯ ಹುಟ್ಟಿಸುವ, ಬೆದರಿಕೆಯ ಪತ್ರ. ಆಕೆ ಆ ದಿನ ಸಾಯಂಕಾಲ ಪುಲ್‌ಮನ್ಸ್ ಬುಷ್‌ಗೆ ಬಂದು ತಮ್ಮನ್ನು ಕಂಡುಹೋಗದಿದ್ದರೆ, ತಾವೇ ಸ್ವತಃ ಮನೆಗೆ ಬಂದು ಯಾಕೆ ಬರಲಿಲ್ಲ ಎಂದು ಕೇಳುವರಿದ್ದರು ಎಂದು ಬರೆದಿದ್ದರು. ಆದರೂ ಆ ಕೆಲ್ವಿ ಇಲಿಮರಿಗಳನ್ನು ಬೆದರಿಸಿ ಓಡಿಸಿದ್ದುದರಿಂದ ಮತ್ತು ಕೇಜ಼ಿಯಾಗೆ ಚೆನ್ನಾಗಿ ಬಯ್ದಿದ್ದರಿಂದಾಗಿ ಆಕೆಗೆ ಸ್ವಲ್ಪ ಸಮಾಧಾನವಾಗಿತ್ತು. ಹೃದಯದಲ್ಲಿ ಅಂತಹ ಭಯಂಕರ ಒತ್ತಡ ಇದ್ದಿಲ್ಲ. ಗುನುಗುನು ಹಾಡುತ್ತ ಆಕೆ ಒಳನಡೆದರು.

ಕೆಲ್ವಿಯವರು ಬರ್ನೆಲ್ ಅವರ ಕಣ್ಣಿಗೆ ಬೀಳದಷ್ಟು ದೂರ ಹೋದಾಗ ರಸ್ತೆಬದಿಯ ಒಂದು ದೊಡ್ಡ ಕೆಂಪು ಚರಂಡಿ ಪೈಪಿನ ಮೇಲೆ ಸ್ವಲ್ಪ ವಿಶ್ರಮಿಸಲೆಂದು ಕುಳಿತರು. ಲಿಲ್ಲಳ ಕೆನ್ನೆಗಳು ಇನ್ನೂ ಉರಿಯುತ್ತಿದ್ದವು. ಆಕೆ ಪುಕ್ಕವಿದ್ದ ಹ್ಯಾಟನ್ನು ತೆಗೆದು ಮೊಣಕಾಲ ಮೇಲಿಟ್ಟುಕೊಂಡು ಕೂತಳು. ತೇಲುಗಣ್ಣಿನಿಂದ ಅವರು ಕೊರಕಲಿನಾಚೆಯ ಸಣ್ಣ ಹುಲ್ಲುಗಾವಲಿನಲ್ಲಿ ಹಾಲು ಕರೆಯಲು ಸಿದ್ಧವಾಗಿ ನಿಂತಿದ್ದ ಲೋಗಾನ್ ಅವರ ಹಸುಗಳಿದ್ದ ತಡಿಕೆಗಳೆಡೆಗೆ ನೋಡಿದರು. ಅವರು ಏನು ಯೋಚಿಸುತ್ತಿದ್ದರು ?

ನಮ್ಮ ಎಲ್ಸಿ ತನ್ನ ಅಕ್ಕನಿಗೆ ಇನ್ನೂ ಹತ್ತಿರವಾಗಿ ಕುಳಿತಳು. ಇಷ್ಟು ಹೊತ್ತಿಗೆ ಅವಳು ಆ ಸಿಡುಕು ಹೆಂಗಸನ್ನು ಮರೆತಿದ್ದಳು. ಅಕ್ಕನ ಹ್ಯಾಟಿನ ಪುಕ್ಕದ ಮೇಲೆ ಕೈಯಾಡಿಸಿ, ತನ್ನ ಅಪರೂಪದ ಮುಗುಳ್ನಗೆಯನ್ನು ನಕ್ಕಳು.

''ನಾನು ಆ ಪುಟ್ಟ ದೀಪ ನೋಡ್ದೆ'' ಎಂದಳು ಮೆಲ್ಲಗೆ. ನಂತರ ಅವರು ಮತ್ತೊಮ್ಮೆ ಮೌನ ತಾಳಿದರು.

ಅನುವಾದ : ಶ್ರೀನಿವಾಸ್ ಎ. ಸುತ್ರಾವೆ
೧೬೪೬/೧೮, ಮಹಡಿ, ವಿದ್ಯಾನಗರ
ದಾವಣಗೆರೆ - ೫೭೭ ೦೦೫

# GOODWILL'S MOST USEFUL BOOKS

### ENGLISH IMPROVEMENT

| Particulars | | Price (Rs.) |
|---|---|---|
| G-1 | Grammar and Composition | 60 |
| G-2 | Boost Your Vocabulary | 65 |
| G-5 | Spelling Power Made Easy | 40 |
| G-7 | 3000 Synonyms & Antonyms | 60 |
| G-8 | 3000 Idioms & Phrases | 60 |
| G-9 | 3000 Quotations | 60 |
| G-10 | 3000 Proverbs | 60 |
| G-11 | Common Mistakes in English | 90 |
| G-19 | Dictionary of Idioms & Phrases | 60 |
| G-25 | Dictionary of Quotations | 50 |
| G-26 | Improve your English | 35 |
| G-28 | Improve your Vocabulary | 70 |
| G-29 | Dictionary of Synonyms & Antonyms | 125 |
| G-29 | Dictionary of Synonyms & Antonyms (Small Size) | 60 |
| G-33 | Common Errors in English | 70 |
| G-34 | Improve Your Idioms & Phrases | 35 |
| G-41 | Basic English Grammar of Schools | 35 |
| G-45 | Dictionary of Proverbs | 60 |
| G-58 | How to Write Correct English | 50 |
| G-66 | Spoken English | 45 |
| G-105 | Rapid Vocabulary Builder | 80 |
| G-126 | Self Help to English Conversation | 90 |

### BOOKS ON IQ

| Particulars | | Price (Rs.) |
|---|---|---|
| G-16 | Test Your IQ | 75 |
| G-22 | Check Your IQ | 50 |
| G-23 | How to Improve your IQ | 50 |
| G-24 | IQ for all | 60 |
| G-27 | Better your IQ | 60 |
| G-94 | Take the IQ Challenge | 50 |
| G-200 | Challenging IQ Tests | 60 |

### GENERAL KNOWLEDGE

| Particulars | | Price (Rs.) |
|---|---|---|
| G-77 | Test of Verbal Reasoning | 55 |
| G-78 | Goodwill's Book of G.K. | 45 |
| G-117 | Goodwill's Encyclopaedia of General Knowledge (with suppl.) | 220 |
| G-132 | Objective General Knowledge | 22 |
| G-157 | A to Z of General Knowledge | 95 |

### BOOK ON PUZZLES

| Particulars | | Price (Rs.) |
|---|---|---|
| G-86 | Puzzles for the High IQ (Foreign Reprint) | 50 |
| G-87 | Critical Thinking Puzzles (Foreign Reprint) | 50 |
| G-92 | 250 Challenging Puzzles | 60 |
| G-111 | Challenging Science Puzzles (Foreign Reprint) | 50 |
| G-170 | Challenging Math Puzzles (Foreign Reprint) | 50 |
| G-171 | Great Picture Puzzles (Foreign Reprint) | 50 |

### BOOKS ON QUIZ

| Particulars | | Price (Rs.) |
|---|---|---|
| G-35 | G.K. Quiz (Small Size) | 50 |
| G-51 | World Facts at a Glance | 40 |
| G-52 | Do you Know | 35 |
| G-54 | India Quiz | 35 |
| G-56 | 1250 Questions and Answers Quiz Book | 35 |
| G-57 | Super Quiz Book | 35 |
| G-62 | Sports Quiz | 35 |
| G-68 | Science Quiz | 35 |
| G-74 | Readymade Quizzes (Foreign Reprint) | 35 |
| G-75 | Standard Quiz Book (Foreign Reprint) | 35 |
| G-123 | 500 Amazing Questions & Answers | 60 |
| G-133 | G.K. Quiz (Big Size) | 80 |
| G-147 | Nearly Impossible Brain Bafflers (Foreign Reprint) | 50 |
| G-201 | Mental Magic | 60 |

### ESSAY WRITING

| Particulars | | Price (Rs.) |
|---|---|---|
| G-3 | Up-to-date School Essays, Letters Applications, Paragraphs & Stories | 40 |
| G-17 | School Essays, Letters & Paragraphs | 30 |
| G-18 | School Essays & Letters for Juniors | 25 |
| G-30 | Selected Essays | 40 |
| G-96 | School Essays, Letters, Paragraphs Comprehension and Applications | 30 |
| G-31 | Latest Essays | 60 |
| G-32 | 160 Essays | 99 |
| G-50 | 67 Model Essays | 35 |
| G-59 | Essays for Seniors | 35 |
| G-71 | Advanced Essays for College and Other Competitive Exams | 99 |
| G-135 | Essays | 95 |
| A-14 | Popular Essays | 55 |
| A-89 | Current Essays | 60 |

### SPEECHES

| Particulars | | Price (Rs.) |
|---|---|---|
| G-49 | Readymade Speeches for All Occasions | 50 |
| G-55 | Perfect Public Speaking | 50 |
| G-70 | The World's Great Speeches | 125 |

### LETTER WRITING

| Particulars | | Price (Rs.) |
|---|---|---|
| G-6 | Stolen Love Letters | 35 |
| G-20 | Readymade Letters for All Occasions | 65 |
| G-38 | Draft Your Own Business Letters | 95 |
| G-39 | 350 Model Business Letters | 100 |
| G-40 | Readymade Business Letters | 50 |
| G-42 | Standard Book of Model Letters | 45 |
| G-44 | Lively Love Letters | 60 |
| G-47 | How to Write Impressive Business Letters | 75 |
| G-48 | Top Winning Letters | 60 |
| G-101 | Better Applications for Better Jobs | 75 |
| G-106 | Bussiness Letter for Powerful Communication | 75 |
| G-124 | 200 Everyday Letters for All Occasions | 85 |
| G-144 | Top everyday Letters | 35 |

### PALMISTRY, ASTROLOGY AND NUMEROLOGY

| Particulars | | Price (Rs.) |
|---|---|---|
| G-65 | Astrology for All | 30 |
| G-90 | Cheiro's Guide to the Nand | 50 |
| G-91 | Cheiro's Palmistry for All | 60 |
| G-93 | Cheiro's Language of the Hand | 75 |
| G-98 | Cheiro's Book of Palmistry, Astrology and Numerology | 125 |
| G-99 | Cheiro's you and Your Star | 95 |
| G-131 | Cheiro's Book of Numbers | 70 |
| G-205 | The Little Glant of Encyclopaedia of Palmistry | 60 |

### HEALTH AND FITNESS

| Particulars | | Price (Rs.) |
|---|---|---|
| G-95 | Arthritis | 45 |
| G-36 | Improve Your Eyesight | 35 |
| G-63 | Nature Cure for Common Diseases | 60 |
| G-64 | High Blood Pressure | 45 |
| G-83 | 100% Fitness (Foreign Reprint) | 50 |
| G-121 | A Guide to Herbal Remedies | 70 |
| G-130 | A to Z Healthy Living | 70 |
| G-175 | Stretching for Fitness, Health and Performance | 125 |
| G-181 | Yoga for Daily Life | 60 |

### Other Book Series Available

- ★ WIN QUIZZES WIN MILLIONS
- ★ PROJECTS/EXPERIMENTS
- ★ GAMES & TRICKS
- ★ JOKES & RIDDLES
- ★ MAGIC LIBRARY SERIES
- ★ TITLES ON CHESS
- ★ MY BOOK SERIES (In Colour)
- ★ TELL ME ABOUT SERIES (In Colour)
- ★ 101 SERIES
- ★ GOODWILL'S SMART SERIES
- ★ BABY NAMES
- ★ OBJECTIVE QUESTIONS
- ★ LEARNING LANGUAGES
- ★ OTHER GENERAL TITLES

*Available at your nearest booksellers. For direct order, please remit price of books plus packing & postage Rs. 10 extra by M.O./Bank Draft.*

## GOODWILL PUBLISHING HOUSE

B-3, RATTAN JYOTI, 18, RAJENDRA PLACE, NEW DELHI-110008 (INDIA)

Phones : 5750801, 5755519, 5820556 Fax : 91-11-5763428 E-mail : gphceh@del2vsnl.net.in



# ಕೂಸನ್ನು ನೋಡಲು ಬರುವವರು

*(ಕ್ಷಮಿಸಿ, ಇಲ್ಲಿ ಬರುವ ಪಾತ್ರಗಳು ನಮ್ಮಲ್ಲಿ ಯಾರೂ ಆಗಬಹುದು)*

ನನ್ನ ಚಿಕ್ಕಪ್ಪನ ಮಗಳಿಗೆ ಹೆರಿಗೆಯಾಗಿದೆ. ಲಕ್ಷಣವಾದ ಒಂದು ಹೆಣ್ಣು ಮಗುವಿಗೆ ಜನ್ಮವಿತ್ತಿದ್ದಾಳೆ. ಅದೇನೂ ಅವಳಿಗೂ ಅವಳ ಗಂಡನಿಗೂ ಹೆಣ್ಣು ಮಗುವೇ ಆಗಬೇಕೆಂಬ ಆಸೆಯಿತ್ತು. ಹಾಗೇ ಆಯಿತು.

ರುಕ್ಕೂ ನಾನೂ ಬೇರೆಯಲ್ಲ. ಅವಳು ನನಗೆ ಖಾಸಾ ಚಿಕ್ಕಪ್ಪನ ಮಗಳು. ಅವಳಿಗೂ ಅವಳ ಗಂಡನಿಗೂ ಪುಟ್ಟ ನೌಕರಿ. ಇಬ್ಬರ ಆದಾಯ ಸೇರಿಸಿದರೂ ಅಷ್ಟಕ್ಕಷ್ಟೇ. ಅತ್ತೆಯ ಮನೆಯವರು ಅಂದರೆ ಅತ್ತೆ ಒಬ್ಬರೇ. ಯಾವ ಪೂರ್ವಾರ್ಜಿತ ಆಸ್ತಿಯೂ ಇಲ್ಲ. ಆದರೂ ಇವರು ಹೆಣ್ಣು ಮಗುವೇ ಬೇಕೆಂದು ಏಕೆ ಆಸೆಪಟ್ಟರೋ ! ಲಾಲನೆ ಪಾಲನೆ ಒದು ಬರಹಕ್ಕಿಂತಲೂ ಮಗಳಿಗೆ ಮದುವೆ ಮಾಡಿ ಒಳ್ಳೆಯ ಮನೆಗೆ ಸೇರಿಸುವುದು ಕಷ್ಟವಾಗಿರುವ ಈ ದಿನಗಳಲ್ಲಿ ಇಂಥವರೂ ಇದ್ದಾರೆಯೇ !

ರುಕ್ಕೂನ ಹೆರಿಗೆ ಸಮಯದಲ್ಲಿ ಆಸ್ಪತ್ರೆ ಡ್ಯೂಟಿ ನನಗೇ ಬೀಳುತ್ತಿತ್ತು. ಏನೇನೋ ವಿಚಾರ, ತಾಕಲಾಟಗಳ ನಡುವೆ ನಾನು ಕಾಫಿ, ಗಂಜಿ, ಟಾನಿಕ್ಕು ಅಂತ ಆಸ್ಪತ್ರೆಗೆ ಎಡತಾಕುತ್ತಿದ್ದೆ. ಒಂದು ದಿನ ರುಕ್ಕೂ ಪ್ರೊಫೆಸರ್ ಅಂತ ಕಾಣುತ್ತೆ, ನನ್ನ ಗುರುತು ಹಿಡಿದು ''ಏನು ನೀ ಇಲ್ಲಿ!'' ಅಂತ ಕೇಳಿದರು. ಹೀಗೇ ಅಂತ ಹೇಳಿದೆ. ಸರಿ ತಾವು ಮಗುವನ್ನು ನೋಡುವುದಾಗಿ ನನ್ನ ಹಿಂದೇ ಬಂದರು. ಮಗುವನ್ನು ನೋಡಿದವರೇ ''ಅಯ್ಯೋ ಚಿನ್ನಾರಿ ! ಎಂಥ ಸುಂದರವಾದ ಮಗು'' ಅಂತ ಇಂಗ್ಲಿಷಿನಲ್ಲಿ ಉದ್ಗರಿಸಿದರು. ''ದೇವರಂಥಾ ವಜ್ರ'' ಅಂತ ನಾನೂ ಸೇರಿಸಿದೆ. ''ಹೌದೌದು, ನೀವು ಹೇಳೋದು ಸಂಪೂರ್ಣವಾಗಿ ಸತ್ಯ'' ಅಂದರು. ಅದು ಇದು ಮಾತನಾಡಿದರು. ಶುಭ ಹಾರೈಸಿ, ಟೇಕ್ ಕೇರ್ ಎನ್ನುತ್ತಾ ನಿರ್ಗಮಿಸಿದರು. ಇದನ್ನೆಲ್ಲ ಗಮನಿಸಿ ಮನಸ್ಸಿಗೆ ತುಂಬ ಹಿತವೆನಿಸಿತು.

ಆ ದಿನ ಸಂಜೆ ರುಕ್ಕೂ ಕೆಲಸ ಮಾಡುತ್ತಿದ್ದ ಆಫೀಸಿನ ಒಂದಿಬ್ಬರು ಲೇಡಿ ಕಲೀಗ್ಸ್ ಬಂದರು. ಅದರಲ್ಲಿ ಒಬ್ಬಾಕೆ, ''ಮಗಳನ್ನು ಹೆತ್ತು ಭಲೊ ಮಾಡಿದ್ರಿ, ಹೇಗೂ ಈಗ ೩೩% ಮಹಿಳಾ ಮೀಸಲಾತಿ ಬಂದಿದೆಯಲ್ಲ'' ಅಂತ ನಗೆಯಾಡಿದರು. ಇನ್ನೊಬ್ಬಾಕೆ ತನ್ನ ವ್ಯಾಲೆಟ್‌ನಿಂದ ಒಂದು ನೋಟು ತೆಗೆದು ಮಗುವಿನ ಮೇಲಿರಿಸಿ ಮಗುವನ್ನು ಮುಟ್ಟಿ ಕಣ್ಣಿಗೊತ್ತಿಕೊಳ್ಳುತ್ತಾ ''ದೇವರಿದ್ದ ಹಾಗೆ ಕಣ್ರಿ'' ಅಂತ ಧನ್ಯತಾಭಾವವನ್ನು ಅನುಭವಿಸಿದಳು. ''ಅಯ್ಯೊ ಇದೆಲ್ಲ ಯಾಕೆ'' ಎಂದಿದ್ದಕ್ಕೆ ''ಬರಿ ಕೈಲಿ ಮಗೂನ ನೋಡಬಾರದು ಅದಕ್ಕೆ....'' ಎಂದರು. ದೃಶ್ಯ ತಮಾಷೆಯಾಗಿ ಕಂಡಿತು.

ಮರುದಿನ ಮುಚ್ಚಂಜೆ. ಕೆಲವು ಹೆಂಗಸರು ಮಗುವನ್ನು ನೋಡಲು ಬಂದರು. ಅವರು ಮಗುವನ್ನು ನೋಡಿ ಮಾತಾಡುತ್ತಿದ್ದಂತೆ ಕರೆಂಟ್ ಹೋಯಿತು. ನರ್ಸ್ ಒಂದಷ್ಟು ಕ್ಯಾಂಡಲ್ಸ್ ತಂದಿರಿಸಿದಳು. ಆಗ ಒಂದು ತಮಾಷೆ ನಡೆಯಿತು. ನಮ್ಮ ಗುಡಿ ಆಚಾರ್ರ ಹೆಂಡತಿ - ತುಂಬಾ ಮಡಿ ಮೈಲಿಗೆ ಹೆಂಗಸು - ಸೆರಗು ಹೊದ್ದು ಆಚೆ ಈಚೆ ತಾಗಿಸದೇ ಒಳಬಂದರು. ''ಈ ಆಸ್ಪತ್ರೆ ಅಂದ್ರೆ ನಂಗೆ ಸರಿ ಹೋಗಲ್ಲ ನೋಡ್ರಿ. ಏನೋ ನಮ್ ರುಕ್ಕೂನ, ಅವಳ ಮಗೂನ ನೋಡಿಕೊಂಡು ಹೋಗೋಣ ಅಂತ ಬಂದೆ'' ಎನ್ನುತ್ತ ''ಏನಮ್ಮ ರುಕ್ಕೂ, ಕಾಫೀ ಹಾಲೂಂತ ಹೋಟೆಲ್‌ನಿಂದ ತರಿಸ್ಕೋಬೇಡ. ನಿಮ್ಮ ಮನೆಯಿಂದಲೇ ತರಿಸ್ಕೋ.... ಎಲ್ಲೇ ನಿನ್ನ ಮಗೂ....'' ಎನ್ನುತ್ತ ಐದೋ ಹತ್ತೋ ಮಗುವಿನ ಕಡೆ ದೂರದಿಂದ ಎಸೆದು ದುಡುದುಡು ಅಂತ ಹೊರಟೇಬಿಟ್ಟರು. ಬಂದಾಕೆ ಮಗು ಎಂಥದು, ಗಂಡೋ ಹೆಣ್ಣೋ ಅಂತ ಕೇಳಲಿಲ್ಲ, ಹೆರಿಗೆ ಹೇಗಾಯಿತು ಅಂತ ವಿಚಾರಿಸಲಿಲ್ಲ, ಮನೆಯಿಂದ ಏನಾದರೂ ಕಳುಹಿಸಿ ಕೊಡಲೇ ಅಂತ ಕಕ್ಕುಲತೆ ತೋರಲಿಲ್ಲ. ಇವರನ್ನು ಯಾರು ಬಾ ಅಂದಿದ್ದರು. ಕೂಸು ಕೂಡ ಇವರು ತನ್ನನ್ನು ಬಂದು ನೋಡಲಿಲ್ಲ ಅಂತ ಅತ್ತಿರಲಿಲ್ಲ. ಅಲ್ಲಿದ್ದ ಜನರೆಲ್ಲ ನಗತೊಡಗಿದರು. ಅಷ್ಟರಲ್ಲಿ ಕರೆಂಟ್ ಬಂತು. ಮಗು ನಗುತ್ತಿರುವಂತೆ ಭಾಸವಾಯಿತು. ದೇವರೂ ನಕ್ಕಿರಬೇಕಲ್ಲವೇ ! ನನಗಂತೂ ನಗಬೇಕೋ ಅಳಬೇಕೋ ಒಂದೂ ತೋಚಲಿಲ್ಲ.

ಒಂದನ್ನು ಮಾತ್ರ ಮುಖ್ಯವಾಗಿ ಗಮನಿಸಿದೆ. ಬಹಳಷ್ಟು ಜನ ಮಗುವಿಗೆ ದುಡ್ಡು ಕೊಡುವುದೇ ಒಂದು ಕೆಲಸ ಮಾಡಿಕೊಂಡು ಬಂದವರಂತೆ ಆಡುತ್ತಿದ್ದರು. ಒಂದಷ್ಟು ನಗು, ಪ್ರೀತಿ, ವಿಶ್ವಾಸದ ಮಾತು, ಭೂತ ಭವಿಷ್ಯತ್ತನ್ನು ಬೆಸೆಯುವ ವಿಚಾರಗಳು ಬಹಳ ಜನರಲ್ಲಿ ಬರಲೇ ಇಲ್ಲ. ''ಗಂಡು ಮಗುವೇನ್ಸಾರ್'' ಅಂತ ಸಜೆಸ್ಟಿವ್ ಆಗಿ ಕೇಳುವವರೂ, ''ಹೆಣ್ಣು ಮಗು'' ಎಂದೊಡನೆ, ''ಹಣ್ಣೇ !'' ಎಂದು ಹೀಗಳೆಯುವವರೂ ಬಹಳವಾಗಿ ಕಂಡುಬಂದರು. ''ಈಗೇನ್ಸಾರ್ ಒಳ್ಳೊಳ್ಳೆ ಯೋಜನೆಗಳು ಬಂದಿವೆ....'' ಅಂತ ಅಂದಿದ್ದರು ಆಸ್ಪತ್ರೆಗೆ ಬಂದಿದ್ದ ಎಲ್‌ಐಸಿ ಏಜೆಂಟರೊಬ್ಬರು.

ರುಕ್ಕೂ ಅತ್ತೆ ಸುಬ್ಬತ್ತೆ ಹಳ್ಳಿಯಿಂದ ಬಂದರು. ''ಅಯ್ಯೋ... ಅಯ್ಯೋ... ರುಕ್ಕೂ, ಗಂಡ್ ಹೆತ್ಕೊಡು ಅಂತ ಕೇಳಿದ್ದೆ. ಇದೇನು ಈ ಮೂದೇವೀನ ಹೆತ್ತಿದ್ದಿಯಲ್ಲೇ....'' ಅಂತ ಗೋಳಾಡಿದರು. ರುಕ್ಕೂ ಅತ್ತೇನ ಸಮಾಧಾನ ಮಾಡುತ್ತಾ, ''ನಮ್ ಕೈಯಲ್ಲೇನಿದೆ ಅತ್ತೆಮ್ಮ. ಅದೂ ಈಗಿನ ಕಾಲ್ದಲ್ಲಿ ಗಂಡು ಹೆಣ್ಣು ಅಂತ ಭೇದ ಮಾಡೋಕಾಗೊಲ್ಲ. ಎರಡೂ ಒಂದೇ. ಚೆನ್ನಾಗಿ ಓದ್ಸೋದು ಬೆಳಸೋದು ಮಾಡಿದ್ರೆ ನನ್ನ ಮಗಳೇನು ಒಳ್ಳೇ ರಾಣಿ ಹಾಗೆ ಆಗ್ತಾಳೆ. ನೀವು ಪ್ರೀತಿಯಿಂದ ಆಶೀರ್ವಾದ ಮಾಡಿ, ಅಷ್ಟು ಸಾಕು. ಬೇಜಾರು ಮಾಡ್ಕೋಬೇಡಿ..'' ''ಏನು ಆಶೀರ್ವಾದಾನೋ ಏನೋ ರಾಮಾ ರಾಮಾ..'' ಅಂತ ಪೇಚಾಡುತ್ತಾ ಕುಳಿತುಕೊಂಡರು. ಶುದ್ಧ ಪಿಟಿಪಿಟಿ.

''ಅರೆ ರುಕ್ಕಮ್ಮ, ಒಳ್ಳೇ ಕೆಲಸ ಮಾಡಿದ್ರಿ. ಹೆಣ್ಣು ಮಗೂನೇ ಸರಿ. ಹೆಣ್ಣು ಮಕ್ಕಳೇ ತಂದೆತಾಯೀನ ಪ್ರೀತಿ ಮಾಡೋದು. ಗಂಡು ಮಕ್ಕಳಿಗೆ ಎಷ್ಟು ಮಾಡಿದರೂ ಅಷ್ಟೇ. ನಮ್ಮ ಕರೀಂ ಬೇಟಾ ಇದ್ದಾನಲ್ಲ ಸುಮ್ನೇ ತಿನ್ತಾನೆ, ತಿರುಗ್ತಾನೆ. ಗರಾಜ್‌ನಲ್ಲಿ ಕೆಲಸಕ್ಕೆ ಹೋಗು ಅಂದ್ರೆ, ಇಲ್ಲ ಇಸ್ಕೂಲ್‌ಗೆ ಹೋಗ್ತೀನಿ ಅಂತಾನೆ. ಇಸ್ಕೂಲ್‌ಗೂ ಹೋಗಲ್ಲ ಕೆಲಸಕ್ಕೂ ಹೋಗಲ್ಲ. ಅಲ್ಲಿ ಇಲ್ಲಿ ಸೈತಾನ್‌ನಂತೆ ತಿರುಗ್‌ತಿರ್‍ತಾನೆ. ಅದೇ ನಮ್ಮ ನೂರುನ್ನೀಸಾ ಸಾಲೀನು ಕಲ್ತು, ಟೇಲರಿಂಗೂ ಮಾಡಿದ್ಲು. ಅಷ್ಟು ಇಷ್ಟು ಹಣ ಕೂಡ್ಸಿಟ್ಟು ಮನೆ ಕಟ್ಟಿಸಿದ್ಲು..... ಬೇಟಿ, ನಿಮ್ ಮಗಳಿಗೆ ಅಲ್ಲಾ ವಿದ್ಯಾಬುದ್ಧಿ ಚೆನ್ನಾಗಿ ಕೊಡ್ಲಿ. ಸಾಬ್‌ಗೆ ತಿಳಿಸಿಬಿಡಿ, ನಾ ಬಂದಿದ್ದೆ ಅಂತ. ಸಲಾಂ ಅಮ್ಮಾವ್ರೆ. ನಾನಿನ್ನು ಬರ್ತೀನಿ......'' ಎಂದು ಹರಸುತ್ತಾ ಹೊರಟು ಹೋದರು ರುಕ್ಕೂನ ಪರಿಚಿತರು.

– ಹೀಗೆ ಒಂದು ಹೆರಿಗೆ ಆಯಿತು ಅಂದ್ರೆ ನಾನಾ ರೀತಿಯ ಜನ ನಾನಾ ರೀತಿ ಪ್ರತಿಕ್ರಿಯಿಸುತ್ತಾರೆ. ಇನ್ನೊಂದೆರಡು ತಿಂಗಳಿಗೆ ರುಕ್ಕೂ ಮಗಳಿಗೆ ನಾಮಕರಣ. ಆಗಿನ ಪ್ರತಿಕ್ರಿಯೆಗಳು ಹೇಗಿರುತ್ತವೋ ಕಾದು ನೋಡಬೇಕು.

ಎ. ಪ್ರಾಣೇಶರಾವ್
ಮುಖ್ಯೋಪಾಧ್ಯಾಯರು, ಪಿ.ವಿ.ಎಸ್.ಬಿ.ಸಿ. ಪ್ರೌಢಶಾಲೆ,
ಹಂಪಿ ರಸ್ತೆ, ಹೊಸಪೇಟೆ- ೫೮೩ ೨೦೧, ಬಳ್ಳಾರಿ ಜಿಲ್ಲೆ

## ಅವಳೆದೆಯ ಜಂಗಮರು

ಸಂಜೆಗತ್ತಲಿನಲೂ ಮುತ್ತು ರತ್ನದ ರಾಶಿ,
ವಜ್ರ ವೈಢೂರ್ಯದ ಚಂಬೆಳಕಿನೊರತೆ
ಬಂಗಾರದ ಹೊಗೆಯಾಡುತಿದ್ದು ವಿಜಯನಗರ

ಗುಂಯಗುಡುವ ಗುಮ್ಮಟದ ತುಂಬ
ಪ್ರೀತಿ ವಾತ್ಸಲ್ಯದ ಮಾತು ರಿಂಗಣಿಸಿ
ಅದೇ ಶಬ್ದ ಶಂಖನಾದ

ಮಾತಿನ ಮೋಡಿಗೆ
ಮುತ್ತು ಪೋಣಿಸಿ ಸುಖಿಸಿದರು
ಸಾಖಿಯರ ಸೊಂಟ ಪುಂಕಾನು ಪುಂಕ
ಸೈನಿಕರು ಸೇವಕರು
ಕುದುರೆ ಕಾಲಾಳು ಗಳಿಸಿದ ಸೊತ್ತು
ಸುರೆಯ ಸೌರಭಕೆ ಚೆಲ್ಲಿ
ಹೇಳ ಹೆಸರಿಲ್ಲದೇ ಕರಗಿದರು
ಚರಿತ್ರೆಗೇ ಸುಳ್ಳು ಬಿರುದಾವಳಿ ಬರೆಸಿ

ನಮ್ಮವರು ಸತ್ತು
ಬದುಕಿಸಿದರು ಪರಂಪರೆಯ -
ಬಳುವಳಿಯ ಬೆಳಕೆಂದು
ಶತ ಶತಮಾನಗಳ ಮಹಾ ಸಂಪ್ರದಾನ



ಈ ಸಂಭ್ರಮದ ಸವಕಳಿಯ
ಹಿಡಿಹಿಡಿದು ಜೋತಾಡಿ
ಕಳೆದುಕೊಂಡೆವು ಮರಳಿಬಾರದ ಕೊಹಿನೂರು

ಸಂಖ್ಯಾ ಶಾಸ್ತ್ರಕೆ ಶೂನ್ಯವನು ಕೊಟ್ಟವರು
ಸೊನ್ನೆಗೆ ಸೊನ್ನೆ ಕೂಡಿ ಕಳೆದು
ಶೂನ್ಯ ಸಂಪಾದನೆ ಮಾಡಿದವರು
ನಮ್ಮವಳ ರಹದಾರಿ ಮುಕ್ತ ಮಾಡಿದ್ದೇವೆಂದು
ತಕರಾರಿಲ್ಲದೆ ಬದುಕ ದೋಚಲು

ಅವಳ ಬಸಿರೇ ಕೀವು ಕಿಲುಬಿನಾಗರ
ಅವಳೆದೆಯ ಜಂಗಮರೇ ಮಿಡಿನಾಗರ

**ಶಂಕರಯ್ಯ ಆರ್. ಘಂಟಿ**
ಸಂ. ಡಿ-೧೨, ಸ್ಟ್ಯಾಫ್ ಕ್ವಾರ್ಟರ್ಸ್
ಗುಲ್ಬರ್ಗಾ ಯೂನಿವರ್ಸಿಟಿ, ಗುಲ್ಬರ್ಗಾ - ೫೮೫ ೧೦೬

## ಅಪವಿತ್ರಮಿತ್ರ - ನಿನಗೊಂದು ಬಹಿರಂಗ ಪತ್ರ

ಹೇ ಪ್ರಿಯ ಸಹಜೀವಿ,
ಸ್ವೀಕರಿಸು ನನ್ನ ಜೀವಪ್ರೇಮ
ಅದೆಲ್ಲ ತೊರೆದಿಲ್ಲ
ಅದಕ್ಕೆ ನನ್ನ ಪ್ರಣಾಮ
ನೀನು ಮರೆತಿರುವಿ
ನೀನೊಂದು ಮಲಮೂತ್ರದ ಚೀಲ
ಮೇಲೆಲ್ಲ ಧರ್ಮಕರ್ಮಗಳ ಹೊದಿಕೆ
ಎದ್ದುಕಾಣುವ ಅಹಂಕಾರ ಅದಕೆ
ಈ ಜೀವಜಗತ್ತನ್ನೆಲ್ಲ ಆಳುವ ಬಯಕೆ
ಮನದಾಳದ ಅಜ್ಞಾತದ ನೆಲದಲ್ಲಿ
ಬೆಲೆಯಿಲ್ಲದೆ ಬಿದ್ದಿದ್ದ ಅಸ್ತ್ರಶಸ್ತ್ರಗಳು
ನಿನ್ನ ಮೀರಿ ಮಂಕಾದವು
ನಿನ್ನ ಚರಮದಹಂಕಾರ ಪರಮ ಅಧಿಕಾರ ಅವಕೆ
ನಿನ್ನಲ್ಲಿ ಅಸ್ತ್ರವೊ ? ಅಸ್ತ್ರದಲ್ಲಿ ನೀನೋ ?

ಎತ್ತ ನೋಡಿದರತ್ತ ಚಿತ್ರ ದಾರುಣ
ಅರಿಯದಾಗಿದೆ
ಎತ್ತ ಸಾಗಿದೆ ನಿನ್ನದಲ್ಲದ ಈ ನಿನ್ನ ಪಯಣ
ಆದಿ ಅರಿತ ಮನವು, ಹರ್ಷ ತುಂಬಿದ ತನುವು
ಲಯಶೂನ್ಯ ಅಂತ್ಯದ ಥಣರಿಂಗಣವು

ಕಲ್ಪನೆಗೂ ನಿಲುಕದ ಆಧುನಿಕ ಅಸ್ತ್ರಜನಿತ ಕರಣಮರಣ
ಹತ್ತಾರು ಗುಂಡುಗಳ ಹೊಡೆತ ಒಂದೇ ದೇಹಕೆ
ಛಿದ್ರಗೊಂಡ ದೇಹವ ಎಳೆದು ಹಾಕಬೇಕು ಒಂದೇ ಕ್ಷಣಕೆ
ಇಲ್ಲದಿರೆ, ಹರಿದು ಹಾಕುವವು ವೈರಿಗುಂಡಿನ ಚರಿಕೆ
ಈ ನೆಲ ನೀರು ಚಳಿಚವರು ಬೆಳೆ ಹಸಿರೆಲ್ಲ ನಮ್ಮವೇ ಗೆಳೆಯ
ಜೀವ ಪ್ರೀತಿಯ ಪಟ್ಟು ಹಿಡಿ, ಹೆದರಿ ಓಡುವುದು ಪ್ರಳಯ
ಬದುಕ ಈಡಾಡಿದ ನಿನಗೆ ಬದುಕೊಂದು ರುದ್ರಾಲಯ
ಅಹಂಕಾರದ ಮೆರವಣಿಗೆ ಅರಿವುದೆಂತು ?
ಮಲಮೂತ್ರ ದೇಹ ಸತ್ತವದು ಜೀವಾಲಯ
ಸದ್ದಿಲ್ಲದ ಈ ಯುದ್ಧಲೋಕ

ಎದ್ದುಬಿದ್ದು ನಡೆದಿದೆ ಅರಸುತ್ತ ನಾಕ
ಸಕಲೇಂದ್ರಿಯಗಳು ಗೊಂದಲದ ಕೊಳಕುಪಾಕ
ಭ್ರಮೆ ಭಂಗುರಗಳು ಧೇನಿಸಿವೆ ಎಲ್ಲೋ ಇದೆ ನರಕ



ನಿನ್ನರಿವು ಅರಳುವುದೆಂದು ? ದಯಾಪರ ತೆರಳುವುದೆಂದು ?
ಆದವು ನಿನಗೆ ಸಕಲ ಸುಖಗಳು ಸುಲಭಪ್ರಾಪ್ತ
ನೀನು ಸಹ ಅಂದುಕೊಂಡೇ ನಡೆದಿರುವೆ
ನಿನ್ನುದ್ದ ಎತ್ತರದ ತುಂಬೆಲ್ಲ ಕಪಟಗಳು ಗುಪ್ತ

ಆಡುವುದು ಅಮೆರಿಕದಲ್ಲೊಂದು,
ಅಯೋಧ್ಯಾದಲ್ಲೊಂದು
ಲೋಕಸಭೆಯಲ್ಲಿ ಇನ್ನೊಂದು,
ಲೋಕಲ್ ಸಭೆಯಲ್ಲಿ ಮತ್ತೊಂದು
ಲೋಕ ಬಲ್ಲದು ನಿನ್ನ ಜಾತ್ಯತೀತ ತತ್ವ ಢೋಂಗಿ
ಉಡುಪಿ ಮಠದಲಿ ಅಡಗಿಸಿ ಮಡಗಿರುವೆ
ಆರೆಸೆಸ್ ಟೋಪಿ ಚಡ್ಡಿ ಅಂಗಿ
ನಾಲಗೆ ನಿರಂತರ ನಟಿಸಿ ಪಠಿಸಿದೆ ಪರಮ
ದೇಶಪ್ರೇಮತತ್ವ
ಒಳಗೆ ಜ್ವಲಿಸಿದೆ ಜಾತಿ ಕುಲ ಗೋತ್ರ ಕರ್ಮತತ್ವ
ಇಬ್ಬಗೆ ಹರಿತ ಅಲಗಿನ ಮೇಲೆ ನಿನ್ನ ಅಪವಿತ್ರ ಮೈತ್ರಿ
ಲೋಕಕರಿವುಂಟು ಇದರ ಪತನ ಖಾತ್ರಿ,
ಇದರದಪವಿತ್ರ ಮೈತ್ರಿ

ಮರೆಯದಿರು ಮೆರೆಯದಿರು ಲೋಕದೆದುರು
ಆಗಲೇಬೇಕಿದೆ ಸಕಲ ಲೆಕ್ಕಗಳ ಚುಕ್ತ
ನಿನ್ನಪರಾಧ ಶೋಧಕರು ನಿನ್ನ ಬಳಿ ಬರುವುದಿಲ್ಲ
ನಿನ್ನನೆಂದೂ ಅರೆಸ್ಟ್ ಮಾಡುವುದಿಲ್ಲ
ಪೋಲಿಸ್ ಕಸ್ಟಡಿಗೆ ನೂಕಿ ಏರೋಪ್ಲೇನ್ ಎತ್ತುವುದಿಲ್ಲ
ಅವೆಲ್ಲ ಬೇಕಾಗಿಯೇ ಇಲ್ಲ, ಯಾಕಂತ ಗೊತ್ತಿದೆಯಲ್ಲ ?
ಆ ಸಕಲ ಶಕ್ತಿದೌಷ್ಟ್ಯಗಳು, ಅಗಣಿತ ಶಿಕ್ಷೆಯ ವಿಧಗಳು
ಕೋಳ ತೊಡಿಸಿ ನಡುಬೀದಿ ನಡೆಗಳು
- ಎಲ್ಲ ನಿನ್ನಲ್ಲೇ ಇವೆಯಲ್ಲ
ಸಿಬಿಐ ಮೆದುಳಲ್ಲಿ ನೀನೋ ! ನಿನ್ನಾಣತಿಯಲ್ಲಿ
ಸಿಬಿಐ ಮೆದುಳೊ ?
ಅವುಗಳ ಭಯ ನಿನಗೊ ? ನಿನ್ನ ಭಯ ಅವಕೋ ?
ಜ್ವಲಂತ ಮತ್ತೊಂದು ನಿನಗೆ ಹೊಳೆಯುವುದು ಕಷ್ಟ
ನಿನ್ನಲ್ಲಿ ನೀನಿಲ್ಲದಿರುವುದೇ ನಿನಗೆ ಕಾದಿಹ ತುಂಬಲಾರದ ನಷ್ಟ.

**ಮನಜ**
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು-೫೭೦ ೦೦೬

## ಭ್ರೂಣದ ಪ್ರಾರ್ಥನೆ

ಇನ್ನೂ ಭೂಮಿಗೆ ಬಾರದ ಭ್ರೂಣದ
ಪ್ರಾರ್ಥನೆಯನು ತುಸು ಕೇಳು ಪ್ರಭು !
ನನ್ನೀ ಮಾತಿಗೆ ಕೆಲವಕ್ಕಾದರೂ
'ತಥಾಸ್ತು' ಎಂದು ಹೇಳು ಪ್ರಭು !

ಹಕ್ಕಿಗಳೆದೆಯಲಿ ಕೊಂಚವಾದರೂ
ಚಿಲಿಪಿಲಿ ಉಲಿಯನು ಇರಿಸು ಪ್ರಭು !
ಕಾಂಕ್ರೀಟಿನ ಈ ಕಾಡಿನ ನಡುವೆಯೂ
ಆಗಸ ನೀಲಿಯ ಉಳಿಸು ಪ್ರಭು !

ಮೈಲುಗಟ್ಟಲೆ ಕ್ಯೂನಲಿ ನಿಲ್ಲಲು
ಕಾಲಿಗೆ ಶಕ್ತಿಯ ನೀಡು ಪ್ರಭು !
ಗಾಲಿಗಾಲಿಯಡಿ ನರಳುವ ಜೀವದಿ
ನಾಡಿ ಮಿಡಿತವನು ನಿಲಿಸು ಪ್ರಭು !

ಒಣಗುತ್ತಿರುವ ಹೃದಯದ ಬಳ್ಳಿಗೆ
ತಿಳಿನೀರನು ತುಸು ಹನಿಸು ಪ್ರಭು !



ಅಣುವಷ್ಟಾದರು ಕಣ್ಣುಗಳಲ್ಲಿ
ಕರುಣೆ, ಕನಿಕರವ ಇರಿಸು ಪ್ರಭು !

ಯಂತ್ರ ಭೂತಗಳ ಪೀಡೆಯ ಕಳೆಯುವ
ಮಂತ್ರೋಚ್ಚಾರಣೆ ಕಲಿಸು ಪ್ರಭು !
ಹೃದಯ ಹೃದಯಗಳ ಕದಗಳ ತೆರೆಯುವ
ಕೀಲಿ ಕೈಗಳನು ನೀಡು ಪ್ರಭು !

ಘಟಸರ್ಪಗಳ ನಡುವೆಯೂ ಬದುಕುವ
ವೈನತೇಯತನ ಕೊಡಿಸು ಪ್ರಭು !
ಸಾವಿರ ಸುಳ್ಳಿನ ಬಡಬಡಿಕೆಯಲಿ
ನಿಜ ಒಂದಾದರೂ ನುಡಿಸು ಪ್ರಭು !

**ಎನ್. ಶ್ರೀನಿವಾಸ ಉಡುಪ**
೩೦೭, ಸ್ಕೈಲೈನ್ ಸುರಭಿ ಅಪಾರ್ಟ್‌ಮೆಂಟ್ಸ್, ೧೪-ಪಿ
ವಿದ್ಯಾಪೀಠ ಮುಖ್ಯರಸ್ತೆ, ಬನಶಂಕರಿ ೩ನೇ ಹಂತ,
ಬೆಂಗಳೂರು - ೫೬೦ ೦೮೫



# ಮಾತಾಡುವ ದಾರಿಗಳು

ಪ್ರೊ॥ ಜಿ. ಎಚ್. ಹನ್ನೆರಡುಮಠ

**ಮಾ**ತಾಡುವ ದಾರಿಗಳನ್ನು ನೀವು ನೋಡಿದ್ದೀರಾ ? ನಗುವ..... ನಗಿಸುವ.... ಅಳುವ... ಆಡುವ... ಸುಖ ಕೊಡುವ... ಚುಂಬಿಸುವ... ದಾರಿಗಳನ್ನು ನೀವು ಬಲ್ಲಿರಾ ?

ಸುಂದರವಾದ ''ಹಾಯ್‌ವೇ'' ರಾಕ್ಷಸರು ಬಂದಮೇಲೆ ದಾರಿಯ ಸುಖ ಹಾಳು ಗೋರಿಯಾಯಿತು ! ಹಿಡಿಂಬಾಸುರಿಯರಾದ ಹೈಟೆಕ್ ಬಸ್ಸುಗಳು.... ಸೋಗುಲಾಡಿ ಸುಬ್ಬಿಯರಾದ ಏರ್‌ಕಂಡೀಶನ್ಡ್ ಕಾರುಗಳು...... ಹುಚ್ಚು ನಾಯಿಗಳಾದ ದ್ವಿಚಕ್ರ ವಾಹನಗಳು..... ಈ ವಾಹನಗಳಿಗೆ ಅಳವಡಿಸಿದ ಸಾಫಿಸ್ಟಿಕೇಟೆಡ್ ಟಯರುಗಳು.... ಟಯರುಗಳಿಗೆ ಹೇಳಿ ಮಾಡಿಸಿದ ಸೂಪರ್‌ಸೆನ್ಸೆಟಿವ್ ರೋಡುಗಳು..... ಕ್ರಾಸಿಂಗ್ ಸಿಗ್ನಲ್ಲು...... ರೆಡ್-ಗ್ರೀನ್ ಲೈಟುಗಳು..... ಇತ್ಯಾದಿ ಅತ್ಯಾಧುನಿಕ 'ಪೆಟ್ರೋಲ ರಾಕ್ಷಸ'ರ ಯುಗ ಬಂದಮೇಲೆ ನಿಜವಾದ ನಮ್ಮ ಹಸಿರು ದಾರಿಗಳು ಮರೆತೇಹೋದವು ! ಆ ದಾರಿಗಳು ಕೊಡುತ್ತಿದ್ದ ಸುಖ-ಸಂತೋಷ-ಖುಶಿ-ಶಾಂತಿ-ಹಸಿವೆ-ನೀರಡಿಕೆ-ನಿದ್ರೆ-ಜೀವನದ ಆಳವಾದ ಅನುಭವ.... ಎಲ್ಲಾ ಎಲ್ಲಾ ಇಂದು ಮರೆತುಹೋದವು.

ಒಂದು ಮಾತು ಮಾತ್ರ ಸತ್ಯ....
ಆ ದಾರಿಗಳು ಇನ್ನೂ ಸತ್ತಿಲ್ಲ !
ನಾವು ಮಾತ್ರ ಸತ್ತಿದ್ದೇವೆ !!

ಹಳ್ಳಿಯಿಂದ ಹಳ್ಳಿಗೆ, ಗುಡ್ಡದಿಂದ ಗುಡ್ಡಕ್ಕೆ, ಕೊಳ್ಳಕ್ಕೆ, ಹಳ್ಳಕ್ಕೆ, ಕಾಡಿಗೆ, ದಟ್ಟ ಕಾಡಿನ ನಡುವೆ ಇರುವ ಈರಣ್ಣನ ಗುಡಿಗೆ, ಹಳ್ಳ-ಕೊಳ್ಳಗಳಾಚೆ ಕಾಡುಕಂಟಿಯಲ್ಲಿರುವ ಈಶ್ವರ ಗವಿಗೆ, ಹನುಮಂತನ ಗುಡ್ಡಕ್ಕೆ, ನಾಗರಕಟ್ಟೆಗೆ, ದುರ್ಗೀ ಡೊಣೆಗೆ, ಗುಡ್ಡದ ಮೇಲಿರುವ ಕೂಗುಬಸವಣ್ಣನ ಪಡಿಗೆ, ಹೊಳೆಗಂಗವ್ವಳ ಡೊಗರಿಗೆ, ಬಂಡಿ ಬಸವನಿಗೆ.... ಎಲ್ಲೆಂದರಲ್ಲಿಗೆ.. ಬಯಲು - ಹಕ್ಕಲು - ಹೊಲ - ತೆಗ್ಗು - ತೆಮ್ರು - ಕಣಿವೆ - ಕೊಳ್ಳ - ಹಳ್ಳ-ಹಳವುಗಳನ್ನು ತಲುಪುತ್ತಿದ್ದ... ಸಾವಿಲ್ಲದ, ಸೋಲಿಲ್ಲದ, ದಣಿವಿಲ್ಲದ, ಮುದಿತನವಿಲ್ಲದ, ನಿತ್ಯ ನಿರಂತರವಾದ ಆ ಕಾಲ್ದಾರಿಯ ಸುಖ... ಇಂದಿನ ಕಾರುಗಳಲ್ಲಿ ಕುಳಿತುಕೊಳ್ಳುವ ದುರ್ದೈವಿಗಳಿಗೆ, ದ್ವಿಚಕ್ರಗಳ ಮೇಲೆ ಬೂಟಿನಿಂದ ಕಿಕ್ ಹಾಕಿ ಗಿರ್‌ಗಿಚ್ಚೆಂದು ಓಡುವ ನಸೀಬಗೇಡಿ ಹುಡುಗ-ಹುಡುಗಿಯರಿಗೆ ದೂರ... ದೂರ... ದೂರವಾಗಿಬಿಟ್ಟಿತು !

ಯಾವ ಕಾಲಕ್ಕೆ ಕಾಲಿಗೆ ಸಾಕ್ಸು ಬಂದವೋ, ಸಾಕ್ಸಿಗೆ ಬೂಟು ಬಂದವೋ... ಆ ಕಾಲದಿಂದಲೇ ನಮ್ಮ ಕಾಲಿನ ಸುಖ, ಭೂಮಿಯ ಸುಖ, ಮಣ್ಣಿನ ಖುಶಿ, ಮುಳ್ಳಿನ ಆನಂದ, ಕಲ್ಲಿನ ಮಜಾ, ಉಸುಕಿನ ಸಜಾ..... ಜೀವನದ ಸಾವಿರ ಸಾವಿರ ಜೀವಂತ ಅನುಭವಗಳು.... ಎಲ್ಲಾ ಎಲ್ಲಾ ಇಲ್ಲವಾಗಿ ಹೋದವು. ಇಂದು ಆಧುನಿಕ ಚಾರಣಪ್ರಿಯರು ಕೂಡ ಅರಣ್ಯದಲ್ಲಿ ಬೂಟುಧಾರಿಗಳಾಗಿ ಹೋಗುವುದನ್ನು ಕಂಡರೆ.... ಇವರೆಲ್ಲಾ ಈ ಪ್ರಕೃತಿಯ ಮಲತಾಯಿಯ ಮಕ್ಕಳೆಂದೇ ಅರ್ಥವಾಗುತ್ತದೆ. ಅವರ ಬಗ್ಗೆ ಅಯ್ಯೋ ಅನಿಸುತ್ತದೆ !

ಆ ಕಾಲದಲ್ಲಿ ಮೆಟ್ರಿಕ್ ಪಾಸಾದರೂ ನಮ್ಮ ಕಾಲಿಗೆ ಚಪ್ಪಲ್ಲು ಬಂದಿರಲಿಲ್ಲ. ನಮ್ಮ ಆ ಬರಿಗಾಲುಗಳು ಎಂತೆಂಥಾ ಬಿಸಿಲು... ಮಣ್ಣು... ಕಲ್ಲು... ರಾಡಿ... ಉಸುಕು... ಚೂಪುಕಲ್ಲು.. ಮುಳ್ಳು.. ಕಂಟಿ.. ತಗ್ಗು.. ಉಬ್ಬು.. ಬಂಡೆ.. ಜಾರಿಕೆ... ಯಾವ ಅನುಭವದಿಂದಲೂ ವಂಚಿತ ಆಗಿರಲಿಲ್ಲ. ಬದುಕು ನಮ್ಮದಾಗಿತ್ತು. ನಮ್ಮೊಂದಿಗೆ ಬದುಕು ಬದುಕಿತ್ತು.

ಕುರಿಕಾಯುವ ಹುಡುಗರು, ಆಡು ಮೇಯಿಸುವ ಅರೆಬತ್ತಲೆ ಹುಡುಗಿಯರು, ದನ ಮೇಯಿಸುವ ಪುಂಡ ಹುಡುಗರು ಎಲ್ಲರೂ ಈ ಕಾಲ್ದಾರಿಗಳ ಸುಖ ಉಂಡು ಬಲ್ಲವರು. ಅವರೆಲ್ಲರ ಆಟ-ನೋಟ-ಬೇಟ ಎಲ್ಲವೂ ಕಾಲುದಾರಿಗಳ ಕೊನೆಯಿಲ್ಲದ ಹುಡಿಮಣ್ಣಿನಲ್ಲಿ !

ದಾರಿಗಳೆಂದರೆ ಒಂದು ಊರಿನಿಂದ ಇನ್ನೊಂದು ಊರಿಗೆ ನೇರವಾಗಿ ಮುಟ್ಟಿಸುವ ಸಾಧನಗಳೆಂದು ಈಗಿನವರ ಅರ್ಥ. ಆದರೆ ಈ ಕಾಲ್ದಾರಿಗಳು ಹಾಗಲ್ಲ. ಈ ಊರು.... ಆ ಊರು.... ಈ ಕೆಲಸ.... ಆ ಕೆಲಸ.... ಸರ್ವಸಂಕಷ್ಟಗಳ ಸರಸ ಈ ಕಾಲ್ದಾರಿಗಳು. ಇಂದಿನ ಸ್ಪೀಡ್‌ಯುಗದ ಅವಸರ - ಓವರ್‌ಟೇಕ್ - ಹಾರ್ನು - ಸಿಗ್ನಲ್ಲು - ಕ್ರ್ಯಾಶು - ಆ್ಯಕ್ಸಿಡೆಂಟು- ಕಾಲ್ಮುರಿ- ಕೈಮುರಿ- ಗೋಣ್ಮುರಿಗಳ ಲೆಕ್ಕವೇ ಈ ಕಾಲ್ದಾರಿಗಳಿಗಿಲ್ಲ. ಇಲ್ಲಿ ಅವಸರದ ಮಾತೇ ಇಲ್ಲ. ಯಾವುದೋ ಊರಿನ ಹೆಣ್ಣು, ಇನ್ನಾವುದೋ ಊರಿನ ಗಂಡು ಈ ದಾರಿಯ ಮೇಲೆ ಹೊರಟವೆಂದರೆ.... ಯಾಕಬೇ.... ಏನಬೇ.... ಯಪ್ಪಾ... ಯಣ್ಣಾ.... ಮಾತಿನಿಂದ ಜೊತೆಗಾರರಾಗುತ್ತಿದ್ದವು. ಅಲ್ಲಿ

ಕಾಮ ಇರಲಿಲ್ಲ...
ಪ್ರಕೃತಿಯ ಪ್ರೇಮ....

ಅರ್ಥಾತ್ ಪ್ರಾಪಂಚಿಕ ಕಷ್ಟನಷ್ಟಗಳ ಸಮರಸ ಇರುತ್ತಿತ್ತು. ಇಬ್ಬರೂ ದಾರಿಯಲ್ಲಿ ಚೂರು ವ್ಯಾಳೆ ಕುಂತು... ಪರಸ್ಪರ ಎಲಿ-ಅಡಿಕೆ-ಸುಣ್ಣ- ಕಾಚು ಹಂಚಿಕೊಂಡು, ತಿಂದು... ಮಾತು ಆರಂಭಿಸಿದರೆಂದರೆ; ಅವರ ಮಾತಿನಲ್ಲಿ ಆ ಊರಿನ - ಈ ಊರಿನ ಎಲ್ಲ ಮನೆತನಗಳ ನೆಂಟಸ್ತನ, ಹುಟ್ಟಿದ್ದು, ಸತ್ತಿದ್ದು, ಜಡ್ಡು, ಜಾಪತ್ರಿ, ಸೊಸಿ ಓಡಿಹೋದದ್ದು, ಅತ್ತೀ ಕಾಟ, ಹೊಸ ಬೀಗರ ಸಾವ್ಕಾರ್ಕಿ, ಹೊಸಾ ಸೊಸಿಗೆ ದೆವ್ವ ಬಡಿದದ್ದು, ಕಿರೇ ಸೊಸಿ ಬಾವಿ ಹಾರಿಕೊಂಡದ್ದು, ಗಚ್ಚಿನಮನಿ ಗಂಗ್ಯಾ ಉರಲ ಹಾಕಿಕೊಂಡದ್ದು, ಹುಂಚೀಮರದ ಸೊಸಿ ಹತ್ತೀ ಹೊಲದಾಗ ಹತ್ತೀ ತೊಳಿ ಬಿಡಿಸುತ್ತಿರುವಾಗಲೇ ಹಡೆದು ಕೂಸು ಸಮೇತ ಮನೀಗೆ ಬಂದದ್ದು, ಕೆಳಗಲ ಸೀಮಿಯವರ ಮಾಟಾ-ಮದ್ದು-ಮರೂಡಿ, ಹೆಂಚಿನಮನಿ ಸಣ್ಣ ಸೊಸೀನ್ನ ಮುದೇ ಗೌಡಾ ಇಟಗೊಂಡಿದ್ದು, ಗೌಡನ ಯಾಡ್ನೇ ಹೇಂತಿ ಈರಬಸ್ವೀ ಸಂದೀಮನಿ ಆಳು ಚೆಂಬ್ಯಾನ ಕೂಟ ಕೂಡಿದ್ದು, ಆಕೀಗೆ ಹುಟ್ಟಿದ ಗಂಡುಕೂಸು ಥೇಟ ಚೆಂಬ್ಯಾನ ಡೊಣಗ ಮೂಗಿನ ಪಡೇಚಾಗಿದ್ದು, ದೊಡಗೌಡಾ- ಸಣಗೌಡಾ ಹೊಲದ ಒಂದು ಮಳಾ ಬದುವಿನ ಸಲುವಾಗಿ ಮಚ್ಚಿ ಮೂರಪಾಲಾಗಿ ಹೊಡದಾಡಿ ಕೈಕಾಲು ಮುರಕೊಂಡ ಪೊಲೀಸ ಕಟ್ಟೀ ಹತ್ತಿದ್ದು, ಲಂಚಕ್ಕಾಗಿ ಆ ಹೊಲಗಳನ್ನೇ ಮಾರಿಕೊಂಡದ್ದು, ಅತ್ತ ಪೂಜೇರಿ ಗದ್ದಾ, ಸ್ವಾಮಿ ಅಡೆಪಾಲ್ಕಿ, ಎತ್ತು ಕಳುವಾದದ್ದು, ಎಮ್ಮಿ ವದಕೊಂಡಿದ್ದು, ದನಕ್ಕ ಬಾಯಿಹುಣ್ಣು ಬಂದು

(೩೯ನೇ ಪುಟಕ್ಕೆ)

# ಸಾರ್ವಜನಿಕ ವಲಯದ ಉದ್ಯಮಗಳ ಮಾರಾಟ : ಯಾರದೋ ದುಡ್ಡು, ಎಲ್ಲಮ್ಮನ ಜಾತ್ರೆ

**ಮಾನ್ಯ ಯಶವಂತ ಸಿನ್ಹಾ ೨೦೦೧-೦೨ರ ಬಜೆಟ್‌ನಲ್ಲಿ ಸಾರ್ವಜನಿಕ ಉದ್ಯಮಗಳ ಮಾರಾಟದಿಂದ ೧೨,೦೦೦ ಕೋಟಿ ರೂಪಾಯಿ ಸಂಗ್ರಹಿಸುವವರಿದ್ದಾರೆ. ಸಿನ್ಹಾರ ಈ ಯೋಜನೆಯ ಬಗ್ಗೆ ''ಸ್ಪಷ್ಟ ಮತ್ತು ನಿಷ್ಠುರ ಸತ್ಯ'' ಏನಾದರೂ ಇದ್ದರೆ, ಅದು - ಚೋಮ್‌ಸ್ಕಿಯ ಮಾತುಗಳಲ್ಲಿ ಹೇಳಬಹುದಾದದ್ದು - ''ಬಡವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣಬಡಿಸುವ ಶ್ರೀಮಂತರಿಗಾಗಿ ಇರುವ ಸಮಾಜವಾದ.''**

''ಫೈನಾನ್ಸ್ ಮಿನಿಸ್ಟರ್'' ಯಶವಂತ ಸಿನ್ಹಾ ಈ ಸಾರಿಯ ಬಡ್ಜೆಟ್‌ನಲ್ಲಿ ಸಾರ್ವಜನಿಕ ವಲಯದ ಉದ್ಯಮಗಳ ಮಾರಾಟದಿಂದ ೧೨,೦೦೦ ಕೋಟಿ ರೂಪಾಯಿ ಸಂಗ್ರಹಿಸುವುದಾಗಿ ತಿಳಿಸಿದ್ದಾರೆ. ಮಾನ್ಯ ಮಂತ್ರಿಗಳು ಹುಂಬರಲ್ಲ ಎಂದು ಇಟ್ಟುಕೊಂಡರೆ, ಈ ಸಂಖ್ಯೆಯನ್ನು ಅವರು ಅಳೆದು-ತೂಗಿಯೇ ನಿರ್ಧರಿಸಿರಬೇಕು. ಅಂದರೆ ಈ ವರ್ಷ ಯಾವ ಉದ್ಯಮಗಳನ್ನು ಎಷ್ಟು ಬೆಲೆಗೆ ಮಾರಬಹುದು ಎಂದು ಹೆಚ್ಚು ಕಮ್ಮಿ ಸರಿಯಾದ ಲೆಕ್ಕಾಚಾರವನ್ನೇ ಅವರು ಹಾಕಿರಬಹುದು. ಇಲ್ಲ ಎಂದಾದರೆ ೧೨,೦೦೦ ಕೋಟಿ ಜಮಾ ಆಗುವವರೆಗೆ ಕಂಡ ಕಂಡ ಉದ್ಯಮಗಳನ್ನು ಮಾರುತ್ತಾ ಹೋಗಬೇಕು. ''೧೨,೦೦೦ ಕೋಟಿ ಜಮಾ ಆಗದಿದ್ದರೆ ನಿಮ್ಮ ಬಡ್ಜೆಟ್ ಏರುಪೇರು ಆಗುತ್ತದಲ್ಲ ?'' ಎಂದು ಮಾಧ್ಯಮದವರು ಪ್ರಶ್ನಿಸಿದ್ದಕ್ಕೆ ಮಂತ್ರಿಗಳು ''ಅಂತಹ ಪರಿಸ್ಥಿತಿಯಲ್ಲಿ ಖಜಾನೆಯನ್ನು ಸರಿದೂಗಿಸುವ ವ್ಯವಸ್ಥೆಯನ್ನು ಯೋಚಿಸಿದ್ದೇವೆ'' ಎಂದು ಹೇಳಿದ್ದಾರೆಯೇ ಹೊರತು ಈ ''ವ್ಯವಸ್ಥೆ'' ಯಾವುದು ಎಂದು ಖಚಿತವಾಗಿ ಹೇಳಿಲ್ಲ. ಸರಿಯಾದ ಉತ್ತರ ಕೊಡದ ಮೇಷ್ಟ್ರನ್ನು ನೋಡಿ ಮಕ್ಕಳು ಕಿಸಕ್ಕನೆ ನಕ್ಕರೆ ಮೇಷ್ಟ್ರು ದಂಡ ಎತ್ತಿಕೊಳ್ಳುವ ಹಾಗೆ, ಮರುದಿನ ಮಂತ್ರಿಗಳು ಒಂದು ಬೆತ್ತದ ಏಟು ಝುಳಪಿಸಿದರು. ಬಡ್ಜೆಟ್ ಕುರಿತು ಎಫ್.ಐ.ಸಿ.ಸಿ.ಐ. ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ''ಆಯವ್ಯಯ ಪತ್ರವನ್ನು ಸಿದ್ಧಪಡಿಸುವ ಸಂದರ್ಭ ನಾವು ಈ ವಿಷಯ ಕುರಿತಂತೆ ಸಮಗ್ರವಾಗಿ ತುಂಬಾ ಎಚ್ಚರಿಕೆಯಿಂದ ಪರಿಶೀಲಿಸಿ ಸಾರ್ವಜನಿಕರಂಗದ ಉದ್ದಿಮೆಗಳ ಖಾಸಗೀಕರಣಕ್ಕೆ ನಿರ್ಧರಿಸಿದ್ದೇವೆ. ಈ ಬಗ್ಗೆ ಯಾರೊಬ್ಬರ ಟೀಕೆಯನ್ನೂ ನಾವು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ'' ಎಂದು ಸ್ಪಷ್ಟಪಡಿಸಿದರು ('ಉದ್ಯಮಗಳ ಖಾಸಗೀಕರಣ ನಿರ್ಧಾರ ಅಚಲ : ಸಿನ್ಹಾ', ಜನವಾಹಿನಿ ಮುಖಪುಟ ವರದಿ, ಮಾರ್ಚ್ ೨, ೨೦೦೧). ''ರಾಜಕೀಯ ಪಕ್ಷಗಳು 'ತಪ್ಪು ಮಾಹಿತಿ ಮತ್ತು ಪೂರ್ವಗ್ರಹ ಪೀಡಿತ ಮಾಹಿತಿ'ಗಳನ್ನು ಪಡೆದಿರುವುದೇ ಈ ರಾಜಕೀಯವಾದ ಟೀಕೆ ಟಿಪ್ಪಣಿಗಳಿಗೆ ಅವಕಾಶ ಮಾಡಿಕೊಟ್ಟಿದೆ'' ಎಂದು ಸಿಡಿಮಿಡಿಗೊಂಡ ಸಿನ್ಹ ''ಸ್ಪಷ್ಟವಾಗಿ ಮತ್ತು ನಿಷ್ಠುರವಾಗಿ ಮಾತನಾಡುವ ಮತ್ತು ಸ್ಥಾಪಿತ ಹಿತಾಸಕ್ತಿಗಳ ಸವಾಲುಗಳನ್ನು ದಿಟ್ಟವಾಗಿ ಎದುರಿಸುವ ಕಾಲ ಸನ್ನಿಹಿತವಾಗಿದೆ'' ಎಂಬ ರಣವೀಳ್ಯವನ್ನು ಎಫ್.ಐ.ಸಿ.ಸಿ.ಐ. ವೇದಿಕೆಯಲ್ಲಿ ನೀಡಿದರು ! (ಸಿನ್ಹಾ ತಮ್ಮ ಬಡ್ಜೆಟ್‌ನ್ನು ದೇಶದ ಜನತೆಯನ್ನು ಉದ್ದೇಶಿಸಿ ಮಂಡಿಸಿದ್ದಲ್ಲ, ಎಫ್.ಐ.ಸಿ.ಸಿ.ಐ.ಯ ಮಂದಿಗೆ ಮಂಡಿಸಿದ್ದು ಎಂದು ಮೋಹನ್ ಗುರುಸ್ವಾಮಿ ಮಾಡಿರುವ ಟೀಕೆಯನ್ನು ಮಾನ್ಯ ಮಂತ್ರಿಗಳು ಸುಳ್ಳಾಗಿಸಲಿಲ್ಲ !) ''ಫೈನಾನ್ಸ್ ಮಿನಿಸ್ಟರ್'' ತಮ್ಮ ಬಡ್ಜೆಟನ್ನು ಸಂಸತ್ತಿನ ಮುಂದೆ ಇಟ್ಟಿದ್ದಾರೆ. ಅಲ್ಲಿ ಅದು ಚರ್ಚೆಯಾಗಿ ನಂತರ ಅಂಗೀಕೃತವಾಗಬೇಕು. ಇದಕ್ಕೆ ಮುಂಚೆಯೇ ಸಿನ್ಹ ತಮ್ಮ ಸಹ ಸಂಸತ್ ಸದಸ್ಯರನ್ನು 'ತಪ್ಪು ಮಾಹಿತಿ ಮತ್ತು ಪೂರ್ವಗ್ರಹ ಪೀಡಿತ ಮಾಹಿತಿ' ಹೊಂದಿರುವ ಪೆದ್ದರು, 'ಸ್ಥಾಪಿತ ಹಿತಾಸಕ್ತಿ'ಯುಳ್ಳವರು ಎಂದು ಭಾವಿಸಿರುವುದು ಮಾತ್ರವಲ್ಲ, ಚರ್ಚೆಗೆ ಮುನ್ನವೇ ''ತಾವು ಯಾರ ಟೀಕೆಯನ್ನೂ ಗಮನಕ್ಕೆ ತಂದುಕೊಳ್ಳುವುದಿಲ್ಲ'' ಎನ್ನುವ ಗೈರತ್ತು ತೋರಿಸಿರುವುದು ಸಂವಿಧಾನಿಕ ನೈತಿಕತೆಯಲ್ಲ ಎಂದು ಯಾರಿಗಾದರೂ ಅನ್ನಿಸಬೇಕಿತ್ತು; ಒಬ್ಬ ಸಂಸತ್ ಸದಸ್ಯನಾದರೂ ಈ ವಿಷಯಕ್ಕೆ ಆಕ್ಷೇಪ ಎತ್ತಿದ್ದನ್ನು ನಾನು ಪತ್ರಿಕೆಗಳಲ್ಲಿ ನೋಡಿಲ್ಲ. 'ಆರ್ಥಿಕ ನೀತಿಯ ವಿಷಯದಲ್ಲಿ ಪಕ್ಷ ರಾಜಕಾರಣವನ್ನು ಮೀರಿದ ಸಹಮತ ಬೆಳೆಯುತ್ತಿದೆ' ಎಂದು ಸರ್ಕಾರ ಹಾಗೂ ದೊಡ್ಡ ಮಾಧ್ಯಮಗಳು ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವುದು ಇದೇ ಏನೋ ! ಅದು ಹಾಗಿರಲಿ. ಮಾನ್ಯ ಮಂತ್ರಿಗಳು ಹೇಳಿರುವ ''ಸ್ಪಷ್ಟ ಮತ್ತು ನಿಷ್ಠುರ'' ಮಾತುಗಳಿಗೆ ಬರೋಣ. ಸಿನ್ಹ ತಮ್ಮ ಬಡ್ಜೆಟ್‌ನಲ್ಲಿ ಕಾರ್ಮಿಕರ ಸಂಘಟನೆಯ ಹಕ್ಕನ್ನು ಕಿತ್ತುಕೊಳ್ಳುವ ವಿಷಯದಲ್ಲಿ - ಇದು ಬಡ್ಜೆಟ್‌ಗೆ ಸಂಬಂಧಿಸಿದ ವಿಷಯವಲ್ಲ, ಕಾರ್ಮಿಕ ನೀತಿಯಲ್ಲಿ ಬದಲಾವಣೆ ತರಲಿಕ್ಕೆ ಒಂದು ಬಿಲ್ ಮಂಡಿಸಿ, ಎರಡೂ ಸದನಗಳಲ್ಲಿ ಬಿಲ್ ಬಹುಮತದಿಂದ ಅಂಗೀಕೃತವಾಗಬೇಕು.



ಕೆ. ಫಣಿರಾಜ್

ಎಡಪಕ್ಷಗಳನ್ನು ಹೊರತುಪಡಿಸಿ, ಮಿಕ್ಕ ಎಲ್ಲರಲ್ಲಿಯೂ ಈ ವಿಷಯದ ಬಗ್ಗೆ 'ಸಹಮತ' ಇದ್ದರೂ ಇರಬಹುದು – ಮಾತ್ರ ''ಸ್ಪಷ್ಟವಾಗಿ ಮತ್ತು ನಿಷ್ಠುರವಾಗಿ'' ಮಾತನಾಡಿದ್ದಾರೆ. ಆದರೆ ಸಾರ್ವಜನಿಕ ವಲಯದ ಉದ್ಯಮಗಳ ಖಾಸಗೀಕರಣದ ಬಗ್ಗೆ ಯಾವ ''ಸ್ಪಷ್ಟವಾದ ಮತ್ತು ನಿಷ್ಠುರವಾದ '' ಮಾತುಗಳನ್ನು ಆಡಿದ್ದಾರೆ ? 'ರಾಜಕೀಯದಿಂದ ಪ್ರೇರಿತವಾಗದ', 'ಪೂರ್ವಾಗ್ರಹವಿಲ್ಲದ', 'ಸರಿಯಾದ' ಯಾವ 'ಮಾಹಿತಿ'ಯನ್ನು ನೀಡಿದ್ದಾರೆ ? ಎಫ್.ಐ.ಸಿ.ಸಿ.ಐ.ನ ಆಪ್ತೇಷ್ಟರ ಮುಂದೆ, ತಮ್ಮ ನೀತಿಯನ್ನು ವಿರೋಧಿಸುವವರಿಗೆ 'ನಾವೆಲ್ಲ ವಿಚಾರ ಮಾಡಿ, ಗುಣಿಸಿ-ಭಾಗಿಸಿ, ನಿರ್ಧಾರ ತೆಗೆದುಕೊಂಡಿದ್ದೇವೆ. ನಿಮ್ಮದೇನು ತಲಹರಟೆ ? ತೆಪ್ಪಗಿರಿ' ಎನ್ನುವ ಧಮಕಿ ಮಾತ್ರ ''ಸ್ಪಷ್ಟವಾಗಿ ಮತ್ತು ನಿಷ್ಠುರವಾಗಿ'' ಇದೆ. ಎಲ್ಲಾ ಸಾರ್ವಜನಿಕ ಉದ್ಯಮಗಳನ್ನೂ ಹಂತಹಂತವಾಗಿ ಖಾಸಗೀಕರಣಗೊಳಿಸಬೇಕು ಎನ್ನುವುದು ಸರ್ಕಾರದ ನೀತಿಯಾಗಿದೆ; ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿಯೇ ಒಬ್ಬ ಕ್ಯಾಬಿನೆಟ್ ದರ್ಜೆಯ ಮಂತ್ರಿಗಳು ಇದ್ದಾರೆ. ಖಾಸಗಿವಲಯದ ಉದ್ಯಮಗಳನ್ನು ರಾಷ್ಟ್ರೀಕರಣಗೊಳಿಸುವುದು ಹೇಗೋ ಹಾಗೆಯೇ ಸಾರ್ವಜನಿಕ ರಂಗದ ಉದ್ಯಮಗಳನ್ನು ಖಾಸಗೀಕರಣಗೊಳಿಸುವುದೂ ರಾಜಕೀಯ ನಿರ್ಧಾರವೇ ಆಗಿದೆ. ಒಂದು ವೇಳೆ, ಖಾಸಗೀಕರಣದಿಂದ ದೇಶದಲ್ಲಿ ಸ್ವರ್ಗಸದೃಶ ವಾತಾವರಣ ಉಂಟಾಯಿತು ಎಂದೇ ಇಟ್ಟುಕೊಳ್ಳೋಣ; ಆಗ ಆಳುವ ಪಕ್ಷದವರು 'ಇದು ರಾಜಕೀಯವನ್ನು ಬದಿಗಿಟ್ಟು, (ಎಡಪಕ್ಷಗಳನ್ನು ಬಿಟ್ಟು) ಎಲ್ಲಾ ಪಕ್ಷಗಳ ಸಹಮತದಿಂದ ಜಾರಿಗೆ ತಂದ ನೀತಿಗಳ ಪರಿಣಾಮವಾಗಿದೆ. ಫಲ ಎಲ್ಲ ಪಕ್ಷಗಳಿಗೂ ಸಮನಾಗಿ ಸಿಗಬೇಕು. ಕಮ್ಯುನಿಸ್ಟರನ್ನು ಬಿಟ್ಟು, ಉಳಿದವರಿಗೆಲ್ಲಾ ಸಮಸಮ ವೋಟು ಕೊಡಿ' ಎಂದು ಜನರಿಗೆ ಮನವಿ ಮಾಡಿಕೊಳ್ಳುತ್ತಾರೋ ? 'ರಾಜಕೀಯದಿಂದ ಪ್ರೇರಿತರಾಗದ ಸೂಕ್ಷ್ಮ ಅರ್ಥಮತಿ' ಸಿನ್ಹಾ ಪೆದ್ದರಲ್ಲ; ಈ ಬಡ್ಜೆಟ್‌ನಿಂದ ಎನ್.ಡಿ.ಎ.ಗೆ ಸಖತ್ ಲಾಭವಿದೆ ಎಂದು ಆಗಲೇ ಶಕುನ ನುಡಿದಿದ್ದಾರೆ; ಶುಭಮಸ್ತು. ಹಾಗಿರುವಾಗ ಸಿನ್ಹಾ ತಮ್ಮ ಬಡ್ಜೆಟ್‌ನಲ್ಲಿ ಕೆಲವು ಪ್ರಶ್ನೆಗಳಿಗೆ 'ಸ್ಪಷ್ಟವಾದ ಮತ್ತು ನಿಷ್ಠುರವಾದ' ಉತ್ತರ ಕೊಡಬೇಕಿತ್ತು :

೧. ಯಾವ ಉದ್ಯಮಗಳನ್ನು ಖಾಸಗೀಕರಣಕ್ಕೆ ಗುರುತಿಸಲಾಗಿದೆ ?
೨. ಆ ಉದ್ಯಮಗಳ ಲಾಭ-ನಷ್ಟಗಳನ್ನು ಯಾವ ರೀತಿ ಅಂದಾಜು ಮಾಡಲಾಗಿದೆ ? ಅಂದಾಜು ಮಾಡಿದವರು ಯಾರು ? ಅಂದಾಜು ಮಾಡಲಿಕ್ಕೆ ಯಾವ ಮಾನದಂಡಗಳನ್ನು ಆಯ್ದುಕೊಳ್ಳಲಾಯಿತು ? ಆಯ್ದುಕೊಳ್ಳದೆ ಬಿಟ್ಟ ಉಳಿದ ಮಾನದಂಡಗಳು ಯಾವುವು ? ಯಾವ ಕಾರಣಕ್ಕಾಗಿ ಅವುಗಳನ್ನು ಪರಿಗಣಿಸಲಾಗಿಲ್ಲ ?
೩. ಗುರುತಿಸಲಾಗಿರುವ ಉದ್ಯಮಗಳ ಮೌಲ್ಯಮಾಪನಕ್ಕೆ ಲಭ್ಯವಿರುವ ಮಾನದಂಡಗಳು ಯಾವುವು ? ಸರ್ಕಾರ ಈ ಮಾನದಂಡಗಳಲ್ಲಿ ಯಾವುದನ್ನು ಆಯ್ದುಕೊಂಡಿದೆ ? ಅದಕ್ಕೆ ಸಮರ್ಥನೆ ಏನು ?
೪. ನಿಗದಿಪಡಿಸಿರುವ ಮೌಲ್ಯಗಳನ್ನು ವೃದ್ಧಿಸುವ ಮಾರ್ಗಗಳು ಇವೆಯೋ ? ಈ ಪ್ರಕ್ರಿಯೆಯಿಂದ ಬರುವ ಲಾಭ ಎಷ್ಟು ? ಇದು ಸಾರ್ಥಕವೋ ? ಹೌದಾದರೆ, ಯೋಜನಾಪಟ್ಟಿ ತಯಾರು ಇದೆಯೋ ?
೫. ಒಂದು ವೇಳೆ ನಿಗದಿಪಡಿಸಿರುವ ಮೌಲ್ಯಕ್ಕೆ ಉದ್ದಿಮೆಗಳನ್ನು ಕೊಳ್ಳಲು ಗಿರಾಕಿಗಳು ತಯಾರಾಗದಿದ್ದರೆ ಏನು ಮಾಡುತ್ತೀರಿ ? ಅಂತಹ ಸಂದರ್ಭಕ್ಕೆ ತಯಾರು ಮಾಡಿಕೊಂಡಿರುವ ಕಾರ್ಯತಂತ್ರಗಳು ಯಾವುವು ? ಅವು ಸಮರ್ಥನೀಯವೇ ?
೬. ಲಾಭದಾಯಕ ವ್ಯಾಪಾರವಾದರೆ, ಮಾರಾಟದಿಂದ ಜಮಾ ಆಗುವ ಹಣವನ್ನು ಯಾವ ರೀತಿ ಬಂಡವಾಳವಾಗಿಸುತ್ತೀರಿ ? ಲಾಭದಾಯಕವಾಗಿ ತೊಡಗಿಸಬಹುದಾದ ಕ್ಷೇತ್ರಗಳನ್ನು ಗುರುತಿಸಿ, ತಕ್ಕುದಾದ ಯೋಜನೆಗಳನ್ನು ರೂಪಿಸುವ ತಂಡ ತಯಾರಾಗಿದೆಯೋ ? ಈ ಕ್ಷೇತ್ರದಲ್ಲಿ ಬಂಡವಾಳ ತೊಡಗಿಸುವುದರಿಂದ ಯಾವ ದರದಲ್ಲಿ ಬಂಡವಾಳ ವೃದ್ಧಿಸುತ್ತದೆ ? ಈ ಅಭಿವೃದ್ಧಿಯ ದೀರ್ಘ ಮತ್ತು ಅಲ್ಪಕಾಲಿಕ ಯೋಜನೆ ಮತ್ತು ಲಾಭ ವಿತರಣಾ ನಕ್ಷೆ ತಯಾರಿ ನಡೆದಿದೆಯೋ ?

ಇವು ಖಂಡಿತ ಸಮಾಜವಾದಿಗಳು ಕೇಳುವ ಪ್ರಶ್ನೆಗಳಲ್ಲ; ತನ್ನ ಸ್ವಂತದ ಲಾಭದ ಬಗ್ಗೆ ಎಚ್ಚರದಿಂದ ಇರುವ ಬಂಡವಾಳಶಾಹಿ ಕೇಳುವ ಪ್ರಶ್ನೆಗಳು. ಪೀಟರ್ ಡ್ರಕರ್‌ನ ಜನಪ್ರಿಯ ಮ್ಯಾನೇಜ್‌ಮೆಂಟ್ ಪುಸ್ತಕಗಳಿಂದ ಹಿಡಿದು, ಹೇಗಾದರೂ ಪಾಸಾದರೆ ಸಾಕಪ್ಪ ಎನ್ನುವ ಮ್ಯಾನೇಜ್‌ಮೆಂಟ್ ವಿದ್ಯಾರ್ಥಿಯ ಪ್ರಾಜೆಕ್ಟ್ ಪೇಪರ್‌ನಲ್ಲಿ ಕಾಣಸಿಗುವ ಪ್ರಶ್ನೆಗಳು. ಸಿನ್ಹ ತಮ್ಮ ವಿರೋಧಿಗಳಿಗೆ ಧಮಕಿ ಹಾಕಿದಾಗ ಖುಷಿಯಿಂದ ಚಪ್ಪಾಳೆ ತಟ್ಟಿದ ಎಫ್.ಐ.ಸಿ.ಸಿ.ಐ.ನ ಮಂದಿ ಅರ್ಧ ಪೈಸೆ ಖರ್ಚು ಮಾಡಬೇಕು ಎಂದರೂ ಅಗತ್ಯವಾಗಿ ಕೇಳಿಕೊಳ್ಳುವ ಪ್ರಶ್ನೆಗಳು. ಈ ಪ್ರಶ್ನೆಗಳ ಮಹತ್ವವನ್ನು ಬೋಧಿಸಲಿಕ್ಕಾಗಿಯೇ ದಿನಕ್ಕೊಬ್ಬ 'ಮ್ಯಾನೇಜ್‌ಮೆಂಟ್ ಗುರು'ವನ್ನು ಭಾರತಕ್ಕೆ ಸಾವಿರಾರು ಡಾಲರ್ ಖರ್ಚು ಮಾಡಿ ಕರೆಸಲಾಗುತ್ತದೆ. ಸಿನ್ಹ ಸಮಾಜವಾದಿಯ ಹಾಗೆ ಮಾತನಾಡಬೇಕು ಎಂದು ಎಣಿಸುವವನು ಇವತ್ತು ಮಹಾ ಪಾಪಿಯೇ ಸರಿ ! ಆದರೆ ಮಾನ್ಯ ಮಂತ್ರಿಗಳು ಕಟ್ಟಾ ಬಂಡವಾಳವಾದಿಯಾಗಿ ಈ ಪ್ರಶ್ನೆಗಳಿಗೆ ''ಸ್ಪಷ್ಟವಾದ ಮತ್ತು ನಿಷ್ಠುರವಾದ'' ಉತ್ತರಗಳನ್ನು ಸಂಸತ್ತಿನಲ್ಲಿ ಕೊಡಬೇಕಾಗಿತ್ತಲ್ಲ ? – ಖಂಡಿತ ಎಫ್.ಐ.ಸಿ.ಸಿ.ಐ. ಮುಂದೆ ಅಲ್ಲ; ಯಾಕೆಂದರೆ ಪ್ರತಿಯೊಬ್ಬ ಬಂಡವಾಳಶಾಹಿಯೂ ತನ್ನ ಯೋಜನೆಗಳನ್ನು ಸಮರ್ಥಿಸಿಕೊಳ್ಳುವುದು ತನ್ನ ಉದ್ಯಮಕ್ಕೆ ಸಂಬಂಧಿಸಿದ 'ಬೋರ್ಡ್ ಆಫ್ ಡೈರಕ್ಟರ್ಸ್' ಮತ್ತು 'ಜನರಲ್ ಬಾಡಿ ಮೀಟಿಂಗ್'ಗಳಲ್ಲಿ ! ಹಾಗೆಯೇ, ಉದ್ಯಮ ಒಂದರ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ತನ್ನ 'ಬೋರ್ಡ್ ಆಫ್ ಡೈರಕ್ಟರ್ಸ್'ನ್ನು 'ತಪ್ಪು ಮಾಹಿತಿಯುಳ್ಳ, ಪೂರ್ವಗ್ರಹಪೀಡಿತರು' ಎಂದು ಹಂಗಿಸಿ, 'ನಿಮ್ಮ ಟೀಕೆಯನ್ನು ನಾನು ಗಮನಿಸುವುದಿಲ್ಲ' ಎಂದು ಹೇಳುತ್ತಾನೆಯೋ ? ಸಮಸ್ಯೆ ಇರುವುದು ಇಲ್ಲಿಯೇ. ಈ ಪ್ರಶ್ನೆಗಳೆಲ್ಲಾ ಬಂಡವಾಳವಾದದ ಮೂಲ ಪುರುಷ ಆಡಂ ಸ್ಮಿತ್ ಕನಸು ಕಂಡಿದ್ದ ಆದರ್ಶ ಸಮಾಜದಲ್ಲಿ ಕೇಳಬೇಕಾದ ಪ್ರಶ್ನೆಗಳು. ಈ ಪ್ರಶ್ನೆಗಳಿಗೆ ''ಸ್ಪಷ್ಟ ಮತ್ತು ನಿಷ್ಠುರ'' ಉತ್ತರಗಳನ್ನು ಕೊಟ್ಟರೆ ಮಾನ್ಯ ಮಂತ್ರಿಗಳ ಬಂಡವಾಳವಾದ ಆಡಂ ಸ್ಮಿತ್‌ನ ಕನಸಲ್ಲ, ಅಮೆರಿಕಾದ ''ನ್ಯೂ ಡೀಲ್ ಬಂಡವಾಳವಾದ'' ಎನ್ನುವುದು ಬಯಲಾಗುತ್ತದೆ. ಏನು ಈ ನ್ಯೂ ಡೀಲ್ ಬಂಡವಾಳವಾದ ? ನೋಮ್ ಚೋಮ್‌ಸ್ಕಿ ಇದನ್ನು ಅತ್ಯಂತ ಸರಳವಾಗಿ, ಅಷ್ಟೇ ನೇರವಾಗಿ ಹೀಗೆ ವಿವರಿಸಿದ್ದಾರೆ : ''ಹಸಿದವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣಿಸುವ, ಶ್ರೀಮಂತರಿಗಾಗಿ ಇರುವ ಸಮಾಜವಾದ.''

ಸಾರ್ವಜನಿಕ ವಲಯದ ಉದ್ಯಮಗಳನ್ನು ಮಾರಾಟ ಮಾಡುತ್ತಿರುವ ವೈಖರಿಯನ್ನು ನೋಡಿ. ಯಾವುದೇ ವಸ್ತುವನ್ನು ಮಾರಾಟ ಮಾಡುವುದಿದ್ದರೂ ಆ ವಸ್ತುವಿನ ಬಗ್ಗೆ ಗ್ರಾಹಕನಲ್ಲಿ ಸದಭಿಪ್ರಾಯ ಮೂಡಿಸಬೇಕು ಎನ್ನುವುದು ಫುಟ್‌ಪಾತ್ ಮಾರಾಟಗಾರರು ಕೂಡ ಪಾಲಿಸುವ ಪ್ರಾಥಮಿಕ ನಿಯಮ. ದೊಡ್ಡ ಉದ್ಯಮಗಳಿಗಂತೂ 'ಜಾಹಿರಾತು ತಂತ್ರ' ಮಾರುಕಟ್ಟೆ ಸಂಶೋಧನೆಯ ಅವಿಭಾಜ್ಯ ಅಂಗ. ನನ್ನಲ್ಲಿರುವ ವಸ್ತು ಕೆಟ್ಟು ಕೆರ ಹಿಡಿದು ಹೋಗಿದೆ; ತಿಪ್ಪೆಗೆ ಎಸೆಯಲಿಕ್ಕೆ ಲಾಯಖಾಗಿದೆ; ಯಾರಾದರೂ ಕೊಂಡುಕೊಳ್ಳುತ್ತೀರಾ, ಎಂದು ಯಾವ ವ್ಯಾಪಾರಿ ಹೇಳುತ್ತಾನೆ ? ಶ್ರೀಮಂತರ ಪರವಾಗಿರುವ ಮಾಧ್ಯಮಗಳನ್ನು ಬಿಡಿ, ಸ್ವತಃ ಸರ್ಕಾರವೇ ಸಾರ್ವಜನಿಕ ಉದ್ಯಮಗಳು ಹೊತ್ತುಕೊಂಡವನ ಮೈಯನ್ನೇ ತಿನ್ನುತ್ತಿರುವ ಅಪಾಯಕಾರಿ ಜೀವಿಗಳು ಎಂದು ಪ್ರಚಾರ ಮಾಡಿದರೆ ಆ ಉದ್ಯಮಗಳಿಗೆ ದೊರಕುವ ಬೆಲೆಯಾದರೂ ಏನು ?

ಮೌಲ್ಯಮಾಪನಾ ಶಾಸ್ತ್ರದಲ್ಲಿ ವಸ್ತು ಒಂದು ಚಿಂದಿಯಾಗಿಹೋದರೂ ಅದಕ್ಕೆ 'ಚಿಂದಿಬೆಲೆ' (ಸ್ಕ್ರ್ಯಾಪ್ ವ್ಯಾಲ್ಯೂ) ಇದೆ. ಮೌಲ್ಯಮಾಪನಾ ಶಾಸ್ತ್ರದಲ್ಲಿ ವಸ್ತುಗಳ ಮೌಲ್ಯಮಾಪನಕ್ಕೆ ಹಲವಾರು ವಿಧಾನಗಳಿವೆ. ಒಂದು ವಸ್ತುವನ್ನು ಸಾಧ್ಯವಿರುವ ಎಲ್ಲಾ ವಿಧಾನಗಳಿಂದಲೂ

### ಲೇಖಕರ ಗಮನಕ್ಕೆ

ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.

*- ಸಂಪಾದಕ, 'ಹೊಸತು'*

ಮೌಲ್ಯಮಾಪನ ಮಾಡಿ, ಅತ್ಯಂತ ಲಾಭ ತರುವ ವಿಧಾನಕ್ಕೆ ಪಟ್ಟು ಹಿಡಿಯಬೇಕು ಎನ್ನುವುದು ಸಾಮಾನ್ಯ ಕಾರ್ಯತಂತ್ರ. ಉದಾಹರಣೆಗೆ, ಈಗಲೋ ಆಗಲೋ ಬಿದ್ದುಹೋಗುತ್ತಿರುವ ಒಂದು ಮನೆ ಇದೆ ಎಂದು ಇಟ್ಟುಕೊಳ್ಳಿ. ಆ ಕಟ್ಟಡದ ಸ್ಥಿತಿ ಕಣ್ಣಿಗೆ ಕಾಣುವ ಹಾಗೆ ಇರುವಂತಹುದು; ಬೆಲೆ ಏನಿದ್ದರೂ ಆ ಕಟ್ಟಡ ನಿಂತಿರುವ ಜಾಗಕ್ಕೆ ಮಾತ್ರ. ಇಷ್ಟಿದ್ದರೂ, ಮನೆಯ ಒಡೆಯ ''ಇದು ನಮ್ಮ ವಂಶದ ಘನತೆಯ ಸಂಕೇತ. ಇದರ ಜೊತೆ ನಮಗಿರುವ ಕರುಳ ನಂಟನ್ನು ಅಳೆಯಲಿಕ್ಕೆ ಸಾಧ್ಯವಿಲ್ಲ'' ಎಂದು ಪಟ್ಟು ಹಿಡಿದರೆ ಆ ಕಟ್ಟಡಕ್ಕೆ ಒಂದು 'ಭಾವನಾತ್ಮಕ ಮೌಲ್ಯ' (ಸೆಂಟಿಮೆಂಟಲ್ ವ್ಯಾಲ್ಯೂ)ದಕ್ಕಿಬಿಡುತ್ತದೆ. ಅದೇ ಮನೆಯ ಮಾಲಿಕ ''ನನ್ನ ಮಗಳ ಮದುವೆ ದಿನ ನಿಶ್ಚಯವಾಗಿದೆ. ಅಗತ್ಯ ಹಣ ಬೇಕಾಗಿದೆ. ಮನೆ ಮಾರಾಟವಾಗದಿದ್ದರೆ ಮದುವೆ ನಡೆಯುವಹಾಗಿಲ್ಲ'' ಎಂದು ಕಷ್ಟ ತೋಡಿಕೊಂಡರೆ ಮನೆಗೆ ದಕ್ಕಬಹುದಾದ ಬೆಲೆಯೂ ದಕ್ಕುವುದಿಲ್ಲ. ಕೊಳ್ಳುವವ ಮಾರುವವನ ದಯಾನೀಯ ಸ್ಥಿತಿಯ ಲಾಭ ಪಡೆಯಲು ನೋಡಿದರೆ ಆ ಮನೆಯ ಮೌಲ್ಯ 'ದಯನೀಯ ಮೌಲ್ಯ' (ಡಿಸ್ಟ್ರೆಸ್ ವ್ಯಾಲ್ಯು)ಕ್ಕೆ ಇಳಿಯುತ್ತದೆ. ದೊಡ್ಡ ನಗರಗಳಲ್ಲಿ ಬೆಲೆಯುಳ್ಳ ನಿವೇಶನಗಳನ್ನು ಅಗ್ಗದ ಬೆಲೆಯಲ್ಲಿ ಕೊಳ್ಳಲಿಕ್ಕಾಗಿ ಗೂಂಡಾಗಳ ಪಡೆ ಬಿಟ್ಟು ಭಯದ ವಾತಾವರಣ ನಿರ್ಮಿಸಿ, ಜಾಗಕ್ಕೆ 'ದಯನೀಯ ಮೌಲ್ಯ' ಬರುವ ಹಾಗೆ ಮಾಡುವುದು ಲ್ಯಾಂಡ್ ಮಾಫಿಯಗಳ ಬಹಿರಂಗ ತಂತ್ರ. ನಮ್ಮ ಗೌರವಾನ್ವಿತ ಮಾಧ್ಯಮಗಳು ಹಾಗೂ ಸರ್ಕಾರ ಸಾರ್ವಜನಿಕ ರಂಗದ ಉದ್ಯಮಗಳ ವಿಷಯದಲ್ಲಿ ಅನುಸರಿಸುತ್ತಿರುವ ತಂತ್ರ ಇದಕ್ಕಿಂತ ಭಿನ್ನವಾಗಿದೆಯೋ ? ಸಿನ್ಹರ ಬಡ್ಜೆಟನ್ನು ಗಮನಿಸಿ. ಸಾರ್ವಜನಿಕ ಉದ್ಯಮಗಳ ಮಾರಾಟದಿಂದ ಬರುವ ೧೨,೦೦೦ ಕೋಟಿ ರೂಪಾಯಿಗಳನ್ನು ಪ್ರತ್ಯೇಕವಾಗಿ ಇಟ್ಟು, ಲಾಭದಾಯಕ ಕ್ಷೇತ್ರದಲ್ಲಿ ಅಭಿವೃದ್ಧಿಯಾಗುವ ಬಂಡವಾಳವಾಗಿ ತೊಡಗಿಸುವ ಯಾವ ಪ್ರಸ್ತಾಪವೂ ಇಲ್ಲ. ಆ ಹಣ ಖಜಾನೆಯ ಖೋತವನ್ನು ತಗ್ಗಿಸುವ ಸಲುವಾಗಿ ನೇರವಾಗಿ ಖರ್ಚಾಗಿಹೋಗುತ್ತದೆ; ಅದು ಬಂಡವಾಳ ರೂಪದಲ್ಲಿ ಮತ್ತೆಂದೂ ವಾಪಾಸು ಬರುವುದಿಲ್ಲ. ದಶಕಗಳಿಂದ ಸಾರ್ವಜನಿಕ ಕ್ಷೇತ್ರದ ಉದ್ಯಮಗಳಿಂದ ಬಂದ ಲಾಭವನ್ನು ಸರ್ಕಾರಗಳು ಹೀಗೆಯೇ ಖರ್ಚು ಮಾಡುತ್ತಿವೆ. ಉದಾಹರಣೆಗೆ, ಕೆ.ಜಿ.ಎಫ್.ನ್ನು ರಾಷ್ಟ್ರೀಕರಣಗೊಳಿಸಿದ ನಂತರ ಆ ಉದ್ಯಮ ಸರ್ಕಾರಕ್ಕೆ ಎಷ್ಟು ಲಾಭ ತಂದುಕೊಟ್ಟಿದೆ ? ಆ ಲಾಭದ ಎಷ್ಟು ಪಾಲನ್ನು ಸರ್ಕಾರ ಆ ಉದ್ಯಮದ ಅಭಿವೃದ್ಧಿಗೆ ಬಳಸಿದೆ ? ಎಷ್ಟನ್ನು ಸರ್ಕಾರ ಬೇರೆ ಖರ್ಚಿಗೆ ಉಪಯೋಗಿಸಿ ಕೊಂಡಿದೆ ? ಬೇರೆ ಖರ್ಚಿಗೆ ಉಪಯೋಗಿಸಿದ ಹಣವನ್ನು ಉದ್ಯಮದಿಂದ ದೊರೆತ ಸಾಲ ಎಂದು ಪರಿಗಣಿಸಿ, ಪ್ರತ್ಯೇಕ ಲೆಕ್ಕಾಚಾರ ಇಟ್ಟು ಬಡ್ಡಿ ಸಹಿತ ಉದ್ಯಮಕ್ಕೆ ವಾಪಾಸು ಮಾಡಿದೆಯೋ ? ಇಲ್ಲ ಎಂದಾದರೆ, ಆ ಉದ್ಯಮದಿಂದ ಬಂದ ಲಾಭವನ್ನು ಯಾವ ವಲಯದಲ್ಲಿ ವಿನಿಯೋಗಿಸಲಾಗಿದೆ ? ಆ ವಿನಿಯೋಗದಿಂದ ಯಾವ ವಲಯ ಅಭಿವೃದ್ಧಿ ಹೊಂದಿದೆ ಮತ್ತು ಆ ಅಭಿವೃದ್ಧಿಯ ಮೌಲ್ಯವೆಷ್ಟು? ಈ ಯಾವ ಲೆಕ್ಕಾಚಾರವನ್ನೂ ತೋರಿಸದೆ, ಬರಿದಾದ ಗಣಿಗಳ ಕಡೆ ತೋರಿಸಿ, ಕೆ.ಜಿ.ಎಫ್.ನ ಮೌಲ್ಯ ಕುಸಿದಿದೆ; ಅದು ಸರ್ಕಾರಕ್ಕೆ ಹೊರೆಯಾಗಿದೆ ಎಂದು ದುಗ್ಗಾಣಿ ಮೌಲ್ಯ ತೋರಿಸಿ ಕೈ ತೊಳೆದುಕೊಳ್ಳಬಹುದೋ ? ಸರ್ಕಾರ ಸಾರ್ವಜನಿಕ ವಲಯಗಳ ವಿಕ್ರಯದಲ್ಲಿ ಈ ರೀತಿಯ 'ದಯನೀಯ ಸ್ಥಿತಿ'ಯ ಚಿತ್ರಣವನ್ನು ಕಟ್ಟಿ, ಆ ಉದ್ಯಮಗಳಿಗೆ ದುಗ್ಗಾಣಿಗಿಂತ ಜಾಸ್ತಿ ಮೌಲ್ಯ ಹೇಗಿರಲು ಸಾಧ್ಯ, ಎಂದು ವಾದಿಸುತ್ತಿದೆ. ಮಾಲಿಕನೇ ತನ್ನ ವಸ್ತುವನ್ನು ಹೀಗಳೆದು, ಅದಕ್ಕೆ ಕವಡೆ ಮೌಲ್ಯ ಇದೆ ಎಂದು ಘೋಷಿಸಿ, ಸಿಕ್ಕ ಕವಡೆಯನ್ನು ಖರ್ಚಿನ ಬಾಬ್ತಿಗೆ ಸೇರಿಸಿ ಕೈ ತೊಳೆದುಕೊಳ್ಳುವುದು ಬಂಡವಾಳಶಾಹಿ ಮೌಲ್ಯ ಕೂಡ ಅಲ್ಲ, ಅದು ಪಕ್ಕಾ 'ದಿವಾಳಿಕೋರರ ನೀತಿ.' ೧೨,೦೦೦ ಕೋಟಿ ಸರ್ಕಾರದ ಖಜಾನೆ ಕಡಿಮೆ ಮಾಡಿ ತೋರಿಸಲಿಕ್ಕೆ ಮಾತ್ರ ಉಪಯುಕ್ತ. ಖಜಾನೆ ಖೋತವನ್ನು ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ. ೫ರ ಕೆಳಗೆ ಇಳಿಸಿ ತೋರಿಸು ಎಂದು ಸಲಹೆ ಕೊಡುವುದು ಐ.ಎಂ.ಎಫ್. ಮತ್ತು ವರ್ಲ್ಡ್ ಬ್ಯಾಂಕ್‌ಗಳು; ಅವರು ಈಗ ಒಂದು ಸರ್ಟಿಫಿಕೇಟು ಕೊಟ್ಟರೆ ಅದೇ ಮಾನ್ಯ ಮಂತ್ರಿಗಳಿಗೆ ಸ್ವರ್ಗ ಭಾಗ್ಯ. ಉಳಿದದ್ದೆಲ್ಲ 'ತಪ್ಪು ಮಾಹಿತಿ, ಪೂರ್ವಗ್ರಹ'. ಸಾರ್ವಜನಿಕ ವಲಯದ ಉದ್ಯಮಗಳಲ್ಲಿ ಬಂಡವಾಳವನ್ನು ಹಿಂತೆಗೆದುಕೊಳ್ಳಲು ಯೋಜನೆಗಳನ್ನು ಶಿಫಾರಸ್ಸು ಮಾಡಿದ ಆಯೋಗದ ಅಧ್ಯಕ್ಷರಾಗಿದ್ದ ರಾಮಕೃಷ್ಣ ''ಸಾರ್ವಜನಿಕ ಉದ್ಯಮಗಳ ಮಾರಾಟದಿಂದ ಬಂದ ಹಣವನ್ನು ಪ್ರತ್ಯೇಕ ಅಭಿವೃದ್ಧಿ ಬಂಡವಾಳವಾಗಿ ತೊಡಗಿಸಬೇಕೆ ವಿನಃ, ಅದನ್ನು ಬಡ್ಜೆಟಿನ ಭಾಗ ಮಾಡಿಕೊಂಡು ಖರ್ಚು ಬಾಬ್ತಿಗೆ ಉಪಯೋಗಿಸುತ್ತಿದ್ದಾರಲ್ಲ!'' ಎಂದು ಆಶ್ಚರ್ಯ ವ್ಯಕ್ತಪಡಿಸಿದ್ದಾರೆ (ದಿ ಹಿಂದು, ೫.೩.೨೦೦೧). ಆದರೆ ಮಾನ್ಯ ಯಶವಂತ ಸಿನ್ಹಾ ''ಯಾವ ಟೀಕೆಗಳನ್ನೂ ಗಮನಕ್ಕೆ ತೆಗೆದುಕೊಳ್ಳದ'' ಅಚಲ ವೀರರು !

ಹೋದ ವರ್ಷ ಮಾರಾಟ ಮಾಡಿದ ಮಾಡರ್ನ್ ಫುಡ್ಸ್ ಮತ್ತು ಮೊನ್ನೆ ತಾನೆ ಮಾರಾಟ ಮಾಡಿರುವ ಬಾಲ್ಕೊ (ಭಾರತ್ ಅಲ್ಯುಮಿನಿಯಮ್ ಕಂಪೆನಿ)ಗಳನ್ನೇ ತೆಗೆದುಕೊಳ್ಳಿ. ಮಾಡರ್ನ್ ಫುಡ್ಸ್‌ನ್ನು ಹಿಂದುಸ್ತಾನ್ ಲಿವರ್‌ಗೆ ೧೦೫ ಕೋಟಿ ರೂಪಾಯಿಗೆ ಮಾರಿದರು. ಈ ಮಾರಾಟದ ಬಗ್ಗೆ ಆಗ 'ಡಿಸ್‌ಇನ್‌ವೆಸ್ಟ್‌ಮೆಂಟ್ ಮಿನಿಸ್ಟರ್' ಆಗಿದ್ದ ಅರುಣ್ ಜೈಟ್ಲಿ ಹೇಳಿದ್ದು ''ಇದು ನಾವು ಅಂದುಕೊಂಡದ್ದಕ್ಕಿಂತ ಹೆಚ್ಚು ಬೆಲೆಗೆ ಮಾರಾಟವಾಗಿದೆ. ಇದಕ್ಕಿಂತ ಹೆಚ್ಚು ಯಾರೂ ಕೊಡುತ್ತಿರಲಿಲ್ಲ.'' ಮಂತ್ರಿಗಳು ಮತ್ತು ಅವರ ಸಲಹಾಮಂಡಳಿ ಮೌಲ್ಯಮಾಪನ ಮಾಡಿದ ಬೆಲೆ ಯಾವುದು ? ಆ ಮೌಲ್ಯಮಾಪನಕ್ಕೆ ಸಮರ್ಥನೆ ಏನು ? ಎಂಬ ಪ್ರಶ್ನೆಗಳಿಗೆ ಉತ್ತರಿಸುವ ಗೋಜಿಗೇ ಅವರು ಹೋಗಲಿಲ್ಲ. ಅವರ ಸಮಜಾಯಿಷಿ ಏನಿದ್ದರೂ ''ವ್ಯವಹಾರ ಪಾರದರ್ಶಕವಾಗಿದೆ. ಟೆಂಡರ್ ಕರೆದು ಅತಿ ಹೆಚ್ಚು ಬೆಲೆ ಕಟ್ಟಿದವರಿಗೆ ಕೊಟ್ಟಿದ್ದೇವೆ'' ಎನ್ನುವುದಾಗಿದೆ. ೫೫೦ ಕೋಟಿಗೆ ಬಾಲ್ಕೊವನ್ನು ಮಾರಿದ್ದಕ್ಕೆ ಹಾಲಿ ಮಂತ್ರಿ ಅರುಣ್ ಶೌರಿ ಕೊಟ್ಟಿರುವ ಸಮಜಾಯಿಷಿಯೂ ಇಷ್ಟೇ. ಉಡುಪಿಯಲ್ಲಿ ಕೆಲವು ಕಡೆ ತಳ್ಳುವ ಗಾಡಿಯಲ್ಲಿ ಬಾಳೆಹಣ್ಣು ಇಟ್ಟುಕೊಂಡು ಮಾರುತ್ತಾರೆ; ರಾತ್ರಿಯಾಗುವ ಹೊತ್ತಿಗೆ ಅವರಿಗೆ ತಮ್ಮ ಮಾಲನ್ನು ಖಾಲಿ ಮಾಡಿಕೊಂಡು ಹೋಗದೆ ವಿಧಿಯಿಲ್ಲ; ಅದು ಗಿರಾಕಿಗಳಿಗೆ ಗೊತ್ತು. ಮಧ್ಯಾಹ್ನ ಹತ್ತು ರೂಪಾಯಿಗೆ ಹದಿನೈದು ಬಾಳೆಹಣ್ಣು ಸಿಕ್ಕಿದರೆ, ಕತ್ತಲಾಗುವ ಹೊತ್ತಿಗೆ ಇಪ್ಪತ್ತರಿಂದ - ಎರಡು ಡಜನ್‌ಗಳಷ್ಟು ಗಿಟ್ಟುತ್ತದೆ. ಈ ವ್ಯವಹಾರವೂ ಪಾರದರ್ಶಕವೇ ! ಶೇರು ಮಾರುಕಟ್ಟೆಯಲ್ಲಿ ನಡೆಯು



ವುದು ಇಂತಹುದೆ ಜೂಜಾಟ. ಈ ಆಟದ ನಿಯಮಗಳೆಲ್ಲಾ ಹಣವಂತರ ಪರವಾಗಿಯೇ ಇರುತ್ತವೆ ಎಂದು ಬೇರೆ ಹೇಳಬೇಕಾಗಿಲ್ಲ. ಇಲ್ಲಿ 'ಕೊಟ್ಟವನು ಕೋಡಂಗಿ, ಇಸ್ಕೊಂಡವನು ಈರಭದ್ರ' ಎನ್ನುವುದೇ ನಿಯಮ. ಸಾರ್ವಜನಿಕ ವಲಯದ ಉದ್ಯಮಗಳನ್ನು ಮಾರುತ್ತಿರುವವರು ಈ 'ಪಾರದರ್ಶಕ ನಿಯಮ'ವನ್ನೇ ಪರಿಪಾಲಿಸುತ್ತಿದ್ದಾರೆ.

ಸಂವಿಧಾನದ ಕಲಮ್ಮು ೧೯ (ಎಫ್) ಪ್ರಜೆಗಳಿಗೆ ವೈಯಕ್ತಿಕ ಆಸ್ತಿ ಹೊಂದುವ ಹಕ್ಕು ಕೊಟ್ಟಿತ್ತು. ೩೧ನೇ ಕಲಮ್ಮಿನಲ್ಲಿ, ಸರ್ಕಾರ ಸಾರ್ವಜನಿಕ ಕಾರ್ಯಗಳಿಗಾಗಿ ವೈಯಕ್ತಿಕ ಆಸ್ತಿಯನ್ನು - ಸೂಕ್ತ ನಿಯಮಗಳನ್ನು ಮಾಡಿ, ಪರಿಹಾರವನ್ನು ನಿಗದಿಪಡಿಸಿ - ವಶಪಡಿಸಿಕೊಳ್ಳುವ ವಿಧಿವಿಧಾನಗಳನ್ನು ನಿಗದಿಪಡಿಸಲಾಗಿತ್ತು. ೩೧ (ಎ) ಮತ್ತು (ಬಿ) - ಖಾಸಗಿ ಆಸ್ತಿಗಳನ್ನು ಸರ್ಕಾರ ವಶಪಡಿಸಿಕೊಳ್ಳುವ ವಿಧಿವಿಧಾನ - ಕಲಮ್ಮುಗಳನ್ನು ೧೯೫೧ರಲ್ಲಿ ಸೇರಿಸಲಾಗಿತ್ತು. ೧೯೭೮ರ ಸಂವಿಧಾನ ತಿದ್ದುಪಡಿ ೧೯ (ಎಫ್) ಮತ್ತು ೩೧ನೇ ಕಲಮ್ಮುಗಳನ್ನು ರದ್ದುಗೊಳಿಸಿ, ೩೧ (ಎ) ಮತ್ತು (ಬಿ)ಯನ್ನು ಮಾತ್ರ ಉಳಿಸಿದೆ. ಸಂವಿಧಾನದ ೯ನೇ ಷೆಡ್ಯೂಲ್‌ನಲ್ಲಿ ಆಸ್ತಿಯ ಮರುಹಂಚಿಕೆಗೆ ಸಂಬಂಧಿಸಿದ ಕಾಯ್ದೆಗಳ ಪಟ್ಟಿಯೇ ಇದೆ. ಕಾಯ್ದೆಗಳು ಹೇಗಾದರೂ ಇರಲಿ, ಯಾವ ಮಾಯದಲ್ಲೋ ಶ್ರೀಮಂತರಿಗೆ ಆಸ್ತಿಯಿಂದ ಬರುವ ಲಾಭ ಸುರಕ್ಷಿತವಾಗಿದ್ದು, ಜೀವನ ನಿರ್ವಹಣೆಯ ಸಾಧನವಾದ ಬಡವರ ಆಸ್ತಿಗಳಿಗೇ ಕಾನೂನುಗಳು ವಕ್ಕರಿಸುವುದು. ಖ್ಯಾತ ಪತ್ರಕರ್ತ ಪಿ. ಸಾಯಿನಾಥ್ ಈ ವಿಪರ್ಯಾಸವನ್ನು ಸಾಕ್ಷಿ ಸಹಿತ ತಮ್ಮ ಬರಹಗಳಲ್ಲಿ ತೋರಿಸಿದ್ದಾರೆ. ಇಲ್ಲಿ ಹೇಳಬೇಕಾಗಿರುವುದು ಇಷ್ಟೇ: ಸಾರ್ವಜನಿಕ ಉದ್ಯಮಗಳನ್ನು ಸ್ಥಾಪಿಸುವಾಗ ಆಯಕಟ್ಟಿನ ಆಸ್ತಿ ಮತ್ತು ಬೆಲೆಬಾಳುವ ಸಂಪನ್ಮೂಲಗಳನ್ನು ಸಾರ್ವಜನಿಕ ಉದ್ಯಮಗಳು 'ರಾಷ್ಟ್ರ ಎಲ್ಲಾ ಪ್ರಜೆಗಳ ಆಸ್ತಿ' ಎಂಬ ಉದ್ದೇಶವನ್ನು ಮುಖ್ಯಮಾಡಿಕೊಂಡು, ಅತ್ಯಂತ ಅಗ್ಗದ ಬೆಲೆಗೆ ಸರ್ಕಾರ ವಶಪಡಿಸಿಕೊಂಡಿರುತ್ತದೆ. ಈ ಕ್ರಮಗಳಿಗೆ ಸಂವಿಧಾನದ ಬೆಂಬಲ ಇರುವುದು, ಸಾರ್ವಜನಿಕ ಉದ್ಯಮಗಳಿಂದ ಬರುವ ಸಂಪತ್ತು ಸರ್ಕಾರದ ಖಜಾನೆಗೆ ಸೇರಿ, ರಾಷ್ಟ್ರದ ಎಲ್ಲಾ ಪ್ರಜೆಗಳ ಕಲ್ಯಾಣಕ್ಕೆ ವಿನಿಯೋಗವಾಗುತ್ತದೆ ಎಂಬ ಕಾರಣಕ್ಕಾಗಿ. ಸರ್ಕಾರ ಖಾಸಗಿ ಆಸ್ತಿಗಳನ್ನು ವಶಪಡಿಸಿಕೊಳ್ಳುವಾಗ ಕೊಡುವ ಬೆಲೆ ಸಾಂಕೇತಿಕ ಮೌಲ್ಯ ಹೊಂದಿರುತ್ತದೆಯೇ ಹೊರತು, ಅದು ಆಸ್ತಿಯಿಂದ ಉತ್ಪನ್ನವಾಗಬಹುದಾದ ಲಾಭವನ್ನು ಪರಿಗಣಿಸಿ ನಿರ್ಧರಿಸಿದ 'ಆಯಕಟ್ಟಿನ ಮೌಲ್ಯ' ವಾಗಿರುವುದಿಲ್ಲ (ರಸ್ತೆ ನಿರ್ಮಾಣ, ರೈಲು ದಾರಿಗಳ ನಿರ್ಮಾಣ, ಅಣೆಕಟ್ಟು ನಿರ್ಮಾಣಗಳಿಗೆ ಭೂಮಿಯನ್ನು ಬಿಟ್ಟುಕೊಟ್ಟವರಿಗೆ ಇದರ ಬಿಸಿ ಚೆನ್ನಾಗಿಯೇ ತಾಗಿರುತ್ತದೆ). ಅಂತಹ ಆಸ್ತಿಗಳಿಗೆ ಇರುವುದು 'ಸಾಮಾಜಿಕ ಮೌಲ್ಯ.' ''ಸಾರ್ವಜನಿಕ ಉದ್ಯಮಗಳು ಸಾಮಾಜಿಕ ಜವಾಬ್ದಾರಿಯನ್ನು ನಿಭಾಯಿಸಬೇಕು ಎನ್ನುವುದು ಅಷ್ಟು ಸರಿಯಲ್ಲ'' ಎಂದು ಹೇಳುವ ಅರುಣ್ ಶೌರಿ (ಕನ್ನಡಪ್ರಭ, ೧೮.೩.೨೦೦೧) 'ಸಾಮಾಜಿಕ ಮೌಲ್ಯ'ಕ್ಕೆ ಕವಡೆ ಬೆಲೆಯನ್ನೂ ಕಟ್ಟುವವರಲ್ಲ ಬಿಡಿ; ಕಾಂಚಾಣದ ಕುಣಿತವೇ ಅವರಿಗೆ ಪ್ರಿಯವಾಗಿರಬಹುದು. ಹಾಗಿದ್ದರೆ, ಜನರಿಂದ ಧರ್ಮಾರ್ಥವಾಗಿ ವಶಪಡಿಸಿಕೊಂಡಿರುವ ಸಾರ್ವಜನಿಕ ಉದ್ದಿಮೆಗಳ ಸ್ಥಿರಾಸ್ತಿಗಳನ್ನು ಲಾಭದಾಯಕವಾಗಿ ಮೌಲ್ಯಮಾಪನ ಮಾಡಿ, 'ಆಯಕಟ್ಟಿನ ಮೌಲ್ಯ'ಕ್ಕೆ ಮಾರುವುದನ್ನು ಬಿಟ್ಟು, ಬಾಳೆಹಣ್ಣಿನ ಹಾಗೆ ತಳ್ಳುವ ಗಾಡಿಯಲ್ಲಿ ಇಟ್ಟು 'ಮಾರುಕಟ್ಟೆ' ಬೆಲೆಗೆ ಯಾಲಾಮು ಹಾಕುವುದರ ಅರ್ಥವಾದರೂ ಏನು ?

ನಮ್ಮ ಇಂಗ್ಲಿಷ್ ಪತ್ರಿಕೆಗಳವರು ಸಮಾಜವಾದಿಗಳು ಏನೂ ಅಲ್ಲ; ಅವರ ಅಂದಾಜಿನ ಪ್ರಕಾರ, ಮಾಡರ್ನ್ ಫುಡ್ಸ್‌ನ ಸ್ಥಿರ ಹಾಗೂ ಚರಾಸ್ತಿಯ ಬೆಲೆ ೧,೫೦೦-೨,೦೦೦ ಕೋಟಿ ರೂಪಾಯಿಗಳು; ಸರ್ಕಾರ ಮಾರಿದ್ದು ೧೦೫ ಕೋಟಿಗೆ. ಕಂಪೆನಿಯ ಆಸ್ತಿಯ ಬೆಲೆ ಎಷ್ಟು, ಎಂದು ಸರ್ಕಾರ ಬಾಯಿಬಿಡಲಿಲ್ಲ. ಕೊಳ್ಳಲು ತಯಾರಾಗಿದ್ದ ಮೂರು ಬಹುರಾಷ್ಟ್ರೀಯ ಕಂಪೆನಿಗಳಲ್ಲಿ, ಹಿಂದುಸ್ತಾನ್ ಲಿವರ್ ಕೊಡಲು ತಯಾರಿದ್ದ ೧೦೫ ಕೋಟಿಯೇ ಅತಿ ಹೆಚ್ಚಾಗಿದ್ದು, ಅವರಿಗೆ ಮಾರುವುದು 'ನ್ಯಾಯ ಸಮ್ಮತ' ಎಂದು ಅರುಣ್ ಜೈಟ್ಲಿ ವಾದಿಸಿದರು. ಇದು ತಮ್ಮ ತಜ್ಞ ಸಲಹಾ ಮಂಡಳಿ - ಇವರೆಲ್ಲಾ ಖಾಸಗಿ ಉದ್ಯಮಿಗಳು ಮತ್ತು ಬಹುರಾಷ್ಟ್ರೀಯ ಕಂಪೆನಿಗಳಿಗೆ ಸಲಹೆಗಾರರಾಗಿ ಕೆಲಸ ಮಾಡುವ ಮಂದಿ - ನಿಗದಿಪಡಿಸಿದ ಬೆಲೆಗಿಂತ ಜಾಸ್ತಿ ಎಂದು ಬೇರೆ ಕೊಚ್ಚಿಕೊಂಡರು. ಅಷ್ಟು ಸಾಲದು ಎನ್ನುವಂತೆ, '(ಜುಜುಬಿ) ಸರ್ಕಾರಿ ಉದ್ದಿಮೆಯ ನೌಕರರಾಗಿದ್ದವರು, ರಾತ್ರೋರಾತ್ರಿ ಪ್ರತಿಷ್ಠಿತ ಬಹುರಾಷ್ಟ್ರೀಯ ಕಂಪೆನಿಯ ನೌಕರರಾಗಿ ಮಾರ್ಪಾಡಾಗಿದ್ದಕ್ಕೆ ನೀವು ಖುಷಿಪಡಬೇಕು' ಎಂದು ಮಾಡರ್ನ್ ಫುಡ್ಸ್ ನೌಕರರಿಗೆ ಉಪದೇಶವನ್ನೂ ಕೊಟ್ಟರು ! ಕೋಟ್ಯಾಂತರ ರೂಪಾಯಿ ಆಸ್ತಿಯನ್ನು ಕವಡೆ ಬೆಲೆಗೆ ಮೌಲ್ಯಮಾಪನ ಮಾಡುವ ತಜ್ಞರು, ಒಂದಾಣೆ ಹೆಚ್ಚು ನೀಡಿ ಖರೀದಿಸುವ ಉದಾರಿ ಬಹುರಾಷ್ಟ್ರೀಯ ಕಂಪೆನಿ, 'ಇದಕ್ಕಿಂತ ಲಾಭದಾಯಕ ಬೆಲೆ ತೆಗೆಸಿಕೊಡಿ ನೋಡೋಣ' ಎಂದು ನಾಚಿಕೆ ಇಲ್ಲದೆ ಸವಾಲು ಹಾಕುವ ಮಂತ್ರಿವರ್ಯರು, ಇದಕ್ಕಿಂತ ದೊಡ್ಡ ಸೌಭಾಗ್ಯ ಭಾರತಕ್ಕೆ ಬೇಕೆ !

ಬಾಲ್ಕೊ ವ್ಯವಹಾರ ಮತ್ತಷ್ಟೂ 'ಪಾರದರ್ಶಕ.' ೧೯೬೫ರಲ್ಲಿ ಕಂಪೆನಿ ಕಾರ್ಯಾರಂಭ ಮಾಡಿದಾಗಲೇ ಅದರ ಬೆಲೆ ೧೫೦೦ ಕೋಟಿ ರೂಪಾಯಿ; ೧೯೯೯ರ ನಿವ್ವಳ ಲಾಭ ೬೫ ಕೋಟಿ ರೂಪಾಯಿ; ಕಂಪೆನಿಯ ಸ್ವಾಯತ್ತ ವಿದ್ಯುತ್ ಘಟಕಗಳ ಬೆಲೆ ೧೫೦೦ ಕೋಟಿ ರೂಪಾಯಿ; ಅರುಣ್ ಶೌರಿ ಹೇಳುವ ಪ್ರಕಾರವೇ, ಬಾಲ್ಕೊ 'ಶಸ್ತ್ರಾಸ್ತ್ರ ತಯಾರಿಸುವ ರಕ್ಷಣಾ ಕಾರ್ಖಾನೆಗಳಿಗೆ ಅಲ್ಯುಮಿನಿಯಮ್‌ನ್ನು ನಿರಂತರವಾಗಿ ಪೂರೈಸುವ ಮುಖ್ಯ ಉದ್ದಿಮೆ'; ಆದರೂ ಬಾಲ್ಕೊದ ಶೇ. ೫೧ ಶೇರುಗಳ 'ಲಾಭದಾಯಕ ಬೆಲೆ' ೫೫೧ ಕೋಟಿ ರೂಪಾಯಿ. ಈ ಶೇರುಗಳನ್ನು ಖರೀದಿಸುವ ಮೂಲಕ ಆಡಳಿತದ ನಿಯಂತ್ರಣ ದಕ್ಕಿಸಿಕೊಂಡ 'ಸ್ಟೆರಲೈಟ್' ಭಾರತದ ಅಲ್ಯುಮಿನಿಯಮ್ ಉತ್ಪಾದನೆಯ ಏಕಸ್ವಾಮ್ಯಾಧಿಪತಿ.


## ಏಜೆಂಟರು ಬೇಕಾಗಿದ್ದಾರೆ

*ಹೊಸತು ಪತ್ರಿಕೆಗೆ ಏಜೆಂಟರುಗಳಿಲ್ಲದ ಊರುಗಳಲ್ಲಿ ಪತ್ರಿಕೆಯನ್ನು ಮಾರಾಟ ಮಾಡಬಲ್ಲ ಏಜೆಂಟರುಗಳು ಬೇಕಾಗಿದ್ದಾರೆ. ಆಸಕ್ತಿಯುಳ್ಳವರು ಏಜೆನ್ಸಿ ನಿಯಮಗಳಿಗಾಗಿ ಸಂಪರ್ಕಿಸಿ.*

*ವ್ಯವಸ್ಥಾಪಕರು,* **ಹೊಸತು**


ಬಾಲ್ಕೊ ಖರೀದಿಯಿಂದ ತಮ್ಮ ಲಾಭ ದುಪ್ಪಟ್ಟಾಗಲಿದೆ ಎಂದು 'ಸ್ಟೆರಲೈಟ್'ನ ವ್ಯವಸ್ಥಾಪಕರು ನಡುಬೀದಿಯಲ್ಲಿ ಕುಣಿದಾಡಿದರು. ಬಾಲ್ಕೊ ಕಂಪೆನಿಗೆ ಬಾಕ್ಸೈಟ್ ಅದಿರನ್ನು ಒದಗಿಸುವ ಗಣಿಗಳು ಇರುವುದು ಬುಡಕಟ್ಟು ಜನ ವಾಸಿಸುವ ಮೀಸಲು ಪ್ರದೇಶಗಳಲ್ಲಿ. ಸಂವಿಧಾನದ ಪ್ರಕಾರ, ಖಾಸಗಿ ವ್ಯಕ್ತಿ/ಕಂಪೆನಿಗಳಿಗೆ ಈ ಪ್ರದೇಶವನ್ನು ಮಾರಕೂಡದು. ಈ ಗಣಿಗಳಿಂದ ಬಾಲ್ಕೊಗೆ ಅತ್ಯಂತ ಕಡಿಮೆ ದರದಲ್ಲಿ ಅದಿರು ಒದಗಿಸಲಾಗುತ್ತಿದೆ. ಬಾಲ್ಕೊ ಮಾರಾಟ ಕುದುರುವ ಕೆಲವೇ ದಿನಗಳ ಮುಂಚೆ ಒರಿಸ್ಸಾದ ಸರ್ಕಾರ ತನ್ನ ಸುಪರ್ದಿನಲ್ಲಿ ಇರುವ ಗಣಿಗಳಿಂದ ಕಡಿಮೆ ಬೆಲೆಗೆ ಅದಿರು ಒದಗಿಸುವ ದೀರ್ಘಕಾಲಿಕ ಒಪ್ಪಂದವನ್ನು ನವೀಕರಿಸಿದೆ. ಇಷ್ಟೆಲ್ಲಾ ಸವಲತ್ತಿನ ಬೆಲೆ ೫೫೧ ಕೋಟಿ. ಅರುಣ್ ಶೌರಿ ಕೂಡ ಸವಾಲು ಹಾಕುತ್ತಾರೆ : ''ಇದಕ್ಕಿಂತ ಲಾಭದಾಯಕ ಬೆಲೆಯನ್ನು ಯಾರಾದರೂ ತಂದು ಕೊಡುತ್ತೀರೋ ?'' ಬಾಲ್ಕೊ ಇರುವುದು ಚತ್ತಿಸ್‌ಗಡ್ ರಾಜ್ಯದಲ್ಲಿ. ಆದಿವಾಸಿ ಬುಡಕಟ್ಟು ಜನರ ಹಿತರಕ್ಷಣೆಯ ಬೇಡಿಕೆಯನ್ನು ಮುಖ್ಯವಾಗಿಟ್ಟುಕೊಂಡೆ ೨೦೦೦ದ ಇಸವಿಯಲ್ಲಿ ಈ ರಾಜ್ಯ ಹುಟ್ಟಿಕೊಂಡಿದೆ. ಈ ರಾಜ್ಯದ ಮುಖ್ಯಮಂತ್ರಿ ಅಜಿತ್ ಜೋಗಿ, ಬಾಲ್ಕೊ ಮಾರಾಟ ವ್ಯವಹಾರವನ್ನು ವಿರೋಧಿಸಿ, ಸ್ಟೆರಲೈಟ್‌ನವರಿಗೆ ತಮ್ಮ ಸರ್ಕಾರ ಸಹಕಾರ ಕೊಡುವುದಿಲ್ಲ ಎಂದು ಪಟ್ಟು ಹಿಡಿದರು. ಕೇಂದ್ರ ಸರ್ಕಾರ, ಚತ್ತಿಸ್‌ಗಢ್ ಸರ್ಕಾರದ ವಿರುದ್ಧ ಕ್ರಮ ತೆಗೆದುಕೊಂಡು ಸ್ಟೆರಲೈಟ್ ಕಂಪೆನಿಯ ಸ್ವಾಮ್ಯವನ್ನು ರಕ್ಷಿಸಬೇಕು ಎಂದು ಸುಪ್ರೀಮ್ ಕೋರ್ಟಿಗೆ ಫಿರ್ಯಾದು ಒಯ್ದಿತು !

ಮಾನ್ಯ ಯಶವಂತ ಸಿನ್ಹಾ ೨೦೦೧-೦೨ರ ಬಜೆಟ್‌ನಲ್ಲಿ ಸಾರ್ವಜನಿಕ ಉದ್ಯಮಗಳ ಮಾರಾಟದಿಂದ ೧೨,೦೦೦ ಕೋಟಿ ರೂಪಾಯಿ ಸಂಗ್ರಹಿಸುವವರಿದ್ದಾರೆ. ಸಿನ್ಹಾರ ಈ ಯೋಜನೆಯ ಬಗ್ಗೆ ''ಸ್ಪಷ್ಟ ಮತ್ತು ನಿಷ್ಠುರ ಸತ್ಯ'' ಏನಾದರೂ ಇದ್ದರೆ, ಅದು - ಚೋಮ್‌ಸ್ಕಿಯ ಮಾತುಗಳಲ್ಲಿ ಹೇಳಬಹುದಾದದ್ದು - ''ಬಡವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣಬಡಿಸುವ'' ''ಶ್ರೀಮಂತರಿಗಾಗಿ ಇರುವ ಸಮಾಜವಾದ.''


**ಕೆ. ಫಣಿರಾಜ್**
ಸಿ-೧(ಎ), ಕೈಲಾಸ ಮನೆಗಳು,
ಮಣಿಪಾಲ-೫೭೬ ೧೧೯. ಉಡುಪಿ ಜಿಲ್ಲೆ

# ಅಧ್ಯಕ್ಷರು ಸ್ಪಷ್ಟನೆ ನೀಡುವ ಅಗತ್ಯವಿದೆ

- ಎಂ. ವಿ. ಕೃಷ್ಣಸ್ವಾಮಿ

*ಚಲನಚಿತ್ರ ಜಗತ್ತಿನೊಂದಿಗೆ ನಿಕಟ ಸಂಬಂಧವಿಟ್ಟುಕೊಂಡಿರುವ ಪ್ರೊ|| ಎಂ. ವಿ. ಕೃಷ್ಣಸ್ವಾಮಿ ಅವರು ಆ ಕ್ಷೇತ್ರದಲ್ಲಿ ದಿಗ್ಗಜರೆಂದೇ ಗುರುತಿಸಲ್ಪಡುತ್ತಾರೆ. ಹತ್ತಿರದವರಿಗೆ, ತೀರ ಆತ್ಮೀಯರಿಗೆ ಅವರು 'ಎಂ.ವಿ.ಕೆ.' ಮಾತ್ರ. ರೊಸ್ಸಿಲಿನಿಯಿಂದ ಸತ್ಯಜಿತ್ ರಾಯ್‌ವರೆಗೆ ಹಲವಾರು ಖ್ಯಾತ ನಿರ್ದೇಶಕರೊಂದಿಗಿನ ಒಡನಾಟ ಅವರಿಗೆ ಅಪೂರ್ವ ಅನುಭವ ತಂದುಕೊಟ್ಟಿದೆ. ಭಾರತದಲ್ಲಿ ಜರುಗಿದ ಅಂತರರಾಷ್ಟ್ರೀಯ ಚಲನಚಿತ್ರೋತ್ಸವಗಳಲ್ಲಿ ನಿರ್ದೇಶಕರಾಗಿ, ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ರಾಜ್ಯ ಮತ್ತು ಕೇಂದ್ರ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿಗಳಲ್ಲಿ, ಹಲವಾರು ಬಾರಿ ಅಂತರರಾಷ್ಟ್ರೀಯ 'ಜ್ಯೂರಿ'ಗಳಲ್ಲಿ ಸದಸ್ಯರಾಗಿದ್ದವರು.*

*ಈ ವರ್ಷದ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳ ಆಯ್ಕೆಯು ಚಲನಚಿತ್ರರಂಗದಲ್ಲಿಯೇ ಅಲ್ಲದೆ ಹಲವಾರು ಕಡೆ ವಾದವಿವಾದಗಳಿಗೆಡೆಮಾಡಿಕೊಟ್ಟಿದೆ. ಕೇಂದ್ರ ಸರ್ಕಾರದ ಹೆಗ್ಗಿಲ್ಲದ ಕಾವೀಕರಣದ ಅನಿಷ್ಟ ಪ್ರಕ್ರಿಯೆ ಚಲನಚಿತ್ರರಂಗಕ್ಕೂ ಹಬ್ಬಿರುವುದು ಒಂದು ಅನಾರೋಗ್ಯಕರ ಬೆಳವಣಿಗೆ.*

*ರಾಗದ್ವೇಷ, ಪೂರ್ವಗ್ರಹಪೀಡೆ ಇಲ್ಲದ, ಅಪಾರ ಅನುಭವವಿರುವ, ಸರಳ ಸಜ್ಜನ ವ್ಯಕ್ತಿ ಎಂ.ವಿ.ಕೆ. ಭುಗಿಲೆದ್ದಿರುವ ಇಂದಿನ ವಾದ ವಿವಾದದ ಬಗ್ಗೆ ಅಭಿಪ್ರಾಯ ನೀಡುವುದಕ್ಕೆ ಸಮರ್ಥರು.*

*ಡಾ|| ಜಿ. ರಾಮಕೃಷ್ಣ, ಕೆ. ಪಿ. ಸ್ವಾಮಿ, ಯು. ಎಸ್. ಶ್ರೀನಿವಾಸನ್ ಮತ್ತು ಎಸ್. ಸುರೇಂದ್ರ ಅವರು ಎಂ.ವಿ.ಕೆ. ಅವರನ್ನು ಸಂದರ್ಶಿಸಿ ಅವರ ಮುಂದಿಟ್ಟ ಕೆಲವು ಪ್ರಶ್ನೆಗಳಿಗೆ ಎಂ.ವಿ.ಕೆ. ನೀಡಿರುವ ಪ್ರತಿಕ್ರಿಯೆ ನಮ್ಮನ್ನು ಸದಾ ಎಚ್ಚರದಿಂದಿರಬೇಕೆಂದು ಪ್ರೇರೇಪಿಸುತ್ತದೆ.*

**ಹೊಸತು** : ಚಲನಚಿತ್ರ ರಂಗದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರುವ ನೀವು ಹಲವು ವರ್ಷಗಳ ಕಾಲ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಶಸ್ತಿ ನಿರ್ಧಾರಕ ಸಮಿತಿಗಳಲ್ಲಿ ಸದಸ್ಯರಾಗಿ, ಕಾರ್ಯದರ್ಶಿಗಳಾಗಿ ಕೆಲಸ ಮಾಡಿದ್ದೀರಿ. ಅದರ ಹಿನ್ನೆಲೆ, ಅನುಭವ, ಸ್ವಾರಸ್ಯಕರ ಘಟನೆಗಳು ಮುಂತಾದುವನ್ನು ಸ್ಮರಿಸಿಕೊಂಡು ಹೇಳುವಿರಾ ?

**ಎಂ.ವಿ.ಕೆ** : ಚಲನಚಿತ್ರ ಮಾಧ್ಯಮದಲ್ಲಿನ ಈ ವರ್ಷದ ರಾಷ್ಟ್ರೀಯ ಪ್ರಶಸ್ತಿಗಳನ್ನು ಕೇಂದ್ರ ಸರ್ಕಾರ ಘೋಷಿಸಿರುವ ಬಗ್ಗೆ ಅನೇಕ ವಾದ ವಿವಾದಗಳು, ಪರ ವಿರೋಧಿ ಅಭಿಪ್ರಾಯಗಳು ಹಲವಾರು ವಲಯಗಳಲ್ಲಿ ಮೂಡಿಬರುತ್ತಿವೆ. ಸಾರ್ವಜನಿಕರಿಗೆ, ಕಲಾಮಾಧ್ಯಮಕ್ಕೆ, ಒಟ್ಟಾರೆ ನಮ್ಮ ಸಂಸ್ಕೃತಿಗೆ ಸಂಬಂಧಿಸಿದ ಇಂತಹ ಗಹನವಾದ ವಿಷಯದ ಬಗ್ಗೆ ಆಯಾ ಕ್ಷೇತ್ರದವರೊಡನೆ ಚರ್ಚಿಸಿ ನಿರ್ದಿಷ್ಟ ಅಭಿಪ್ರಾಯಗಳನ್ನು ಸಂಗ್ರಹಿಸಲು 'ಹೊಸತು' ಪತ್ರಿಕೆ ಪ್ರಯತ್ನಿಸುತ್ತಿರುವುದು ಸಂತೋಷದ ವಿಷಯ.

ನೀವೇ ಹೇಳಿದಂತೆ ಪ್ರಶಸ್ತಿಗಳನ್ನು ನೀಡುವ ಪ್ರಕ್ರಿಯೆಯಲ್ಲಿ ಇಂತಹ ಪ್ರಶಸ್ತಿ ನಿರ್ಧಾರಕ ಸಮಿತಿಗಳ ಪಾತ್ರ ಮತ್ತು ಅವುಗಳ ಕಾರ್ಯವಿಧಾನಗಳನ್ನು ಕುರಿತಂತೆ ನನಗೇನೋ ಸಾಕಷ್ಟು ಅನುಭವವಿದೆ. ಐವತ್ತು ವರ್ಷಗಳಿಗೂ ಮೀರಿದ್ದು ನನ್ನ ಈ ಅನುಭವ.

ಈ ಸಂದರ್ಭದಲ್ಲಿ ೧೯೫೩ರಲ್ಲಿ ಇಟಲಿಯ ವೆನಿಸ್‌ನಲ್ಲಿ ಜರುಗಿದ ಪ್ರಸಿದ್ಧ ಅಂತರರಾಷ್ಟ್ರೀಯ ಚಲನಚಿತ್ರೋತ್ಸವ ನೆನಪಿಗೆ ಬರುತ್ತದೆ. ರೋಮ್‌ನ ಚಲನಚಿತ್ರ ಪ್ರಾಯೋಗಿಕ ಮತ್ತು ತರಬೇತಿ ಸಂಸ್ಥೆಯ ಒಬ್ಬ ವಿದ್ಯಾರ್ಥಿಯಾಗಿ ಅದರಲ್ಲಿ ಪಾಲ್ಗೊಳ್ಳುವ ಅವಕಾಶ ನನ್ನ ಪಾಲಿಗೆ ಬಂದಿತ್ತು. ವೆನಿಸ್ ಮತ್ತು ಫ್ರಾನ್ಸ್‌ನ ಕ್ಯಾನೆ ಚಲನಚಿತ್ರೋತ್ಸವಗಳು ಬಹಳ ಜನಪ್ರಿಯ ಹಾಗೂ ಪ್ರತಿಷ್ಠಿತವೆನಿಸಿಕೊಂಡಿದ್ದವು. ಅಲ್ಲಿ ಪ್ರಶಸ್ತಿ ಪಡೆದ ಚಿತ್ರಗಳೆಂದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ, ಗಲ್ಲಾ ಪೆಟ್ಟಿಗೆಯ ದೃಷ್ಟಿಯಲ್ಲಿ, ಯಶಸ್ಸು ಖಾತ್ರಿ ಎಂದೇ ಲೆಕ್ಕ. ಹಾಲಿವುಡ್ ಚಲನಚಿತ್ರ ಜಗತ್ತಿನವರಿಗಂತೂ ಈ ಎರಡೂ ಚಿತ್ರೋತ್ಸವಗಳ ಬಗ್ಗೆ ಎಲ್ಲಿಲ್ಲದ ಕಾತುರ, ಕುತೂಹಲ. ಪರಿಣಾಮ, ವಿಚಿತ್ರವಾದ ಸ್ಪರ್ಧಾ ಮನೋಭಾವ.



ಜೊತೆಗೆ ಒಳಗೊಳಗೇ ಜರುಗುತ್ತಿದ್ದ ಕೆಟ್ಟ ರಾಜಕೀಯ ವಿದ್ಯಮಾನಗಳು. ಸಮಯ ಮತ್ತು ಸ್ಥಳದ ಅಭಾವದಿಂದಾಗಿ ಈ ನಿಟ್ಟಿನಲ್ಲಿ ಹೆಚ್ಚಿನ ವಿವರಗಳು ಈಗ ಅನಗತ್ಯವೆನಿಸುತ್ತದೆ. ಒಟ್ಟಿನಲ್ಲಿ, ಚಲನಚಿತ್ರೋದ್ಯಮದಲ್ಲಿ ಅಂತರರಾಷ್ಟ್ರೀಯ ಖ್ಯಾತಿಯುಳ್ಳ ವ್ಯಕ್ತಿಗಳು, ಪ್ರತಿಭಾವಂತ ನಿರ್ದೇಶಕರು, ನಟರು, ಆಸಕ್ತರು, ಕಿಕ್ಕಿರಿದು ತುಂಬಿರುತ್ತಿದ್ದ ಇಂತಹ ಉತ್ಸವಗಳಲ್ಲಿ ಪ್ರಶಸ್ತಿ ವಿತರಣೆಯಲ್ಲಿರುತ್ತಿದ್ದ ಪಕ್ಷಪಾತ ಧೋರಣೆಯ ಬಗ್ಗೆ ಅಸಮಾಧಾನ, ಪ್ರತಿಭಟನೆ, ಟೀಕೆಗಳು ಅನಿವಾರ್ಯವಾಗಿ ಇರುತ್ತಲೇ ಇದ್ದುವು. ಆಗಲೇ ಹೇಳಿದ ವೆನಿಸ್ ಉತ್ಸವದಲ್ಲಿ ಅಮೆರಿಕದ ಚಿತ್ರವೊಂದಕ್ಕೆ ಪ್ರಶಸ್ತಿ ವಿತರಣೆಯಲ್ಲಿನ ವಿಧಾನದಲ್ಲಿನ ತಪ್ಪು ಒಪ್ಪುಗಳಿಗೆ ಪ್ರತಿಕ್ರಿಯಿಸಿ ರಂಗಮಂದಿರ ತುಂಬಿರುತ್ತಿದ್ದ ಇಡೀ ಜನಸ್ತೋಮ ಚೀರಾಡಿದ್ದು, ಚಪ್ಪಾಳೆ ತಟ್ಟಿದ್ದು ನಾನು ಮರೆಯುವ ಹಾಗೆಯೇ ಇಲ್ಲ. ಅಂದು ಬಿಮಲ್ ರಾಯ್ ಅವರ ''ದೋ ಬೀಘಾ ಜಮೀನ್'' ಮೂಲೆಗೆ ಬಿದ್ದು ಸೊಹ್ರಾಬ್ ಮೋದಿಯವರ ''ಝಾನ್ಸಿ ಕಿ ರಾಣಿ'' ಭಾರತದಿಂದ ಅಧಿಕೃತವಾಗಿ ಆಯ್ಕೆಯಾಗಿ ಪ್ರದರ್ಶನ ಕಂಡ ಚಿತ್ರ. ಈ ವಿರೋಧಾಭಾಸದ ಹಿನ್ನೆಲೆ ಏನೆಂದು ಕೇಳಬೇಡಿ. ಅದೊಂದು ದೊಡ್ಡ ಕತೆ.

ಇನ್ನು ಪ್ರಶಸ್ತಿ ನಿರ್ಧಾರಕ ಸಮಿತಿಗಳಲ್ಲಿ, ಅಂದರೆ ಜ್ಯೂರಿಗಳಲ್ಲಿನ ನನ್ನ ಪಾತ್ರದ ಬಗ್ಗೆ : ೧೯೫೨ರಲ್ಲಿ ದೆಹಲಿಯಲ್ಲಿ ಜರುಗಿದ ಮೊದಲನೆಯ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದ ದಿನಗಳಿಂದಲೂ ಅಂತರ ರಾಷ್ಟ್ರೀಯ, ರಾಷ್ಟ್ರೀಯ ಹಾಗೂ ಪ್ರಾದೇಶಿಕ ಮಟ್ಟದ ಅನೇಕ ಸಮಿತಿಗಳಲ್ಲಿ ಅಧ್ಯಕ್ಷನಾಗಿಯೋ, ಕಾರ್ಯದರ್ಶಿ ಯಾಗಿಯೋ, ಸದಸ್ಯನಾಗಿಯೋ ಒಂದಲ್ಲ ಒಂದು

ಸ್ಥಾನದಲ್ಲಿ ಈ ಮಾಧ್ಯಮದಲ್ಲಿ ನಾನು ಕೆಲಸ ಮಾಡಿಕೊಂಡು ಬಂದಿದ್ದೇನೆ.

**ಹೊ** : ಪ್ರಶಸ್ತಿಗಳನ್ನು ನಿರ್ಧರಿಸುವಾಗ ಸಮಿತಿಯು ಅನುಸರಿಸುವ ಪದ್ಧತಿಯೇನು ?

**ಎಂ.ವಿ.ಕೆ** : ಪೂರ್ವನಿರ್ಧಾರಿತ ಅಥವಾ ನಿರ್ದಿಷ್ಟ ಕಾರ್ಯವಿಧಾನವೇನೂ ಇರುವುದಿಲ್ಲ. ಸಮಿತಿಗಳೇ ಒಮ್ಮತದಿಂದ ತಮ್ಮದೇ ಆದ ರೀತಿ ನೀತಿಗಳನ್ನು ರೂಪಿಸಿಕೊಳ್ಳುವ ಸ್ವಾತಂತ್ರ್ಯವಿರುತ್ತದೆ. ಅಲ್ಲದೆ ಎಲ್ಲ ತೀರ್ಮಾನಗಳೂ ನ್ಯಾಯಸಮ್ಮತವಾದ, ಪೂರ್ವಾಗ್ರಹ ಪೀಡಿತವಾಗಿರದ, ಪಕ್ಷಪಾತಕ್ಕೆ ದೂರವಾದ ಚೌಕಟ್ಟಿನಲ್ಲಿ ಇರಬೇಕು. ಇದಕ್ಕಾಗಿ ಸದಸ್ಯರು ತಮ್ಮ ಜವಾಬ್ದಾರಿ ನಿರ್ವಹಿಸಬೇಕಾದುದು ಒಂದು ಮುಖ್ಯ ಅಂಶವಾಗಿರುತ್ತದೆ.

**ಹೊ** : ಈ ಸಮಿತಿಯ ಸದಸ್ಯರು ಆಯ್ಕೆಗೊಳ್ಳುವುದು ಹೇಗೆ ಮತ್ತು ಅವರಿಂದ ನೀವು ನಿರೀಕ್ಷಿಸುವುದೇನು ?

**ಎಂ.ವಿ.ಕೆ** : ನಮ್ಮ ದೇಶಕ್ಕೆ ಸಂಬಂಧಪಟ್ಟಂತೆ ಹಾಗೂ ಇಂದಿನ ಸಂದರ್ಭದಲ್ಲಿ ಮತ್ತು ಚಾಲ್ತಿಯಲ್ಲಿರುವ ವ್ಯವಸ್ಥೆಯಂತೆ ಸಮಿತಿಯ ಆಯ್ಕೆ ಮತ್ತು ಸದಸ್ಯರ ನೇಮಕಾತಿ ವಾರ್ತಾ ಮತ್ತು ಪ್ರಸಾರ ಇಲಾಖೆಯದಾಗಿತ್ತು. ನಿರ್ದೇಶಕ ಮಂಡಳಿಯ ಸ್ಥಾಪನೆಯ ನಂತರ ಎಲ್ಲ ಜವಾಬ್ದಾರಿ ಅವರದ್ದೇ. ಆದರೂ ಈ ಮಂಡಳಿಗೆ ಸಂಪೂರ್ಣ ಸ್ವಾಯತ್ತತೆ ಇದೆಯೆಂದೇನೂ ಅರ್ಥವಲ್ಲ. ತನ್ನ ತೀರ್ಮಾನಗಳಂತೆ ಆಯ್ಕೆಯಾದ ಚಲನಚಿತ್ರಗಳ ಮತ್ತು ಸಂಬಂಧಪಟ್ಟ ಇತರ ಹೆಸರುಗಳ ಪ್ರಶಸ್ತಿಗಳ ಪಟ್ಟಿಯನ್ನು ಸಚಿವಾಲಯಕ್ಕೆ ಕಳಿಸುವುದು ಇದುವರೆವಿಗೂ ಅನುಸರಿಸಿಕೊಂಡು ಬಂದಿರುವ ನಿಯಮ. ಸ್ವಲ್ಪ ಸಮಯ ಈ ನಿರ್ದೇಶಕ ಮಂಡಳಿ ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ಮಂಡಳಿಯ ಭಾಗವಾಗಿತ್ತು, ಆದರೆ ಈಗ ಮತ್ತೆ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಹತೋಟಿಗೆ ಮರಳಿ ಬಂದಿದೆ. ಚಿತ್ರೋತ್ಸವದ ನಿರ್ದೇಶಕ ಮಂಡಳಿಯ ಕಾರ್ಯನಿರ್ವಾಹಕ ನಿರ್ದೇಶಕನಾಗಿ ಜವಾಬ್ದಾರಿಯನ್ನು ನಾನು ವಹಿಸಿಕೊಂಡಿದ್ದ ಒಂದು ಸಂದರ್ಭದಲ್ಲಿ ಸ್ವಾಯತ್ತತೆಯ ಮಾತು ಅಲ್ಲಲ್ಲಿ ಚರ್ಚೆಯಾಗುತ್ತಿತ್ತು, ನಿಜ. ಅಂದು ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರೂ ಈ ಅಭಿಪ್ರಾಯದ ಪರವಾಗಿಯೇ ಇದ್ದರು. ಅದು ಕಾರ್ಯರೂಪಕ್ಕೆ ಬರದೇಹೋದದ್ದು ವಿಷಾದನೀಯವೆಂದೇ ನನ್ನ ಅನಿಸಿಕೆ.

ಆಯ್ಕೆ ಸಮಿತಿಯಿಂದ ನಾನು ನಿರೀಕ್ಷಿಸುವುದೇನು ಎಂಬ ನಿಮ್ಮ ಪ್ರಶ್ನೆಗೆ ನನ್ನ ಸರಳ ಮತ್ತು ನೇರ ಪ್ರತಿಕ್ರಿಯೆ ಇಷ್ಟು: ಚಲನಚಿತ್ರಗಳ ಬಗ್ಗೆ ಸಾಕಷ್ಟು ಅರಿವು ಇರಬೇಕಾದ್ದು ಮೊದಲನೆಯ ಅವಶ್ಯಕತೆ. ಹಾಗೆಯೇ, ಚಲನಚಿತ್ರ ಕಲೆಯ ಪ್ರಗತಿಯಲ್ಲಿ, ಏಳಿಗೆಯಲ್ಲಿ ಮತ್ತು ಆ ಮೂಲಕ ಜನಜಾಗೃತಿ ಉಂಟುಮಾಡುವಲ್ಲಿ ಸದಸ್ಯರಿಗೆ ಆಸಕ್ತಿ ಇರಲೇಬೇಕಾದ್ದು ಸಹಜವೇ ಅಲ್ಲವೇ ? ಈ ಪ್ರಶಸ್ತಿಗಳ ಗುರಿ ಅದಲ್ಲದೆ ಮತ್ತೇನು ? ಯಾವ ಪಕ್ಷಪಾತಕ್ಕೂ ಒಳಗಾಗದೆ, ನ್ಯಾಯಯುತವಾದ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸಾಮರ್ಥ್ಯ, ಎದೆಗಾರಿಕೆ ಅವರಲ್ಲಿ ಇರಬೇಕಾಗಿರುವುದರಲ್ಲಿ ಎರಡು ಮಾತಿಲ್ಲ. ಅಲ್ಲಿ ಯಾರೂ ಯಾವುದೇ ರಾಜಕೀಯ ಪಕ್ಷದ ಪ್ರತಿನಿಧಿಗಳಲ್ಲ.



**ಹೊ** : ಈ ಸಮಿತಿಗಳಲ್ಲಿ ಭಿನ್ನಾಭಿಪ್ರಾಯಗಳು ಮೂಡಿದಾಗ ಅವುಗಳನ್ನು ಬಗೆಹರಿಸುವುದು ಹೇಗೆ ? ನಿಮ್ಮ ಅನುಭವದಲ್ಲಿ ಅಂತಹ ಪ್ರಸಂಗಗಳೇನಾದರೂ ಉಂಟೆ ?

**ಎಂ.ವಿ.ಕೆ** : ಈ ಪ್ರಶ್ನೆ ಬಹು ನಿರ್ಣಾಯಕವಾದ ಮತ್ತು ಮುಖ್ಯವಾದ ಚರ್ಚೆಗೆ ಎಡೆಮಾಡಿಕೊಡುತ್ತದೆ.

ಲೋಕೋ ಭಿನ್ನರುಚಿಃ. ಸಾಹಿತ್ಯಕ ಮತ್ತು ಕಲಾತ್ಮಕ ಸಂವೇದನೆಗಳಲ್ಲಿ ಪರಿಪೂರ್ಣವಾದ ಒಮ್ಮತ ಅಥವಾ ಮೌಲ್ಯಮಾಪನ ಸಾಧ್ಯವಿಲ್ಲವೆಂದೇ ಹೇಳಬೇಕು. ಆ ಮಟ್ಟಕ್ಕೆ ನಿರೀಕ್ಷಿಸುವುದೂ ಸಾಧುವಲ್ಲ. ವಿವಿಧ ಚಿಂತನೆಗಳು, ಧೋರಣೆಗಳು, ಯೋಚನಾಲಹರಿಗಳು, ಭಿನ್ನಾಭಿಪ್ರಾಯಗಳು ಅನಿವಾರ್ಯ. ಏನಿದ್ದರೂ ಮುಕ್ತವಾಗಿ ಚರ್ಚಿಸಿ ತಾರ್ಕಿಕ ಮೌಲ್ಯಗಳ ಆಧಾರದ ಮೇಲೆ ಒಮ್ಮತದ ತೀರ್ಮಾನಗಳಿಗೆ ಬರುವುದೇ ಸಮಿತಿಗಳ ವೈಶಿಷ್ಟ್ಯ. ಹಾಗೆ ಬರಬೇಕು ಕೂಡಾ.

ಸಮಿತಿಗಳ ಕಾರ್ಯನಿರ್ವಹಣೆಯ ಬಗ್ಗೆ ಹೇಳುವಾಗ "ಟ್ವೆಲ್ವ್ ಆ್ಯಂಗ್ರಿ ಮೆನ್" ಎಂಬ ಚಿತ್ರಕ್ಕೆ ಪ್ರಶಸ್ತಿ ನೀಡುವ ಪ್ರಶ್ನೆ ಬಂದಾಗ ಅಂದಿನ ಸಮಿತಿಯು ಅಳವಡಿಸಿಕೊಂಡ ರೀತಿ ನೀತಿಗಳು ಇವತ್ತಿಗೂ ಒಂದು ಉತ್ತಮ ಉದಾಹರಣೆ ಎಂದೆನಿಸುತ್ತದೆ. ಅಪರಾಧಕ್ಕೆ ಗುರಿಯಾಗಿದ್ದ ಒಬ್ಬ ಹುಡುಗನನ್ನು ಹನ್ನೆರಡು ಸದಸ್ಯರಿರುವ ಒಂದು ಜ್ಯೂರಿಯು ನ್ಯಾಯಾಲಯದ ಕಟಕಟೆಯಲ್ಲಿ ನಿಲ್ಲಿಸಿ ವಿಚಾರಣೆಗೆ ಗುರಿಪಡಿಸುವ ಕತೆ ಇದು. ತಮ್ಮದೇ ಆದ ಅಭಿಪ್ರಾಯಗಳ ಆಧಾರದ ಮೇಲೆ ಹನ್ನೊಂದು ಜನ ಸದಸ್ಯರು ಹುಡುಗ ತಪ್ಪಿತಸ್ಥನೆಂಬ ವಾದ ಮುಂದಿಡುತ್ತಾರೆ. ಮಿಕ್ಕೊಬ್ಬ ಸದಸ್ಯ, ಹನ್ನೆರಡನೆಯವನು, ಅವನ ಅಭಿಪ್ರಾಯವೇ ಬೇರೆ. ಇವರೆಲ್ಲರ ವಾದಕ್ಕೆ ವಿರುದ್ಧ. ಆತ ಪಟ್ಟು ಬಿದ್ದು ತನ್ನ ತರ್ಕಬದ್ಧ ವಾದದಿಂದ, ಅಭಿಪ್ರಾಯಗಳಿಂದ ಹುಡುಗನ ಮುಗ್ಧತೆಯ ಬಗ್ಗೆ ಇತರ ಸದಸ್ಯರ ಮನವೊಲಿಸುತ್ತಾನೆ. ಅನಂತರ ಒಮ್ಮತದಿಂದ ಅದೇ ಜ್ಯೂರಿ ಅಪರಾಧಿ ತಪ್ಪಿತಸ್ಥನಲ್ಲವೆಂದು ತೀರ್ಮಾನಿಸುತ್ತದೆ. ಇಲ್ಲಿ ನಾನು ಹೇಳುವುದಿಷ್ಟೆ. ಸಾರ್ವತ್ರಿಕವಾಗಿ ಆಚರಣೆಗೆ ಬಂದಿರುವಂತೆ ಯಾವುದೇ ಜ್ಯೂರಿಯ ತೀರ್ಮಾನ ಒಮ್ಮತದಿಂದರಬೇಕಾದ್ದು ಸಹಜ. ಸದಸ್ಯರು ಮುಕ್ತ ಮನಸ್ಸಿನಿಂದ ತಮ್ಮ ಅಭಿಪ್ರಾಯಗಳನ್ನು ಮಂಡಿಸಬೇಕಾಗುತ್ತದೆ. ಇತರರ ಅಭಿಪ್ರಾಯಗಳನ್ನು ಮಾನ್ಯಮಾಡಿ ಒಮ್ಮತದ ತೀರ್ಮಾನಕ್ಕೆ ಬರುವುದು ಉತ್ತಮ ಸಂಪ್ರದಾಯ. ಜ್ಯೂರಿ ಎನ್ನುವ ಪದವೇ ಒಂದು ರೀತಿಯಲ್ಲಿ ಅರ್ಥಪೂರ್ಣ ಅಲ್ಲವೇ ? ಜ್ಯೂರಿಯ ಕಾರ್ಯ ವಿಧಾನಗಳಲ್ಲಿ ಹಾಗೆ ನಡೆದುಕೊಂಡರೆ ಅದರ ಮೌಲ್ಯ ಹೆಚ್ಚುತ್ತದೆ. ಇಂತಹ ಒಮ್ಮತವನ್ನು ಸಾಧಿಸುವ ಜವಾಬ್ದಾರಿ ಮತ್ತು ಪ್ರಕ್ರಿಯೆ ಆ ಜ್ಯೂರಿಯ ಅಧ್ಯಕ್ಷ ಸ್ಥಾನದಲ್ಲಿರುವ ವ್ಯಕ್ತಿಯ ಪ್ರೌಢಿಮೆ ಮತ್ತು ನೈಪುಣ್ಯಗಳನ್ನು ಹೊಂದಿಕೊಂಡಿರುತ್ತದೆ. ಇಂದಿನವರೆವಿಗೂ ನಾನು ಭಾಗವಹಿಸಿರುವ ಎಲ್ಲ ಜ್ಯೂರಿಗಳಲ್ಲಿನ ನನ್ನ ಅನುಭವ ಇದೇ. ಈಗಿನ ಅಧ್ಯಕ್ಷರೂ ಹಾಗೇ ಮಾಡಬೇಕಿತ್ತು.

**ಹೊ** : ಈ ಇಡೀ ಪ್ರಕ್ರಿಯೆಯಲ್ಲಿ ಸರ್ಕಾರದ ಪಾತ್ರವೇನು ? ಅಥವಾ ನಿಮ್ಮ ಅಭಿಪ್ರಾಯದಲ್ಲಿ ಅದು ಏನಾಗಿರಬೇಕು ?

**ಎಂ.ವಿ.ಕೆ** : ನನ್ನ ಅನಿಸಿಕೆಯಂತೆ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳ ನಲವತ್ತೆಂಟು ವರ್ಷಗಳ ಇತಿಹಾಸದಲ್ಲಿ ಇಂತಹ ಗಂಭೀರವಾದ ಭಿನ್ನಾಭಿಪ್ರಾಯಗಳು ತಲೆಯೆತ್ತುತ್ತಿರುವುದು ಇದೇ ಮೊದಲ ಬಾರಿ. ಸಮಿತಿಯ ಕೆಲವು ಸದಸ್ಯರು ರಾಜೀನಾಮೆ ನೀಡುವುದು, ಇನ್ನು ಕೆಲವರು ತಮ್ಮತಮ್ಮಲ್ಲಿರುವ ಭಿನ್ನಾಭಿಪ್ರಾಯಗಳನ್ನು ಬಹಿರಂಗವಾಗಿ ವ್ಯಕ್ತಪಡಿಸುವುದು, ಇವನ್ನೆಲ್ಲಾ ಗಂಭೀರವಾಗಿ ಪರಿಗಣಿಸಬೇಕಾಗಿದೆ. ಅಲ್ಲದೆ ಇವು ವ್ಯಾಕುಲ, ದಾಂಧಲೆಗಳಿಗೆ ಎಡೆಮಾಡಿಕೊಡುವ ಅಂಶಗಳೂ ಕೂಡ. ಆಯ್ಕೆ ಸಮಿತಿಯ ಕಾರ್ಯವಿಧಾನಗಳಲ್ಲಿ,

ತೀರ್ಮಾನಗಳಲ್ಲಿ, ಅಧಿಕಾರಶಾಹಿ ಅನಾವಶ್ಯಕವಾಗಿ ಅಥವಾ ಉದ್ದೇಶಪೂರ್ವಕವಾಗಿ ಮೂಗು ತೂರಿಸಿ ಕ್ಷುಲ್ಲಕ ರಾಜಕೀಯದಲ್ಲಿ ತೊಡಗಿದ್ದಾರೆನ್ನುವ ಆಪಾದನೆಗಳು ಜವಾಬ್ದಾರಿಯುತ ಮೂಲಗಳಲ್ಲಿ ಚರ್ಚಿತವಾಗುತ್ತಿರುವ ವಿಷಯ. ಇದನ್ನು ಲಘುವಾಗಿ ಪರಿಗಣಿಸಲಾಗದು.

ಹಾಗೆ ನೋಡಿದರೆ ಪ್ರಶಸ್ತಿಗಳನ್ನು ಪ್ರಕಟಿಸುವ ಸಲುವಾಗಿ ಕರೆಯಲಾಗಿದ್ದ ಪತ್ರಿಕಾಗೋಷ್ಠಿಯ ಸಂದರ್ಭದಲ್ಲಿಯೇ ಆ ಬಗ್ಗೆ ತೆಗೆದುಕೊಂಡ ತೀರ್ಮಾನಗಳ ಹಿನ್ನೆಲೆ, ಆಧಾರಗಳು, ಹೀಗೆ ಎಲ್ಲದಕ್ಕೂ ಸಮಂಜಸವಾದ ವಿವರಣೆ ನೀಡಿ ಅವರು ಎದುರಿಸುತ್ತಿರುವ ಆಪಾದನೆಗಳನ್ನು ಆಧಾರಯುತವಾಗಿ ಅಲ್ಲಗಳೆದು ಪ್ರತಿಕ್ರಿಯೆ ವ್ಯಕ್ತಪಡಿಸಬೇಕಾದ್ದು ಅಧ್ಯಕ್ಷರ ಜವಾಬ್ದಾರಿಯಾಗಿತ್ತು. ಈ ನಿಟ್ಟಿನಲ್ಲಿ ಅವರು ಎಡವಿದ್ದಾರೆ. ಇದೊಂದು ಗುರುತರವಾದ ಪ್ರಮಾದವೆಂದೇ ಹೇಳಬೇಕಾಗಿದೆ. ಸಮಿತಿಯ ಸದಸ್ಯರು ತಾವಾಗಿಯೇ ತಮ್ಮ ಸ್ವಂತ ಅಭಿಪ್ರಾಯಗಳನ್ನು ಬಹಿರಂಗವಾಗಿ ಮಾಧ್ಯಮಗಳಲ್ಲಿ ವ್ಯಕ್ತಪಡಿಸಿದ್ದು ಅಕ್ಷಮ್ಯ. ಇದೊಂದು ಅನಾರೋಗ್ಯಕರ ಬೆಳವಣಿಗೆ. ಸಮಿತಿಯ ಎಲ್ಲ ತಪ್ಪು ಒಪ್ಪುಗಳಿಗೂ ಅದರ ಕಾರ್ಯನಿರ್ವಹಣೆಗೆ ಸಂಬಂಧಪಟ್ಟ ಅಧ್ಯಕ್ಷರೊಬ್ಬರೇ ಜವಾಬ್ದಾರರಲ್ಲದೆ, ಅಧಿಕೃತ ವಕ್ತಾರರೂ ಆಗಿರಬೇಕಾಗಿರುವುದು ನ್ಯಾಯಬದ್ಧವಾದ ಕ್ರಮ, ನಿಯಮ. ಇಂದಿನ ಈ ಅರಾಜಕತೆಯಿಂದಾಗಿ ಪ್ರಜ್ಞಾವಂತ ಜನತೆ ತಲೆ ತಗ್ಗಿಸಬೇಕಾಗಿದೆ.

**ಹೊ** : ಪ್ರಸ್ತುತ ಸಂದರ್ಭದಲ್ಲಿ ಪ್ರಶಸ್ತಿಗಳನ್ನು ಪ್ರಕಟಿಸಿದ ನಂತರ ಹಲವು ಟೀಕೆಗಳು, ಆರೋಪಗಳು ಬಂದಿವೆ. ಆಯ್ಕೆಯಲ್ಲಿ ಏನೋ ರಾಜಕೀಯ ನಡೆದಿದೆಯೆಂದೂ ಕೆಲವರು ಹೇಳಿದ್ದಾರೆ. ಆ ಬಗ್ಗೆ ನಿಮ್ಮ ಅಭಿಪ್ರಾಯವೇನು ?



**ಎಂ.ವಿ.ಕೆ** : ಈಗಾಗಲೇ ನಾನು ಹೇಳಿರುವಂತೆ ಸಮಿತಿಯ ವಕ್ತಾರರಾಗಿರುವ ಅಧ್ಯಕ್ಷರ ಉಪೇಕ್ಷೆಯಿಂದ ಉಂಟಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಸರಕಾರ ಎಲ್ಲ ವಿಷಯಗಳನ್ನೂ ಆಮೂಲಾಗ್ರವಾಗಿ ತನಿಖೆಗೆ ಗುರಿಪಡಿಸಬೇಕಾಗಿದೆ. ಈಗಾಗಿರುವ ಅನ್ಯಾಯವನ್ನು ಸರಿಪಡಿಸಬೇಕಾಗಿದೆ. ಜನತೆಗೆ ಸೂಕ್ತ ವಿವರಣೆ ನೀಡಬೇಕಾಗಿದೆ. ಈ ತನ್ನ ಜವಾಬ್ದಾರಿಯಿಂದ ಸರ್ಕಾರ ನುಣುಚಿಕೊಂಡಿದ್ದೇ ಆದರೆ ಮುಂದಿನ ದಿನಗಳಲ್ಲಿ ಇಡೀ ಪ್ರಶಸ್ತಿ ನೀಡುವ ಕ್ರಮ, ವ್ಯವಸ್ಥೆಗಳಲ್ಲಿ ವಿಷಪೂರಿತ ವಾತಾವರಣ ಉಂಟಾಗುವುದರಲ್ಲಿ ಸಂದೇಹವಿಲ್ಲ.

ಈ ದುರದೃಷ್ಟಕರ ಬೆಳವಣಿಗೆಯ ಹಿಂದೆ ಏನೋ ಪಿತೂರಿ ಇದೆ ಎಂದು ಜನಸಾಮಾನ್ಯರು ಭಾವಿಸುವುದಕ್ಕೆ ಸಾಕಷ್ಟು ಪುರಾವೆಗಳು ಇದ್ದಂತಿವೆ. ಸರ್ಕಾರ ಇವೆಲ್ಲಕ್ಕೂ ಹೊರತು ಎಂದೆನಿಸಿಕೊಳ್ಳುವ ನಿಟ್ಟಿನಲ್ಲಿ ಸಂಪೂರ್ಣವಾಗಿ ಸೋತಿದೆ. ಮುಂದೆ ಹೀಗಾಗಕೂಡದು.

ಸಮಿತಿಗಳನ್ನು ರಚಿಸುವುದರಲ್ಲಾಗಲಿ, ಅಂತಹ ಸಮಿತಿಗಳಲ್ಲಿ ಯಾವುದೇ ಪಕ್ಷದ ಸದಸ್ಯರನ್ನು ನೇಮಕ ಮಾಡುವುದರಲ್ಲಾಗಲಿ, ಆಳುವ ಸರ್ಕಾರ ತನ್ನ ಪಕ್ಷದವರನ್ನು ಗೊತ್ತುಪಡಿಸುವ ಹಕ್ಕು ಪ್ರಶ್ನಾತೀತ. ಸದಸ್ಯರಿಗಿರಬೇಕಾದ ಅರ್ಹತೆಗಳ ಬಗ್ಗೆ ಈಗಾಗಲೇ ಹೇಳಿದ್ದೇನೆ. ಇದನ್ನು ಕಡೆಗಣಿಸಿದರೆ ಉಂಟಾಗುವ ಪರಿಣಾಮಗಳು ಖಂಡಿತ ಹಾನಿಕರ. ಸಮಿತಿಯಲ್ಲಿ ತಲೆದೋರುವ ಕೆಳಮಟ್ಟದ ರಾಜಕೀಯ ಸ್ವಜನ ಪಕ್ಷಪಾತ ಮತ್ತಿತರ ಕೆಟ್ಟ ಪ್ರವೃತ್ತಿಗಳ ಬಗ್ಗೆ ಎಚ್ಚರ ವಹಿಸಬೇಕಾಗಿದೆ.

ಇಲ್ಲಿ ಮತ್ತೊಮ್ಮೆ ಒತ್ತಿ ಹೇಳಬೇಕಾದ ವಿಷಯ ವೆಂದರೆ, ಸಂಪೂರ್ಣ ಅಧಿಕಾರವನ್ನು ಹೊಂದಿರುವ ಸಮಿತಿಯ ಅಧ್ಯಕ್ಷರ ಜವಾಬ್ದಾರಿಯೂ ಸಂಪೂರ್ಣವೇ. ಅಲ್ಲದೆ, ಎಲ್ಲ ದೃಷ್ಟಿಯಿಂದಲೂ ಸಮಿತಿಯ ಆಯ್ಕೆ ಅಂತಿಮವೆನ್ನುವುದನ್ನು ನಾವು ನೆನಪಿನಲ್ಲಿಡಬೇಕು.

ಸಮಿತಿಯ ಸಭೆಗಳಲ್ಲಿ ಜರುಗುವ ಚರ್ಚೆಗಳಲ್ಲಿ ತಮ್ಮ ಸ್ವಂತ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸದಸ್ಯರಿಗೆ ಸ್ವಾತಂತ್ರ್ಯವಿದೆ. ಅಲ್ಲಿನ ಚರ್ಚಿತ ವಿಷಯಗಳನ್ನು, ತೀರ್ಮಾನಗಳನ್ನು ಬಹಿರಂಗವಾಗಿ ಚರ್ಚಿಸುವ ಅಧಿಕಾರ, ಹಕ್ಕು ಅವರಿಗಿಲ್ಲ. ಅವು ಗೋಪ್ಯವಾಗಿರಲೇಬೇಕಾಗುತ್ತದೆ.

ಈ ನೀತಿ ನಿಯಮಗಳು ಅಂತರರಾಷ್ಟ್ರೀಯ, ರಾಷ್ಟ್ರೀಯ ಮತ್ತು ಪ್ರಾದೇಶಿಕ ಮಟ್ಟದ ಎಲ್ಲ ಆಯ್ಕೆ ಸಮಿತಿಗಳಿಗೂ ಅನ್ವಯಿಸುತ್ತದೆ. ಇವೆಲ್ಲವೂ ನಿಜ. ಆದರೆ ಒಂದು ಅಂಶವನ್ನಂತೂ ಮರೆಯುವ ಹಾಗಿಲ್ಲ. ಇಂತಹ ಯಾವುದೇ ಸಮಿತಿಯಾದರೂ ಅದರ ಸದಸ್ಯರು ಮೂಲತಃ ನನ್ನ ನಿಮ್ಮಂತೆಯೇ ಮನುಷ್ಯರು. ಇಲ್ಲಿನವರೇ ! ಮೇಲಿಂದ ಬಂದವರಲ್ಲ ! ಅಲ್ಲವೇ ? □□□




> ನ್ಯೂಯಾರ್ಕ್ ವಿಮಾನ ನಿಲ್ದಾಣ ತಲುಪಿದಾಗ ಅಮೆರಿಕಾದ ಪೊಲೀಸರು ನನ್ನನ್ನು ಬಂಧಿಸಿ ಕೈಬೆರಳುಗಳ ಪಡಿಯಚ್ಚು ಹಾಗೂ ಛಾಯಾಚಿತ್ರ ಕೊಡಬೇಕೆಂದು ಕೇಳಿದರು. ಅಂತಹ ಅಪರಾಧ ನಾನೇನು ಮಾಡಿದ್ದೇನೆ ? ಕೊಡಲು ನಿರಾಕರಿಸಿದೆ. ಚಲನಚಿತ್ರೋತ್ಸವಕ್ಕೆ ನನಗೆ ಬಂದಿದ್ದ ಆಹ್ವಾನಪತ್ರ ತೋರಿಸಿದೆ. ನನ್ನನ್ನು ಜೈಲಿಗೆ ತಳ್ಳುವುದಾಗಿ ಬೆದರಿಸಿದರು. ಮಧ್ಯಕಾಲೀನ ಬರ್ಬರತೆಗೆ ಸಮನಾಗಿ ನನ್ನ ಕಾಲುಗಳಿಗೆ ಸರಪಳಿ ಬಿಗಿದು ಒಂದು ಕೊಳಕು ಬೆಂಚಿಗೆ ಕಟ್ಟಿಹಾಕಿದರು.
>
> *- ಇರಾನಿನ ಚಲನಚಿತ್ರ ನಿರ್ದೇಶಕ ಜಾಫರ್ ಪನಾಹಿ*
> (ಏಪ್ರಿಲ್ ೧೫, ೨೦೦೧ರ ಘಟನೆಯ ಬಗೆಗಿನ ಹೇಳಿಕೆಯಿಂದ).

# ಕೊರೆವವರ ಸುಖ ದುಃಖ

**ಮೊ**ದಲೇ ಹೇಳಿಬಿಡುತ್ತೇನೆ ಮಾರಾಯರೆ. ಆಮೇಲೆ ಯಾರಾದರೂ ನನ್ನ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡುವುದು ಬೇಡ. ಕೊರೆಯುವವರು ಎಂದರೆ ನನ್ನ ಹಾಗಿನ ಉಪನ್ಯಾಸಕ ವೃತ್ತಿಯವರು ಎಂದರ್ಥ. ನನ್ನ ಹಾಗಿನ ಎನ್ನುವುದಕ್ಕೆ ಒತ್ತು ಇದೆ. ಏಕೆಂದರೆ ನಾನು ನನ್ನ ವೃತ್ತಿಯನ್ನು ಅಷ್ಟೇನೂ ಸೀರಿಯಸ್ಸಾಗಿ ತೆಗೆದುಕೊಂಡವನಲ್ಲ. ತರಗತಿಯಲ್ಲಿ ಬೋಧನೆ, ಉಪನ್ಯಾಸ ಮಾಡುವುದಕ್ಕಿಂತ ಒಂದು ಗಂಟೆ ಎಂಗೇಜ್ ಮಾಡುವುದೇ ಮುಖ್ಯ ಎಂದು ಭಾವಿಸಿದವನು. ಪ್ರಿನ್ಸಿಪಾಲರು ''ಕ್ಲಾಸ್ ತಗೊಂಡಿದ್ದಿರಾ'' ಎಂದು ಕೇಳಿದರೆ ''ಹ್ಞೂ, ತಗೊಂಡಿದ್ದೆ'' ಎನ್ನುತ್ತಿದ್ದೆ. ಆಗ ಅವರು ಬೆಚ್ಚಿ ಬಿದ್ದು, ''ಈಗಿನ ಕಾಲದ ಯುವಕರೇ ಹೀಗೆ. ಕಾಲೇಜಿನ ಲೆಕ್ಚರರಾಗಿ ಯುಜಿಸಿ ಸ್ಕಾಲರಿ ಪಡ್ಕೊಂಡ್ರೂ ಒಂದಿಷ್ಟೂ ಸೀರಿಯಸ್‌ನೆಸ್ ಇಲ್ಲ'' ಎಂದು ಕೂದಲು ಹಣ್ಣಾದ ಸಹೋದ್ಯೋಗಿಗಳ ಬಳಿ ವಟಗುಟ್ಟುತ್ತಿರುತ್ತಾರೆ. ''ನೀನು ಮೂಲತಃ ಮೈಗಳ್ಳ. ಆದ್ರಿಂದ ನಿಂಗೆ ಲೆಕ್ಚರರ್ ಕೆಲ್ಸ ಸಿಕ್ಕಿದೆ'' ಎಂದು ನನ್ನನ್ನು ಹತ್ತಿರದಿಂದ ಬಲ್ಲ ಹಿರಿಯರೊಬ್ಬರು ನನಗೆ ಕೆಲಸ ಸಿಕ್ಕಿದಾಗ ಪ್ರತಿಕ್ರಿಯೆ ನೀಡಿದ್ದರು. ಅವರು ಹೇಳಿದ್ದರಲ್ಲಿ ಸತ್ಯಾಂಶ ಇಲ್ಲದಿಲ್ಲ. ಹಾಗಾಗಿ ನಾನು ಆರಂಭದಲ್ಲಿಯೇ ಹೇಳಿದಂತೆ ನನ್ನಂತೆ ಇರುವ ಮೈಗಳ್ಳ ಉಪನ್ಯಾಸಕರಿಗೆ ಮಾತ್ರ ಈ ಲೇಖನ ಅನ್ವಯಿಸುತ್ತದೆ.

ಲೆಕ್ಚರರಾಗಿ ನನಗೆ ಕೆಲಸ ಸಿಕ್ಕಿ ಕೈ ತುಂಬ ಸಂಬಳ ಸಿಕ್ಕಿದಾಗ ನಾನು ಬೀಗಿದ್ದೆ. ಲೋಕದಲ್ಲಿ ನನ್ನ ವೃತ್ತಿ ಎಲ್ಲವನ್ನೂ ಮೀರಿಸುವಂಥದ್ದು ಎಂದು ಭಾವಿಸಿದ್ದೆ. ಆದರೆ ನನ್ನ ಎಲ್ಲ ಅಹಂ ಅನ್ನು ನನ್ನ ಮನೆಯ ಪಕ್ಕದ ತರಕಾರಿ-ಹಣ್ಣಿನ ವ್ಯಾಪಾರಿಯು ಭಂಗಗೊಳಿಸಿದ. ನಿರುದ್ಯೋಗಿಯಾಗಿ ತಿರುಗಾಡುತ್ತಿರುವವರೆಗೂ ನಿತ್ಯ ಬೆಳಿಗ್ಗೆ ಸಂಜೆ ''ದಣಿಗಳೇ ನಮಸ್ಕಾರ. ತಿಂಡಿ ಆಯ್ತಾ? ಚಾ ಆಯ್ತಾ?'' ಎಂದೆಲ್ಲಾ ಯೋಗಕ್ಷೇಮ ವಿಚಾರಿಸುತ್ತಿದ್ದ. ಕೆಲಸ ಸಿಕ್ಕಿದ ಮಾರನೆಯ ದಿನ ಸೇಬು ಕೊಳ್ಳಲೆಂದು ಅವನ ಅಂಗಡಿಗೆ ಹೋದೆ. ಪರಿಚಯವೇ ಇಲ್ಲದವನಂತೆ ವರ್ತಿಸಿದ. ಆದರೂ ನಾನು,''ಆ್ಯಪಲ್ಲಿಗೆ ಎಷ್ಟು ?'' ಎಂದೆ. ''ನಿಮಗೆ ಆಗಲಿಕ್ಕಿಲ್ಲ'' ಎಂದ ಮುಖ ಸೊಟ್ಟಗೆ ಮಾಡುತ್ತ.

''ಏನು ಹಾಗಂದ್ರೆ ?''

''ಸ್ವಾಮಿ, ಆ್ಯಪಲ್ ಕೆ. ಜಿ.ಗೆ ಎಪ್ಪತ್ತು ರೂಪಾಯಿ.''

''ಆಗ್ಲಿ ಅದಕ್ಕೇನಂತೆ ? ನಂಗೆ ಯಾಕೆ ಆಗ್ಲಿಕ್ಕಿಲ್ಲಾಂತ ಹೇಳಿದ್ರಿ ?''

''ನೋಡಿ ಸ್ವಾಮಿ.... ಈ ರೇಟೆಲ್ಲ ಬಿಸಿನೆಸ್‌ನವ್ರು, ಡಾಕ್ಟ್ರು, ಇಂಜಿನಿಯರ್ರು, ಲಾಯರ್ರು, ಬ್ಯಾಂಕ್ ಮ್ಯಾನೇಜರ್ರು, ಗೋರ್ಮೆಂಟ್ ಆಫೀಸರ್ರಿಗೆ ಮಾತ್ರ ಅಗ್ಗವಾಗಿ ಕಾಣ್ತದೆ. ನೀವೋ ಲೆಕ್ಚರರ್ರು. ಅದೂ ಕನ್ನಡ ಮೇಷ್ಟ್ರು. ನಿಮ್ಮಂಥವ್ರೆಲ್ಲ ಎರಡ್ರುಪಾಯಿ ಮೂಲಂಗಿ, ಐವತ್ತು ಪೈಸೆ ಕೊತ್ತಂಬರಿ ಸೊಪ್ಪು, ಐದು ರೂಪಾಯಿಗೆ ಚೌಕಾಸಿ ಮಾಡಿ ಎಂಟು ಬಾಳೇಹಣ್ಣು ಇಷ್ಟೇ ತಗೋಳೋದು. ಇದ್ರಿಂದ ಆಚೆಗೆ ನಿಮಗೆ ಕಷ್ಟ ಸ್ವಾಮಿ. ನಿಮಗೆ ಸಂಬಳ ಎಷ್ಟೇ ಬಂದ್ರೂ ಗಿಂಬಳ ಇಲ್ಲ. ನಾವೆಲ್ಲ ಸಣ್ಣವ್ರಿದ್ದಾಗ್ಲಿಂದ್ಲೂ ಕತೆಯಲ್ಲಿ ಕೇಳ್ತಾ ಬಂದದ್ದು ಇದೇ. ಒಂದಾನೊಂದು ಊರಲ್ಲಿ ಒಬ್ಬ ಬಡ ಮಾಸ್ತರರು ಇದ್ರೂಂತ. ಮೂವತ್ತು ವರ್ಷದಿಂದ ಅಂಗಡಿ ಇಟ್ಟಿದ್ದೇನೆ. ನಾನು ಹೇಳಿದ್ದಕ್ಕಿಂತ ಆಚೆಗೆ ಇದುವರೆಗೆ ಒಬ್ಬನೇ ಒಬ್ಬ ಲೆಕ್ಚರರ್ ತರಕಾರಿ ಖರೀದಿ ಮಾಡಿದ್ದಿಲ್ಲ'' ಎಂದು ಕಡ್ಡಿ ಮುರಿದಂತೆ ನುಡಿದ. ಅಂಗಡಿಗೆ ಬಂದಿದ್ದ ಉಳಿದ ಗಿರಾಕಿಗಳು ನನ್ನನ್ನು ನೋಡಿ ಮುಸಿಮುಸಿ ನಕ್ಕರು. ''ಎಲಾ ಇವನ ! ಜೇಬಲ್ಲಿ ನಯಾ ಪೈಸೆ ಇಲ್ಲದಿದ್ದಾಗ ನಿಂತಲ್ಲಿ, ಕೂತಲ್ಲಿ ನಮಸ್ಕಾರ ಹೊಡೆಯುತ್ತಿದ್ದ. ಈಗ ಬಂದ ಸೊಕ್ಕೆ ?'' ಎಂದು ಯೋಚಿಸಿದೆ. ಬುದ್ಧಿ ಕಲಿಸಬೇಕು ಎಂದು ನಿಶ್ಚಯಿಸಿದೆ. ವಿಷಯವನ್ನು ನನಗೆ ಹೈಸ್ಕೂಲಿನಲ್ಲಿ ಕನ್ನಡ ಕಲಿಸಿದ್ದ ಸುಬ್ರಾಯ ಮಾಸ್ತರರಿಗೆ ತಿಳಿಸಿದೆ. ಅವರೀಗ ನಿವೃತ್ತರು. ಆದರೂ ಕನ್ನಡದ ಕುರಿತು, ಕನ್ನಡ ಮೇಷ್ಟ್ರ ಕುರಿತು ಅಪಾರ ಗೌರವ. ನನಗೆ ಕೆಲಸ ಸಿಕ್ಕಿದಾಗ ಹೆಚ್ಚು ಸಂತೋಷಪಟ್ಟವರೆಂದರೆ ಅವರೊಬ್ಬರೆ. ವಿಷಯ ಕೇಳಿದ ಅವರು, ''ಆ ಮುಟ್ಠಾಳನಿಗೆ ಬುದ್ಧಿ ಕಲಿಸುತ್ತೇನೆ'' ಎಂದರು. ಮಾರನೆಯ ದಿನವೇ ಅಂಗಡಿಗೆ ಹೋಗಿ ಸೇಬಿನ ಕ್ರಯ ವಿಚಾರಿಸಿದರು. ಯಥಾಪ್ರಕಾರ ಅವನು ನನಗೆ ಹೇಳಿದಂತೆಯೇ ತಿರಸ್ಕಾರದ ಧ್ವನಿಯಲ್ಲಿ ಹೇಳಿದ. ಜೊತೆಗೆ, ''ನೀವು ರಿಟೈರಾದವರು ಬೇರೆ. ತಿಂಗಳಂತ್ಯಕ್ಕೆ ಗೋಡೆ ಮಾಡು ನೋಡಬೇಕಷ್ಟೆ'' ಎಂದೂ ಸೇರಿಸಿದ. ಪಿತ್ಥ ನೆತ್ತಿಗೇರಿದ ಅವರು, ''ಕನ್ನಡಾಂದ್ರೆ, ಏನೂಂತ ತಿಳ್ಕೊಂಡಿದ್ದೀಯಾ ? ಕನ್ನಡ ಮೇಷ್ಟ್ರೂಂದ್ರೆ ಏನೂಂತ ತಿಳ್ಕೊಂಡಿದ್ದೀಯಾ ? ಪಂಪ ಗೊತ್ತೇನಯ್ಯಾ ನಿಂಗೆ ಪಂಪಾ..ಽಽ'' ಎಂದು ಛತ್ರಿಯ ಮೊನೆಯನ್ನು ತಿವಿಯುವಂತೆ ತೋರಿಸುತ್ತ ಗುಡುಗಿದರು.

ಅವನು ಗಾಬರಿಯಾಗಿ, ''ಪ...ಪ... ನೀರಿನ ಪಂಪು ಕೈ ಪಂಪು ಎಲ್ಲ ಮನೇಲಿ ಉಂಟು ಸ್ವಾಮಿ.... ನೀವು ಹೇಳೋದು ಯಾವ ಪಂಪು ?'' ಎಂದು ತೊದಲಿದ.

''ಅಯೋಗ್ಯ.. ಇದೇ ಗೊತ್ತಿಲ್ಲ, ನೀನು ಓದಿರೋದು ಬರೇ ನಾಲ್ಕನೇ ಕ್ಲಾಸು. ಮಾತೆತ್ತಿದ್ರೆ ನಮ್ಮನ್ನ ಹೀಯಾಳಿಸ್ತಾನೆ. ಪಂಪ, ರನ್ನ, ಜನ್ನ, ಕುಮಾರವ್ಯಾಸ, ಲಕ್ಷ್ಮೀಶ, ಬಸವಣ್ಣ, ರಾಘವಾಂಕ, ಹರಿಹರ, ದಾಸರು ಇವ್ರೆಲ್ಲ ಕನ್ನಡ ಬೆಳೆಸಿದವ್ರಯ್ಯಾ.... ಹೋಗ್ಲಿ ಒಂದೇ ಒಂದು ಕಾರಂತರ ಕಾದಂಬರಿ, ಕುವೆಂಪು-ಬೇಂದ್ರೆಯ ಪದ್ಯ ಏನಾದ್ರೂ ಓದಿದ್ದೀಯಾ ? ಮಾಸ್ತಿಯವರ ಕತೆಗಳಲ್ಲಿ ಒಂದ್ರದ್ದಾದ್ರೂ ಹೆಸರು ಹೇಳ್ತೀಯಾ ?'' ಸುಬ್ರಾಯ ಮಾಸ್ತರ ಪ್ರಶ್ನೆ ಇನ್ನೂ ದಾಳಿ ಇಡಲಿತ್ತು. ಅಷ್ಟರಲ್ಲೇ ಆ ವ್ಯಾಪಾರಿ ಸುಸ್ತಾದ. ''ಇಲ್ಲ ಗುರುಗಳೇ.... ಇಲ್ಲ... ಯಾವ್ದನ್ನೂ ಓದಿಲ್ಲ. ಇನ್ನು ಗಿರಾಕಿಗಳಲ್ಲಿ ಯಾರಾದ್ರೂ, ನಿಮ್ಮಂತೋರು ಬಂದ್ರೆ ಹತ್ತು ಪರ್ಸೆಂಟ್ ಡಿಸ್ಕೌಂಟ್. ದಮ್ಮಯ್ಯ ನನ್ನನ್ನು ಬಿಟ್ಟುಬಿಡಿ'' ಎಂದು ಗೋಗರೆದ. ಅಲ್ಲಿಂದ ನನ್ನನ್ನು ನೋಡಿದರೆ ತಲೆಗೊಂದು ಟವೆಲನ್ನು ಹೊದ್ದುಕೊಂಡು ಕೇಳಿದ್ದನ್ನು ಕೇಳಿದ್ದಷ್ಟಕ್ಕೆ ಕೊಡಲು ಪ್ರಾರಂಭಿಸಿದ.

ಪಿ. ಬಿ. ಪ್ರಸನ್ನ

ಒಂದು ಸಾರಿ ಸಂಬಳವನ್ನು ತರುವುದಕ್ಕೆಂದು ಬ್ಯಾಂಕಿಗೆ ಹೋಗಿದ್ದೆ. ಅಲ್ಲಿಯ ಗುಮಾಸ್ತರರು ನನ್ನನ್ನು ನೋಡಿದವರೆ, ''ಸಾರ್ ಕ್ಲಾಸ್ ಆಯ್ತಾ ?'' ಎಂದರು. ''ಒಂದು ಅವರ್ ಈಗ ಮುಗೀತು. ಇನ್ನೊಂದು ಮಧ್ಯಾಹ್ನ ಮೂರಕ್ಕೆ ಇದೆ'' ಎಂದೆ. ''ದಿನಕ್ಕೆ ಎಷ್ಟು ಗಂಟೆ ಕ್ಲಾಸ್ ತಗೊಳ್ತೀರಿ ?'' ''ಮೂರು ಅಥವಾ ಎರಡು''. ''ಏನೋ ನಿಮ್ದೇ ಛಾನ್ಸ್ ಮಾರಾಯರೆ. ನಮ್ದೋ ನಿತ್ಯ ಒಂದೇ ಗೋಳು. ಕರ್ಮ ಕರ್ಮ'' ಎನ್ನುತ್ತ ಲೆಡ್ಜರನ್ನು 'ನನ್ನ ಪ್ರಾರಬ್ಧವೇ' ಎನ್ನುವಂತೆ ಎಂಟ್ರಿ ಮಾಡಿ ಧಪ್ಪನೆ ಕೆಡೆದ (ಸಾಮಾನ್ಯವಾಗಿ ಬ್ಯಾಂಕುಗಳಲ್ಲಿ ಕ್ಲರ್ಕುಗಳು ಚೆಕ್ಕನ್ನು ಸ್ವೀಕರಿಸಿದ ಬಳಿಕ ಲೆಡ್ಜರನ್ನು ತೆಗೆದು ತಮ್ಮ ಬಳಿ ಇಡುವಾಗೊಮ್ಮೆ, ಎಂಟ್ರಿ ಮಾಡಿ ಹಿರಿಯ ಅಧಿಕಾರಿಯ ಬಳಿ ಪರಿಶೀಲನೆಗೆ ಇಡುವಾಗೊಮ್ಮೆ 'ಅಯ್ಯೋ ನನ್ನ ಪ್ರಾರಬ್ಧವೇ' ಎನ್ನುವಂತೆ ಧೊಪ್ ಎಂದು ಸದ್ದು ಮಾಡುತ್ತಾರೆ. ಪಾಠಕ ಮಹಾಶಯರು ಇದನ್ನು ಗಮನಿಸಿಲ್ಲವಾದರೆ ದಯವಿಟ್ಟು ಇನ್ನು ಮುಂದೆ ಗಮನಿಸಬೇಕೆಂದು ಪ್ರಾರ್ಥನೆ). ಆ ಗುಮಾಸ್ತನಿಗೆ ಸ್ವಲ್ಪ ಪುರುಸೊತ್ತು ಇದ್ದುದರಿಂದ ಅವನನ್ನು ಮಾತಿಗೆ ಎಳೆದೆ. ''ಏನು ಸ್ವಾಮಿ ನೀವು ಹೇಳಿದ ಅರ್ಥ ?'' ಎಂದೆ.

''ಅಲ್ಲ, ಮಾರಾಯ್ರೆ, ನಿಮ್ಗೆ ವರ್ಷದಲ್ಲಿ ನಾಲ್ಕೋ ಐದೋ ತಿಂಗಳು ಕೆಲ್ಸ. ದಿನಕ್ಕೆ ಎರಡೋ ಮೂರೋ ಗಂಟೆ ಡ್ಯೂಟಿ. ಅದೂ ಗೋಡೇ ಮುಖ ನೋಡಿ ಪಾಠ ಮಾಡಿದ್ರೆ ಆಯ್ತು. ಮಕ್ಳು ಇರ್ಲಿ ಬಿಡ್ಲಿ, ಹಾರಾಡ್ಲಿ, ನೀವೇನೂ ತಲೆ ಕೆಡಿಸಿಕೊಳ್ಳೋದಿಲ್ಲ. ಒಂದು ಗಂಟೆ ಕೊರೀತೀರಿ ಬರ್ತೀರಿ. ಅದಕ್ಕೆ ನಿಮ್ದು ಛಾನ್ಸ್ ಅಂದದ್ದು'' ಎಂದ.

ಸುಬ್ರಾಯ ಮಾಸ್ತರರ ತಂತ್ರವನ್ನು ಈಗ ನಾನೇ ಅವನ ಮೇಲೆ ಪ್ರಯೋಗಿಸಿದೆ. ಅವರಂತೆ ಗುಡುಗಲಿಲ್ಲ, ಬದಲು ನಾಜೂಕಾಗಿ. ''ಸಾರ್.... ನಿಮ್ಮ ಕೈಯಲ್ಲಿ ಒಂದು ಗಂಟೆ ಪಾಠ ಮಾಡಲು ಸಾಧ್ಯವೇ ?'' ಎಂದೆ.

''ಓ.... ಅದಕ್ಕೇನು ಪುಸ್ತಕದಲ್ಲಿರೋ ಬದ್ನೇಕಾಯನ್ನ ಓದುತ್ತಾ ಹೋದ್ರೆ ಆಯ್ತು ಅಲ್ವಾ... ?'' (ಎಲಾ ಇವನ, ಮತ್ತೆ ಹಗುರಾತ್ಮಕ ಚಿಂತನೆ !)

''ಸರಿ, ಆದ್ರೆ ಕ್ಲಾಸಲ್ಲಿ ನೂರಿಪ್ಪತ್ತೈದು ವಿದ್ಯಾರ್ಥಿಗಳು. ಪ್ರತಿಯೊಬ್ಬರಿಗೂ ಎರಡೆರಡು ಕಣ್ಣುಗಳು. ಅಂದರೆ ಇನ್ನೂರೈವತ್ತು ಕಣ್ಣುಗಳು ! ಆ ಕಣ್ಣುಗಳು ನಿಮ್ಮನ್ನು ತಿನ್ನುವಂತೆಯೇ ನೋಡುತ್ತಿರುತ್ತವೆ. ಒಂದು ಶಬ್ದ ತಪ್ಪು

ಉಚ್ಚಾರ ಮಾಡಿದರೂ, ಸ್ವಲ್ಪ ಸ್ವರ ಕುಂಯ್ ಎಂದರೂ ಹುಡುಗರಿಂದ . ಕೇಕೆ ನಗು ಹೊಮ್ಮುತ್ತದೆ. ಸಿಳ್ಳೆ ಹೊಡೆಯುತ್ತಾರೆ. ಈಗ ಹೇಳಿ ?'' ಎಂದೆ.

ಈಗ ಅವನು ಕುಳಿತಲ್ಲಿಯೇ ಬೆವರಿದ. ''ಹೌದಾ ಸಾರ್, ಹೀಗೆಲ್ಲಾ ಉಂಟಾ ? ನನಗಂತೂ ಹುಡುಗರ ಸಭೆಯ ಕುರಿತು ನೀವು ಹೇಳುವುದನ್ನು ಕೇಳುವಾಗಲೇ ಗಂಟಲು ಒಣಗುತ್ತಿದೆ'' ಎಂದ. ಹಾಗೆ ಬಾ ದಾರಿಗೆ ಎಂದು ಮನಸ್ಸಲ್ಲಿ ಅಂದುಕೊಳ್ಳುತ್ತ ಹಿಂದಕ್ಕೆ ಹೊರಟೆ.

ಈ ಸಂದರ್ಭದಲ್ಲಿ ನನ್ನ ವೃತ್ತಿಯ ಆರಂಭದ ದಿನಗಳ ಕೆಲವು ಅನುಭವಗಳ ಬಗ್ಗೆ ನಿಮಗೆ ಹೇಳಬೇಕು. ''ಕೊರೆಯುವುದೆಂದರೆ ಬಹಳ ಸುಲಭ'' ಎಂದು ಯೋಚಿಸುವವರು ನಮ್ಮಂಥವರ ಸುಖ ದುಃಖವನ್ನು ಸ್ವಲ್ಪ ಕೇಳಬೇಕು.

ನನ್ನ ಉಪನ್ಯಾಸಕ ವೃತ್ತಿ ಪ್ರಾರಂಭವಾದದ್ದು ನನ್ನ ಊರಿಂದ ಮುನ್ನೂರೈವತ್ತು ಕಿಲೋಮೀಟರ್ ದೂರದ ಬಯಲುಸೀಮೆಯ ಊರೊಂದರಲ್ಲಿ. ಅದು ಒಂದು ಪುಟ್ಟ ತಾಲ್ಲೂಕು ಕೇಂದ್ರ. ಅಚ್ಚುಕಟ್ಟಾಗಿ ಪಾಠ ಮಾಡಿ ವಿದ್ಯಾರ್ಥಿಗಳಿಂದ ಭೇಷ್ ಅನ್ನಿಸಿಕೊಳ್ಳಬೇಕು, ಅವರಲ್ಲಿ ರುವ ಎಲ್ಲ ಸಂದೇಹಗಳಿಗೆ ಉತ್ತರವನ್ನು ನೀಡಬೇಕು, ಎಂದೆಲ್ಲ ಯೋಚಿಸುತ್ತ ಕಾಲೇಜಿಗೆ ಹೋದೆ. ಹೋಗಿ ನೋಡಿದರೆ ಈಗಲೋ ಆಗಲೋ ಬೀಳಲಿಕ್ಕಿರುವ ಒಂದು ಮನೆ. ಅದೇ 'ಸರ್ಕಾರಿ ಪ್ರಥಮ ದರ್ಜೆ ಕಾಲೇಜು !' ಅಲ್ಲಿ ಜ್ಞಾನ ಎನ್ನುವುದು ಮಡುಗಟ್ಟಿ ನಿಂತಿತ್ತು (ಹೇಗೆಂದರೆ ಎಷ್ಟೋ ವರ್ಷಗಳಿಂದ ಅಲ್ಲಿ ಧೂಳು-ಬಲೆ ಹೊಡೆದಿರಲಿಲ್ಲ!) ಕಟ್ಟಡ ಆ ರೀತಿ ಇದ್ದರೂ ವಿದ್ಯಾರ್ಥಿಗಳಿಗೇನೂ ಕೊರತೆ ಇರಲಿಲ್ಲ. ಆಗಲೇ ಅವರಿಗೆ ಇಂದು ಹೊಸ ಕುರಿ ಮರಿ ಬರಲಿದೆ ಎಂಬ ಸುದ್ದಿ ತಲುಪಿತ್ತು. ಆವರೆಗೆ ಕಾಲೇಜಿನತ್ತ ಮುಖ ಹಾಕದಿದ್ದವರೆಲ್ಲ ಅಂದು ಕ್ಲಾಸೊಳಗೆ ಬಂದು ವಿರಾಜಿಸಿದ್ದರು. ಡ್ಯೂಟಿ ರಿಪೋರ್ಟ್ ಮಾಡಿಕೊಂಡ ತಕ್ಷಣ ನಮ್ಮ ಹೆಡ್ಡು ''ಫಸ್ಟ್ ಅವರ್ ಸೆಕೆಂಡ್ ಬಿ. ಎ. ತಗೊಳ್ಳಿ'' ಎಂದು ಹಸಿದ ಮಾರಿಯ ಮಂದೆಗೆ ನನ್ನನ್ನು ತಳ್ಳಿದರು. (ಸಾಮಾನ್ಯವಾಗಿ ಹೆಚ್ಚಿನ ಕಾಲೇಜುಗಳಲ್ಲಿ ಹೊಸದಾಗಿ ಬಂದ ಮೇಷ್ಟ್ರು ಮೇಷ್ಟ್ರಿಣಿಯರನ್ನು ಹಿರಿಯ ತರಗತಿಗಳಿಗೆ ಛೂ ಬಿಡುವುದು ಮಾಮೂಲಿ. ಮೊದಲ ಯತ್ನದಲ್ಲಿ ಆತ ಗೆದ್ದರೆ ಬಚಾವ್. ಇಲ್ಲದಿದ್ದರೆ ಪುಕ್ಕಲನೆಂಬ ಬಿರುದಿಗೆ ಅರ್ಹನಾಗುತ್ತಾನೆ). ಅಂತೂ ತರಗತಿಗೆ ಕಾಲಿರಿಸಿದೆ.

ತರಗತಿ ನೂರ ಹತ್ತು ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿತ್ತು. ''ಹುಷಾರು ಕಣ್ರೀ. ಸ್ಟ್ರಿಕ್ಟಾಗಿರಿ. ಸ್ವಲ್ಪ ಹೆಚ್ಚು ಕಡಿಮೆ ಆದ್ರೂ ಹುಡುಗ್ರು ಯಾಮಾರಿಸ್ತಾರೆ'' ಎಂದೆಲ್ಲ ಹಿರಿಯರ ಎಚ್ಚರಿಕೆಯ ಮಾತುಗಳು ಬೇರೆ ನನ್ನನ್ನು ದಿಕ್ಕುಗೆಡಿಸಿತ್ತು. ಗಂಭೀರ ಮುಖಮುದ್ರೆಯೊಂದಿಗೆ ಬಲ ಗಾಲಿಟ್ಟು ಪ್ರವೇಶಿಸಿದೆ. ರಂಗಸ್ಥಳ ಅಲಿಯಾಸ್ ಪ್ಲಾಟ್ ಫಾರ್ಮ್ ಏರಿದೆ. ಮೇಜಿನ ಮೇಲೆ ಬಾಳೆಹಣ್ಣಿನ ಸಿಪ್ಪೆಯನ್ನು ಇಡಲಾಗಿತ್ತು. ಮೇಜಿನ ಕಾಲನ್ನು ಪ್ಲಾಟ್‌ಫಾರ್ಮಿನ ಅಂಚಿಗೆ ಎಳೆದು ನಿಲ್ಲಿಸಿದ್ದರು. ''ಬೋರ್ಡಿನ ಮುಂದೆ ನಿಂತಿರುವ ಕೋತಿ ಯಾರು ?'' ಎಂಬ ಬರಹವೂ ರಾರಾಜಿಸುತ್ತಿತ್ತು. ಒಮ್ಮೆ ವಿದ್ಯಾರ್ಥಿಗಳನ್ನು ಅವಲೋಕಿಸಿದೆ. ಗಡ್ಡ ಮೀಸೆ ಬೆಳೆದ ಆಜಾನುಬಾಹುಗಳು. ನಾನು ನೋಡಿದ ತಕ್ಷಣ ಗುಜುಗುಜು ನಿಂತಿತು. ''ನನ್ನನ್ನು ಏನೂಂತ ತಿಳ್ಕೊಂಡಿದ್ದೀರಿ ? ನಾನೊಬ್ಬ ದಡ್ಡ ಎಂದು ತಿಳ್ಕೊಂಡಿದ್ದೀರಾ? ಟೇಬಲ್ಲನ್ನು ಪ್ಲಾಟ್‌ಫಾರ್ಮಿನ ಅಂಚಿಗೆ ತಂದಿಟ್ಟು ಕೈ ಊರಿದಾಗ ಕುಸಿದು ಬೀಳಲೀಂತ ಐಡಿಯಾ ಮಾಡಿದ್ದೀರಾ ? ಸ್ವಲ್ಪ ಸಮಯದಲ್ಲಿ ನಾನು ಏನೂಂತ ತೋರಿಸ್ತೇನೆ'' ಎಂದೆಲ್ಲ ಉಗುಳು ನುಂಗುತ್ತ ಬೆವರೊರೆಸಿ ಕೊಳ್ಳುತ್ತ ಒದರಿದೆ. ಶಿಷ್ಯ ಗಣಕ್ಕೆ ಅದು ತಾಗಲೇ ಇಲ್ಲ. ಗುಳುಗುಳು ನಗು ಮುಂದುವರಿಯುತ್ತಲೇ ಇತ್ತು. ಅಂತೂ ಒಂದು ಗಂಟೆ ಕೊರೆದು ಹೊರಬಂದೆ. ಶಿಷ್ಯನೊಬ್ಬ ಬೆನ್ನ ಹಿಂದೆ ಬಂದ. ''ಸಾರ್.... ನೀವೇನೋ ನಮ್ಮನ್ನು ಒಂದು ಕೈ ನೋಡೇ ಬಿಡ್ತೇನಂತ ಅಂದ್ರಿ'' ಎಂದ. ''ಹೌದು ಏನಾಯ್ತೀಗ ?'' ಎಂದೆ. ''ಸಾರ್, ನೀವು ತಪ್ಪು ತಿಳ್ಕೊಳ್ಳಲ್ಲಾಂದ್ರೆ ಒಂದು ಮಾತು. ನೀವು ನಿಮ್ಮ ಪ್ಯಾಂಟಿನ ಜಿಪ್ಪು ಹಾಕೋದನ್ನು ಮರುತ್ತುಬಿಟ್ಟಿದ್ದೀರಿ'' ಎಂದವನೇ ಓಡಿದ. ಆಗ ನನಗೆ ಶಿಷ್ಯಗಣ ನಕ್ಕಿದ್ದೇಕೆಂದು ಸಾಕ್ಷಾತ್ಕಾರವಾಯಿತು.

ನನ್ನ ಜೊತೆಯಲ್ಲಿ ಇನ್ನಿಬ್ಬರು ವೃತ್ತಿ ಜೀವನ ಪ್ರಾರಂಭಿಸಿದ್ದರು. ನಾವೆಲ್ಲಾ ಒಟ್ಟಾಗಿಯೇ ಬಾಡಿಗೆ ಮನೆಯೊಂದರಲ್ಲಿ ಇರುತ್ತಿದ್ದೆವು. ಎಲ್ಲರೂ ಬ್ರಹ್ಮಚಾರಿಗಳು ಬೇರೆ. ಶನಿವಾರ, ಭಾನುವಾರ, ರಜಾದಿನಗಳು ಬಂತೆಂದರೆ ಬೋರು ನಿವಾರಣೆಗೆಂದು ಪೇಟೆ ತಿರುಗಾಡಲು ಹೊರಟರೆ ಅಡಿಗಡಿಗೆ ಶಿಷ್ಯಗಣ. ಉಸಾಬರಿಯೇ ಬೇಡವೆಂದು ಸಿನಿಮಾಕ್ಕೆ ಹೋದೆವು. ನನ್ನ ಮೆಚ್ಚಿನ ನಾಯಕಿ ಇದ್ದ ಸಿನಿಮಾ ಆಗಿತ್ತು ಅದು. ಬಿಳಿ ಸೀರೆಯನ್ನು ಉಟ್ಟು ಮಳೆಯಲ್ಲಿ ತೊಯ್ದು ಅವಳು ಹಾಡಬೇಕಾಗಿತ್ತು. ಹಾಡು ಪ್ರಾರಂಭ ವಾಗಬೇಕು ಎನ್ನುವಷ್ಟರಲ್ಲಿ ಸಂತೋಷ ತಾಳಲಾರದೆ ಶಿಳ್ಳೆ ಹೊಡೆಯಬೇಕೆಂದು ಸಿದ್ಧನಾದೆ. ಅಷ್ಟರಲ್ಲಿ ಮುಂದಿನ ಸಾಲಿನಲ್ಲಿ ಶಿಷ್ಯಗಣವೇ ನೆರೆದಿರುವುದನ್ನು ಕಂಡೆ. ತಣ್ಣೀರೆರೆಚಿದಂತಾಗಿ ಸುಮ್ಮನಾದೆ. ಸಿನಿಮಾ ಮುಗಿಸಿ ಹೊರಬರುವಾಗ ಶಿಷ್ಯನೊಬ್ಬ, ''ಸಾರ್, ನಿಮ್ಮಂಥೋರು ಈ ರೀತಿಯ ಸಿನಿಮಾಕ್ಕೆ ಬರೋದಾ ?'' ಎಂದು ಅಪರಾಧಿಯಂತೆ ನನ್ನನ್ನು ನೋಡುತ್ತ ಕೇಳಿದ.

ನಾವು ಎಂ.ಎ. ಮಾಡುತ್ತಿದ್ದಾಗ ನಮ್ಮ ಮೇಷ್ಟ್ರು ''ನಿಮ್ಮ ನಿಜವಾದ ಪರೀಕ್ಷೆ ಇರೋದು ಮುಂದೆ ನೀವು ಮೇಷ್ಟ್ರಾಗಿ ಕೆಲಸ ಮಾಡೋವಾಗ. ಆಗ ಹಲಬಗೆಯ ಮುಖವಾಡಗಳನ್ನು ಧರಿಸಿಕೊಂಡು ಇರಬೇಕಾಗುತ್ತದೆ'' ಎಂದು ಸೆಂಡಾಫಿನ ದಿನ ಹೇಳಿದ್ದರು. ಅವರು ಹೇಳಿದ್ದು ನೂರಕ್ಕೆ ನೂರು ನಿಜ ಎಂದೆನ್ನಿಸಿದ್ದು ನಾನು ನನ್ನ ವೃತ್ತಿಗೆ ಪ್ರವೇಶ ಮಾಡಿದ ಮೇಲೆ.

ಕುಡಿಯುವುದು ಅಪರಾಧ ಎಂದು ಗೊತ್ತಿದ್ದರೂ ಬಾರ್ ಎಂಡ್ ರೆಸ್ಟೋರೆಂಟ್ ಬೋರ್ಡ್ ಕಂಡಾಗ ಯಾಕೋ ಆಕರ್ಷಣೆ ಉಂಟಾಗುತ್ತದೆ. ರಾತ್ರಿ ಲೇಟಾಗಿ ಪ್ರವೇಶ ಮಾಡಿ ಯಾರೂ ನೋಡುತ್ತಿಲ್ಲ ಎಂದು ಭಾವಿಸಿ ಮೂಲೆಯಲ್ಲಿ ಕುಳಿತರೆ ಮತ್ತೊಂದು ಮೂಲೆಯಿಂದ ಒಂದಷ್ಟು ಶಿಷ್ಯಾಕ್ಷಿಗಳು 'ತೇಲುನೋಟ'ದಿಂದ ನನ್ನನ್ನು ನೋಡುತ್ತಿರುತ್ತವೆ !

ಬ್ರಹ್ಮಚಾರಿಗಳಾಗಿದ್ದಾಗ ನಾವು ಹುಡುಗಿಯರ ಬಳಿ ಪ್ರಶ್ನೆ ಕೇಳುವಂತಿರಲಿಲ್ಲ. ಒಂದೊಮ್ಮೆ ಕೇಳಿದರೆ ಗುಸುಗುಸು ಪ್ರಾರಂಭವಾಗುತ್ತಿತ್ತು. ಆದರೆ ಕೆಲವು ಶಿಷ್ಯೆಯರಿಗೆ ನಮ್ಮನ್ನು ಕಂಡರೇಕೋ ಮೋಹ. ಮೇಲೆ ಬಿದ್ದು ಅವರೇ ಮಾತನಾಡಿಸುತ್ತಿದ್ದರು. ನಮಗೋ ಉಭಯ ಸಂಕಟ. ಮಾತಾಡುವಾಸೆ. ಮಾತಾಡಿದರೆ ಭಯ. ಇನ್ನೇನಾದರೂ ಶಿಷ್ಯೆಯನ್ನು ಪ್ರೀತಿಸಿ ಮದುವೆಯಾದರಂತೂ ಮುಗಿಯಿತು. ಉಳಿದವರ ಬಾಯಿಗೆ ಅವನ ಸುದ್ದಿ ಪಂಚಕಜ್ಜಾಯ ವಾಗುತ್ತದೆ. ರಗಳೆಯೇ ಬೇಡವೆಂದು ಹಿರಿಯರು ನೋಡಿದ ಹೆಣ್ಣನ್ನು ಮದುವೆಯಾದೆ. ಮೊದಲ ಸಾರಿ ತಿರುಗಾಟಕ್ಕೆಂದು ಹೆಂಡತಿಯ ಹೆಗಲ ಮೇಲೆ ಕೈ ಹಾಕಿಕೊಂಡು ಪೇಟೆಯಲ್ಲಿ ತಿರುಗಾಡುತ್ತಿದ್ದೆ (ಎಷ್ಟಾದರೂ ಹೊಸ ಹೆಂಡತಿ ಅಲ್ಲವೇ ?).



ಅಷ್ಟರಲ್ಲಿ ಶಿಷ್ಯರಿಬ್ಬರು ಎದುರಾದರು... ಉಭಯ ಕುಶಲೋಪರಿ ನಡೆಯಿತು. ಒಬ್ಬಾತ, "ಸಾರ್, ಇವ್ರು ನಿಮ್ಮ...." "ನನ್ನ ಹೆಂಡ್ತಿ ಕಣಯ್ಯಾ" "ಓ ಸರಿ ಸಾರ್.... ಇರ್ಲಿ ಇರ್ಲಿ ಪರವಾಗಿಲ್ಲ, ನೀವೂ ಉಪ್ಪು ಹುಳಿ ಖಾರ ತಿನ್ನೋರು. ಛೇಂಜ್ ಇರ್ಲಿ ಸಾರ್" ಎಂದ ಕಿಲಾಡಿ ನಗೆ ಬೀರುತ್ತ. ಕಾವ್ಯ ಮೀಮಾಂಸೆ ಪಾಠ ಮಾಡುತ್ತಿದ್ದರೂ ನನಗೆ ಮಾತಿನ ಧ್ವನಿ ಅರ್ಥವಾಗಬೇಕಾದರೆ ಬಹಳ ಹೊತ್ತು ಬೇಕಾಯಿತು. ಹೀಗೆ ಕಾಲೇಜಿನಲ್ಲಿ ಮೇಷ್ಟ್ರಾಗಿದ್ದು ಅದೇ ಊರಲ್ಲಿ ಇರಲಿ ಬೇರೆಲ್ಲೇ ಇರಲಿ, ಅವರಿಗೆ ಏಕಾಂತ ಎಂಬುದೇ ಇರುವುದಿಲ್ಲ. ಮೂವತ್ತು ನಲ್ವತ್ತು ವರ್ಷ ಮೇಷ್ಟ್ರಾಗಿ ದುಡಿದ ಎಷ್ಟೋ ವ್ಯಕ್ತಿಗಳಿಗೆ ನಾಡಿನ ಮೂಲೆ ಮೂಲೆಯಲ್ಲೂ ಶಿಷ್ಯಂದಿರು ಸಿಗುವುದಿದೆ. ಅವರೊಂದಿಗೆ ಸುಖ ದುಃಖ ಹಂಚಿಕೊಳ್ಳುವಾಗ ಆಗುವ ಆನಂದವೇ ಬೇರೆ. ಆ ಸಂದರ್ಭದಲ್ಲಿ ಅವರು ತಾವು ಶಿಷ್ಯರೆಂದು ವಿನಯಪೂರ್ವಕವಾಗಿ ನೆನಪಿಸುವುದು, ಮೇಷ್ಟ್ರಾಗಿದ್ದವರು ರಿಟೈರಾಗಿದ್ದರೂ ಅವರು ನೆನಪಿಸಿದ ತಕ್ಷಣ ಸೀರಿಯಸ್ ಮುಖವಾಡವನ್ನು ಧರಿಸುವುದು ಇವೆಲ್ಲ ಮಜವಾಗಿ ಕಾಣುತ್ತದೆ. ಕೆಲವು ಬಾರಿ ನಟೋರಿಯಸ್ ಶಿಷ್ಯಂದಿರು, "ಸಾರ್.... ನೀವು ನಂಗೆ ಎಟೆಂಡೆನ್ಸ್ ಕೊಡದೆ ಅವತ್ತು ಹೊರದಬ್ಬಿದ್ರಿ" ಎಂದೋ, "ನಂಗೆ ಎಕ್ಸಾಮಲ್ಲಿ ಕಾಪಿ ಮಾಡೋದಕ್ಕೆ ಬಿಡದೆ ಕರೀಯರ್ ಹಾಳು ಮಾಡಿದ್ರಿ" ಎಂದೋ ನೆನಪಿಸುತ್ತಾರೆ. ಅವರ ಧಾಟಿ ಹೇಗಿರುತ್ತದೆಂದರೆ ಅವತ್ತು ನೀವು ಬಿಟ್ಟಿಲ್ಲ, ಇವತ್ತು ನಿಮ್ಮನ್ನು ನಾನೇ ಒಂದು ಕೈ ನೋಡಿಕೊಳ್ಳುತ್ತೇನೆ ಎಂಬಂತಿರುತ್ತದೆ. ಅವರ ಆಜಾನು ಬಾಹು ಶರೀರ, ಗಡ್ಡ, ಬೆರಳುಗಳಿಗೆ ಹತ್ತು ಉಂಗುರ, ಚಿನ್ನದ ಕಡಗ ಎಲ್ಲ ನೋಡಿದರೆ ಅವರ ಮುಂದೆ ನಾವೇನೂ ಅಲ್ಲ ಎಂದು ತಿಳಿಯುತ್ತದೆ. ನಮ್ಮದು ನರೆತ ಕೂದಲು, ಹರಕು ಚಪ್ಪಲಿ, ಹೊರಬಿಟ್ಟಿರುವ ಶರ್ಟ್, ಕಾಲು ಅಥವಾ ಬೈಸಿಕಲ್ಲನ್ನೇ ಪ್ರಯಾಣಕ್ಕೆ ನಂಬಿದವರು. ಬೆವರೊರೆಸಿ ಕೊಳ್ಳುವ ಸರದಿ ಆಗ ನಮ್ಮದಾಗುತ್ತದೆ.

ಕೆಲವು ವರ್ಷಗಳ ಹಿಂದೆ ಸಂಜೆ ವಾಕಿಂಗು ಹೋಗುತ್ತ ಇದ್ದೆ. ತೆರೆದ ಜೀಪೊಂದು ಭರ್ರನೆ ನನ್ನ ಬಳಿ ಬಂದು ನಿಂತಿತು. "ಸಾರ್, ನಮಸ್ಕಾರ" ಎಂದ ಸವಾರ. "ನಮಸ್ಕಾರ" ಎಂದೆ. "ಪರಿಚಯವಾಗ್ಲಿಲ್ವಾ ? ನಿಮ್ಮ ಸ್ಟೂಡೆಂಟ್, ರಾಜು" ಎಂದ. "ಒಳ್ಳೇದು, ಏನು ಹೇಗಿದ್ದೀ ?" "ಸಾರ್, ನೀವು ಅವತ್ತು ಕ್ಲಾಸಲ್ಲಿ ಸ್ವಾವಲಂಬನೆ ಬಗ್ಗೆ ಹೇಳಿದ್ದು ನನ್ನ ಮೇಲೆ ಬಾಳ ಪರಿಣಾಮ ಬೀರ್ತು ಸಾರ್. ಡಿಗ್ರಿ ಮುಗ್ಸಿದ ತಕ್ಷಣ ಕೋಳಿ ಫಾರ್ಮ್ ಇಟ್ಟೆ. ಬಿಸಿನೆಸ್ ಚೆನ್ನಾಗಿದೆ. ಇವೆಲ್ಲಾ ನಂದೇ ಮೊಟ್ಟೆಗಳು ಸಾರ್ !" ಎಂದು ಜೀಪಿನ ಹಿಂಭಾಗ ತೋರಿಸಿದ.

ನಾವು ಎಂ. ಎ. ಮಾಡುತ್ತಿದ್ದಾಗ ಹಿರಿಯ ಮೇಷ್ಟ್ರೊಬ್ಬರು ನಿತ್ಯವೂ ಪೂರ್ವ ತಯಾರಿಯನ್ನು ಮಾಡಿಕೊಳ್ಳುತ್ತಿದ್ದರು. ನಾವು, "ಸಾರ್.... ಇಷ್ಟು ವರ್ಷದಿಂದ ಪಾಠ ಮಾಡ್ತಾ ಇದ್ರೂ ಇಷ್ಟೆಲ್ಲಾ ತಯಾರಿ ಬೇಕಾ ?" ಎಂದು ಕೇಳುತ್ತಿದ್ದೆವು. ಆಗ ಅವರು "ಇದ್ರ ಬಗ್ಗೆ ಉತ್ತರ ನೀವು ಮೇಷ್ಟ್ರಾದಾಗ ಸಿಗುತ್ತದೆ" ಎನ್ನುತ್ತಿದ್ದರು. ನನ್ನ ಶಿಷ್ಯಗಣಗಳಲ್ಲಿ ಕೆಲವರು ಬುದ್ಧಿವಂತರೂ ಹಾಗೆಯೇ ಕೀಟಲೆ ಪ್ರಿಯರೂ ಹೌದು. ಪಾಠ ಮಾಡುತ್ತ "ಶಾಂತಂ ಪಾಪಂ" ಎಂಬ ಮಾತು ಬಂತು. ಅದರ ಅರ್ಥವನ್ನು ಹಾರಿಸಲು ನೋಡಿದೆ. ಕನ್ನಡದಲ್ಲೇ ಪುಸ್ತಕದ ಬದನೇಕಾಯಿ ಓದಿ ಪಾಸಾದ ನಾನು ದೇವಭಾಷೆಯಲ್ಲಿ ಪೂರ್ತಿ ವೀಕು. ತಕ್ಷಣ ವಿದ್ಯಾರ್ಥಿಯೊಬ್ಬ "ಸಾರ್, ಹಾಗಂದ್ರೇನು ?" ಎಂದ. ತಕ್ಷಣ ಸಾವರಿಸಿಕೊಂಡೆ. ಸುಳ್ಳಿನ ಅಧಿದೇವತೆಯನ್ನು ಸ್ಮರಿಸಿಕೊಂಡೆ. "ಅದು ಸಂಸ್ಕೃತದ ಮಾತು. ಅರ್ಥಗರ್ಭಿತವಾಗಿದೆ. ಸರ್ವತ್ರ ಬಳಸಲ್ಪಡುವಂಥದ್ದು. ಪ್ರೌಢವಾಗಿದೆ" ಎಂದೆಲ್ಲ ಗಂಭೀರವಾಗಿ ನುಡಿದೆ. ಅಷ್ಟರಲ್ಲಿ ಜೀವದಾನ ಮಾಡುವಂತೆ ಪೀರಿಯಡ್ಡು ಮುಗಿದುದರ ಗಂಟೆ ಮೊಳಗಿತು. ಬಿಟ್ಟ ಬಾಣದಂತೆ ಹೊರನಡೆದೆ. "ನೋಡ್ರೋ, ಮೇಷ್ಟ್ರು ಎಷ್ಟು ಸುಲಭವಾಗಿ ಸುಳ್ಳು ಹೇಳಿ ಬಚಾವಾದ್ರು" ಎಂದು ಶಿಷ್ಯರು ಮಾತನಾಡುತ್ತಿದ್ದುದು ಕೇಳಿಸಿತು.

ಹೀಗೆ ನನ್ನ ಹಾಗಿನ ಕೊರೆತ ಬಾಂಧವರು ಹೆಜ್ಜೆ ಹೆಜ್ಜೆಗೆ ಸುಳ್ಳು ಹೇಳುತ್ತ ಮುಖವಾಡ ಧರಿಸುತ್ತ ಬದುಕುತ್ತಿರಬೇಕಾಗುತ್ತದೆ. ನನ್ನಂಥವರನ್ನು ಹೀಯಾಳಿಸುವವರ ಕುರಿತು ಒಂದು ಮಾತನ್ನು ಜೇಡರ ದಾಸಿಮಯ್ಯನ ಕ್ಷಮೆ ಕೋರಿ ಹೇಳಲಿಚ್ಛಿಸುತ್ತೇನೆ. ಅದೇನೆಂದರೆ -

ಕೊರೆಯುವಾತನು ಹಸಿವ
ಕೊರೆಯುವಾತನು ಹುಸಿವ
ಕೊರೆಯುವವ ಕೊರೆಯುವವನೆಂದೆನ್ನ ಜಡಿಯದಿರಾ
ನೀನೂ ಎನ್ನಂತೊಮ್ಮೆ ಕೊರೆದು ನೋಡಾ.

ಪಿ. ಬಿ. ಪ್ರಸನ್ನ
ಎಂ-೫೭೮, ಹುಡ್ಕೋ ಫ್ಲಾಟುಗಳು,
ಶಾರದಾದೇವಿ ನಗರ ಪ್ರಥಮ ಹಂತ, ಮೈಸೂರು-೫೭೦ ೦೨೩

(೨೯ನೇ ಪುಟದಿಂದ)

ಸತ್ತದ್ದು, ಹಗೇದಾಗಿನ ಕಾಳು ನೀರಾಡಿದ್ದು, ಇಲಿಕಾಟಾ, ಹೆಗ್ಗಣ ಹಾವಳಿ, ಮಳಿ ಕೈ ಕೊಟ್ಟದ್ದು, ಬಿತ್ತೀಗಿ ತಲೆತಪ್ಪಿ ಕಾಳು ಜೊಳ್ಳಾಗಿದ್ದು... ಇತ್ಯಾದಿ... ಇತ್ಯಾದಿ.. ಮಾತುಗಳು ಹೊರಟವೆಂದರೆ ಇಳಿಹೊತ್ತಾದಾಗಲೇ ಇವರಿಗೆ ನೆನಪು. ಅವಳಿಗೆ ತಾನು ಹೆಂಗಸು ಅಂತ ನೆನಪಿಲ್ಲ. ಅವನಿಗೆ ತಾನು ಗಂಡಸು ಅಂತ ಧ್ಯಾಸ ಇಲ್ಲ. ಕೊನೆಗೆ ಅವಳ ಸಂತೀಗಂಟು ಈತ ಹೊತ್ತು ಊರು ಮುಟ್ಟಿಸಿದ್ದು... ಇದೆಲ್ಲಾ ... ಕಾಲ್ದಾರಿಯ ಕೊನೆಯಿಲ್ಲದ ನಿರಂತರವಾದ ಜೀವಂತ ಮಹಾಕಾವ್ಯ !

ಈ ದಾರಿಗಳಗುಂಟ ನಮ್ಮ ಹಳ್ಳಿಯಿಂದ ಶ್ರೀಶೈಲಕ್ಕೆ... ಉಳವಿಗೆ... ಪಂಢರಾಪುರಕ್ಕೆ ಪ್ರತಿವರ್ಷ ದಿಂಡಿ ಹೊರಡುತ್ತಿದ್ದವು. ಒಬ್ಬರಿಗೂ ಕಾಲಲ್ಲಿ ಚಪ್ಪಿ ಇಲ್ಲ. ಯಾರೂ ದಾರಿಬುತ್ತಿ ಕಟ್ಟಿಕೊಂಡವರಲ್ಲ. ಮದ್ಯಾಣ ಒಂದು ಹಳ್ಳಿ... ರಾತ್ರಿ ಇನ್ನೊಂದು ಹಳ್ಳಿ.. ಅಲ್ಲಿ ಪುಕ್ಕಟೆ ಪುರಮಾಶಿ ಸಜ್ಜಕ ಹುಗ್ಗಿ-ನುಚ್ಚು- ಸಾರು, ಬೆಳತನಕ ಭಜನಿ, ಮರುದಿನ ಮತ್ತೆ ಪ್ರವಾಸ... ಎಂಥಾ ಸುಖ ! ಊರಿಂದೂರಿಗೆ ಹೋಗುವಾಗ ಹೊಟೇಲ ಇಲ್ಲ... ಪಟ್ಟಣದ ಬಿಡಾಡಿ ಲಾಜಿಂಗ ದನಗಳ ಕಾಟ ಇಲ್ಲ, ಎಲ್ಲಾ ಪುಗಸೆಟ್ಟೆ. ಯಾರು ಬೇಕಾದರೂ ಯಾವೂರಿಗೆ ಬೇಕಾದರೂ ಹೋಗಿ... ಅಲ್ಲಿ ತಮ್ಮ ಊರಿನ ಯಾವುದೋ ಒಂದು ಮನೆಯ ಬೀಗರ-ಬೀಗರ-ಬೀಗರಾಗಿದ್ದ ಮನೆಯೊಂದಕ್ಕೆ ಚೀಟಪಾಟಿ ಇಲ್ಲದೇ ಹೋದರೂ... ಗುಳಿಗಿ ಹುಗ್ಗಿ-ತುಪ್ಪ-ಬ್ಯಾಳಿ ಅನ್ನ-ಸಾರು-ಸ್ಯಂಡಿಗಿ- ಮಲಗಲು ಕಟ್ಟಿಯ ಮೇಲೆ ಕಂಬ್ಳಿ ಗ್ಯಾರಂಟಿ !

ಈ ದಾರಿಗಳು ನಮ್ಮೊಂದಿಗೆ ಮಾತಾಡುತ್ತಿದ್ದವು. ವಿಚಾರ ಹೇಳುತ್ತಿದ್ದವು. ಈ ದಾರಿಗುಂಟ ನಾವು ಗೆಳೆಯರು ಕೈ ಕೈ ಹಿಡಿದುಕೊಂಡು ಹೋದಾಗ ಅಲ್ಲಿ ಏನಿಲ್ಲೆಂದರೂ ಸುಟ್ಟ ಸೇಂಗಾ, ಕಡ್ಲಿಕಾಳು, ಎಳೆ ಸವುತಿಕಾಯಿ, ಪುಟ್ಟಿ ಹಣ್ಣು, ಗಜ್ರಿ, ಕೆಕ್ರಿ ಹಣ್ಣು, ಕವಳಿಕಾಯಿ, ಸಿಕ್ಕೇ ಸಿಗುತ್ತಿದ್ದವು. ಮಾವಿನಕಾಯಿ, ಹುಂಚೀಕಾಯಿಗಳನ್ನು ನಾವು ಕುರುಂ ಕುರುಂ ತಿಂದರೂ ಹುಳಿ ಹತ್ತುತ್ತಿರಲಿಲ್ಲ. ಜೋಳದ ದಂಟನ್ನೇ ನಾವು ದನಾ ತಿಂದಂತೆ ತಿಂದು ಬಿಡುತ್ತಿದ್ದೆವು. ಅದು ನಮಗೆ ಕಬ್ಬಿಗಿಂತಲೂ ಸಿಹಿ !

ನಮಗೆ.... ಯಾವ ದಾರಿಯ ಹುಂಚೀಗಿಡದಲ್ಲಿ ಎಷ್ಟು ದೆವ್ವಗಳಿವೆ.... ಯಾವ ಹಾಳು ಬಾವಿಯಲ್ಲಿ ಯಾವ ಹೆಣ್ಣು ದೆವ್ವಗಳಿವೆ.... ದಾರಿಯ ಯಾವ ತಿರುವಿನಲ್ಲಿ ಎಂಥಾ ಗಂಡು ದೆವ್ವ ಇದೆ.... ಎಲ್ಲಾ ಅಂಕಿಸಂಖ್ಯೆ ಗೊತ್ತು.

ಹೊಂಡದಲ್ಲಿ, ಹಳುವಿನಲ್ಲಿ, ಕಂಟಿಯಲ್ಲಿ ತತ್ತಿ ಹಾಕಿ ಮರಿ ಮಾಡುವ ಜಗತ್ತಿನ ಎಲ್ಲಾ ಹಕ್ಕಿಗಳೂ ನಮ್ಮ ಗೆಳೆಯರು. ಯಾವ ದಾರಿಯ ಹಳುವಿನಲ್ಲಿ ಮೊಲಗಳು ತ್ವಾಳಗಳು ನರಿಗಳು ಸಿಗುತ್ತವೆ ನಮಗೆ ಚೆನ್ನಾಗಿ ಗೊತ್ತು. ನರಿ ತನಗೆ ತಿನ್ನಲು ಬಾರದಂತ ಕಬ್ಬಿನ ಗಣಿಗೆ ಹೊಂಸು ಬಿಟ್ಟು ಸೀಳಿಸಿ ಹೋಗಿದ್ದನ್ನು ನಾವು ತೋರಿಸುತ್ತಿದ್ದೆವು. ಅಷ್ಟೇ ಅಲ್ಲ, ಯಾವ ಯಾವ ದಾರಿಯಲ್ಲಿಯ ಹುತ್ತಗಳಲ್ಲಿ ಯಾವ ಬಣ್ಣದ ಹಾವುಗಳಿವೆ, ಅವುಗಳ ಉದ್ದವೆಷ್ಟು, ಅವುಗಳ ದಪ್ಪವೆಷ್ಟು ನಮಗೆ ಚೆನ್ನಾಗಿ ಗೊತ್ತು.

ನಮಗೆ ಎಲ್ಲಿಯವರೆಗೆ ದಾಖಲೆ ಪತ್ರಗಳಿದ್ದವೆಂದರೆ..... ಯಾವ ಜೋಳದ ಹೊಲದ ಒಳದಾರಿಯಲ್ಲಿ ಯಾವ ಗಂಡು ಎಲ್ಲಿಂದ ಹೋಗುತ್ತದೆ, ಯಾವ ಹೆಣ್ಣು ಯಾವ ಬನ್ನಿಗಿಡದ ಬುಡದಿಂದ ಡೊಗ್ಗಿ ಹೋಗುತ್ತದೆ, ಮುಂದೆ ಅವರಿಬ್ಬರ ಮಧ್ಯೆ ಏನೇನು ನಡೆಯುತ್ತದೆ.... ಇತ್ಯಾದಿ ಸುದ್ದಿ ಸಮಾಚಾರವೆಲ್ಲಾ ಪ್ರತ್ಯಕ್ಷ ಗೊತ್ತು !

ಗಂಗಾ ತೀರದಿಂದ ತುಂಗಾ ತೀರದವರೆಗೆ, ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ, ಭಾರತ-ಟಿಬೇಟ-ಚೀನಾ, ಬ್ರಹ್ಮದೇಶ-ಅರಬಸ್ಥಾನ, ತುರ್ಕಸ್ಥಾನ ಎಲ್ಲೆಂದರಲ್ಲಿಗೆ ನಮ್ಮ ದಾರಿಗಳಿಗೆ ಅಡ್ಡಗೋಡೆಗಳಿಲ್ಲ, ಇವು ಮಾನವತೆಯ ದಾರಿಗಳು; ಮನುಷ್ಯರ ದಾರಿಗಳಲ್ಲ !

ಶಿವಪಥವನರಿವೊಡೆ ಗುರುಪಥವೇ ಮೊದಲು.... ಎಂಬಂತೆ.... ಈ ಗುರುವಿನ ದಾರಿಗಳೇ ಶಿವನ ಅರುಹಿನ ದಾರಿಗಳೆಂದು ನಮ್ಮವರು ಸಹಜವಾಗಿ ನಂಬಿದ್ದರು !

ನಾವೂ ಕೂಡ .....

ಆದರೆ ಈಗ ?

ಪ್ರೊ|| ಜಿ. ಎಚ್. ಹನ್ನೆರಡುಮಠ
ಯೋಗಭವನ : ಇಂದ್ರಪ್ರಸ್ಥ, ನ್ಯಾಷನಲ್ ಪಾರ್ಕ್ ರಸ್ತೆ, ಗೊಟ್ಟಿಗೆರೆ ಅಂಚೆ, ಬೆಂಗಳೂರು - ೫೬೦ [illegible]

# ಮಹಾಕಾವ್ಯಗಳು ಮರುಚಿಂತನೆ

**ಡಾ|| ಜಿ. ಪ್ರಶಾಂತ ನಾಯಕ**

ರಾಮಾಯಣ, ಮಹಾಭಾರತಗಳನ್ನು ಈ ದೇಶದ ಎರಡು ಮಹಾಕಾವ್ಯಗಳೆಂದು ಒಪ್ಪಿಕೊಂಡಿರುವುದು ಹಳೆಯ ಸಂಗತಿ. ಒಂದು ಹಂತದಲ್ಲಿ ಅವುಗಳನ್ನು ಈ ದೇಶದ ಸಾಂಸ್ಕೃತಿಕ ಪರಿಭಾಷೆಗಳೆಂದೇ ಭಾವಿಸಿಕೊಂಡದ್ದು ಉಂಟು.

ಆದರೆ ಸಂಸ್ಕೃತಿಯ ವ್ಯಾಖ್ಯಾನವನ್ನು ಪುನರ್ ಪರಿಶೀಲಿಸಬೇಕಾದ ಅನಿವಾರ್ಯ ಇರುವಲ್ಲಿ ಈ ಕಾವ್ಯಗಳನ್ನು ಕೇವಲ ಸಾಂಸ್ಕೃತಿಕ ಎಂಬ ವರ್ತುಲದಲ್ಲಿ ನೋಡಿ ಬಿಡುವುದು ಅಪಾಯಕಾರಿಯೂ ಹೌದು. ವರ್ಣಾಶ್ರಮ ಧರ್ಮಗಳ ಅವೈಜ್ಞಾನಿಕ ಗ್ರಹಿಕೆಯ ಹಿನ್ನೆಲೆಯಲ್ಲಿ ಈ ದೇಶದ ಬಹುಪಾಲು ಕಾವ್ಯಗಳು ಸೃಷ್ಟಿಗೊಂಡದ್ದು ಹಾಗೂ ಅವುಗಳನ್ನು ಸತ್ಯವೆಂದು ಪ್ರತಿಪಾದಿಸುತ್ತಾ ಬಂದ ಒಂದು ವ್ಯವಸ್ಥಿತ ಸಮಾಜವೇ ಈ ನೆಲದಲ್ಲಿ ರೂಪುಗೊಂಡದ್ದು ದುರಂತವೆಂದೇ ಭಾವಿಸಬಹುದು.

ನಿಜವಾದ ಅಸ್ಪಷ್ಟತೆಗಳು ಕಾಣಿಸಿಕೊಳ್ಳುವುದೇ ಇಲ್ಲಿ. ದೇವರು, ಧರ್ಮ, ಪೂಜೆ, ಯಾಗ ಹೀಗೆ ಹತ್ತು ಹಲವು ಅತಾರ್ಕಿಕವಾದ ಕಾರಣಗಳನ್ನು ಸೃಷ್ಟಿಸುತ್ತಲೇ ತನ್ಮೂಲಕ ದೇವರು, ಧರ್ಮಗಳ ವಿಚಾರದಲ್ಲಿ ಅಂತರವನ್ನು, ಭಯವನ್ನು ಸೃಷ್ಟಿ ಮಾಡುತ್ತಾ ಬಂದ ಒಂದು ಸಮುದಾಯ ಅಥವಾ ಸಮಾಜ, ಆ ಕಾರಣದಿಂದಲೇ ಈ ದೇಶದ ಬಹುಪಾಲು ಜನರನ್ನು ಕತ್ತಲೆಗೂ ಅದರೊಂದಿಗೆ ಮೌಢ್ಯಕ್ಕೂ, ಅಜ್ಞಾನಕ್ಕೂ ದೂಡುತ್ತಾ ತಮ್ಮನ್ನು ಎಲ್ಲ ಜ್ಞಾನಗಳ ಮತ್ತು ಎಲ್ಲ ಒಳಿತುಗಳ ಹರಿಕಾರರನ್ನಾಗಿ ಪ್ರತಿಷ್ಠಾಪಿಸಿಕೊಳ್ಳುವ ಪ್ರಯತ್ನ ನಡೆಸಿತ್ತು. ಹಾಗಾಗಿಯೂ ಈ ದೇಶದ ಬಹಳಷ್ಟು ಕಾವ್ಯಗಳು, ಕಾವ್ಯದ ನಾಯಕರು ಎಲ್ಲವೂ ಮತ್ತೊಮ್ಮೆ ಅವರದ್ದೇ ನಕಲುಗಳೇ ಆಗಿದ್ದವು. ಆದ್ದರಿಂದಲೂ ಮಹಾಕಾವ್ಯಗಳು ಒಂದು ಅರ್ಥದಲ್ಲಿ ಸಾಂಸ್ಕೃತಿಕ ಮತ್ತು ದೈವಿಕವಾದ ಬಣ್ಣವನ್ನು ಹಚ್ಚಿಕೊಳ್ಳಲು ಪ್ರಯತ್ನಿಸಿದವು. ಕವಿಯನ್ನು ಋಷಿ ಎಂದೆಲ್ಲಾ ಭಾವಿಸಿಕೊಂಡ ಈ ನೆಲ ಅವನನ್ನು ಜ್ಞಾನಿ ಎಂಬಷ್ಟಕ್ಕೆ ನೋಡಿದ್ದರೆ ಈ ದೇಶದ ಕಾವ್ಯ ಚರಿತ್ರೆಯೇ ಸಂಪೂರ್ಣವಾಗಿ ಬದಲಾಗಿಬಿಡುತ್ತಿತ್ತು. ಅಂತಲ್ಲಿ ಪಾತ್ರಗಳು ನಿರ್ದಿಷ್ಟವಾಗಿ ಇಂಥದೇ ವರ್ಣ-ವರ್ಗ-ಜಾತಿ ಎಂಬ ಭ್ರಮೆಗಳಾಚೆಗೆ ವರ್ತಿಸಿದ್ದರೂ, ಕಾವ್ಯ ಪರಂಪರೆಯ ಮೌಲ್ಯವೇ ಬೇರೆಯಾಗುತ್ತಿತ್ತು. ರಾಮಾಯಣವನ್ನಾಗಲಿ, ಮಹಾಭಾರತವನ್ನಾಗಲಿ ಹೀಗೆ ಧರ್ಮ ಮತ್ತು ಜಾತಿಯ ಅಹಂಗಳಿಂದಾಚೆಗೆ, ಕೇವಲ ಮಾನವೀಯ ಎನ್ನುವಷ್ಟರಲ್ಲೇ ಗ್ರಹಿಸಿ, ಚಿಂತಿಸಿ, ಚಿತ್ರಿಸಿ, ಅರ್ಥೈಸಿದ್ದರೂ ಅದರಿಂದ ಲಭ್ಯವಾಗುವ ಫಲಿತಗಳೇ ಬೇರೆಯಾಗಿರುತ್ತಿತ್ತು. ಎರಡೂ ಕಾವ್ಯಗಳಲ್ಲಿ ಈ ದೇಶದ ಜನರ ಸಮಗ್ರ ಬದುಕಿನ ವ್ಯಾಖ್ಯಾನಗಳಿವೆ. ಆದರೆ ಅವು ಕಾಲಿಕ ಅಂತರಗಳಲ್ಲಿ ದಾಖಲಿಸಿಕೊಳ್ಳಬೇಕಾದ ಬದಲಾವಣೆಗಳಿಗೂ ಅನಿವಾರ್ಯವಾಗಿ ಒಗ್ಗಿಕೊಳ್ಳುವ ಪ್ರಯತ್ನವನ್ನು ಮಾಡಿವೆ. ಒಂದು ಸೃಜನಶೀಲ ಹಾಗೂ ಕ್ರಿಯಾಶೀಲ ಕಾವ್ಯ ವರ್ತಿಸಬೇಕಾದುದು ಹೀಗೆಯೇ.

ರಾಮನಿಂದ, ರಾಮನಿಗಾಗಿ, ರಾಮನೇ ಎನ್ನುವ ನೆಲೆಯೊಳಗೆ ಬಿಚ್ಚಿಕೊಳ್ಳುವ ಕಾವ್ಯವನ್ನು ಜನಸಾಮಾನ್ಯನೊಬ್ಬನ ಸಹಜ ಬದುಕಿಗೆ ಆರೋಪಿಸಿ ನೋಡುವಲ್ಲಿ ಅವನ ಬದುಕು ರಾಮನಿಗಿಂತ ಭಿನ್ನವಾಗುವ ಅಗತ್ಯವಿಲ್ಲ. ಬಾಲ್ಯ, ಯೌವ್ವನ, ಕುಟುಂಬ ಬಾಂಧವ್ಯ, ಸಂಬಂಧ, ಆಮಿಷ, ಹೋರಾಟ, ತಾತ್ವಿಕತೆ ಹೀಗೆ ಎಲ್ಲವನ್ನೂ ಪಾತ್ರಗಳು ಸ್ವಭಾವಗಳಾಗಿಯೇ ಬಿಚ್ಚಿಡುತ್ತವೆ. ರಾಮಾಯಣ ಇಂತಹ ಗುಣಗಳಿಂದ ವ್ಯಕ್ತಿಗತ ನೆಲೆಯಲ್ಲಿ ವ್ಯಷ್ಟಿ ಕಾವ್ಯವಾಗುತ್ತದೆ. ಪ್ರತಿಯೊಂದು ಪಾತ್ರವೂ ತಾನು ಎನ್ನುವ ನೆಲೆಯಲ್ಲೇ ಬಿಚ್ಚಿಕೊಳ್ಳುತ್ತಾ ಸಮಗ್ರತೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತದೆ. ಮನುಷ್ಯನ ಸ್ವಯಂ ಶಕ್ತಿ ಮತ್ತು ಅನಿವಾರ್ಯತೆಗಳ ಪ್ರತಿಪಾದನೆ ಇಲ್ಲಿ ಪ್ರಧಾನ. ಹೀಗೆ ನೋಡಬೇಕಾದ ಕಾವ್ಯ ಕ್ಷತ್ರಿಯತ್ವ ಅಥವಾ ಪುರೋಹಿತ ಪರಂಪರೆಯಲ್ಲಿ ಮುಳುಗಿಹೋಗಿಬಿಡುವುದೇ ದುರಂತ. ರಾಮಾಯಣದ ಪರಿಪೂರ್ಣತೆ ಇರುವುದು ರಾವಣ-ವಿಭೀಷಣರ ಪಾತ್ರ ಸೃಷ್ಟಿಯಲ್ಲಿ ಮತ್ತು ವಾನರರ ಹೋರಾಟದಲ್ಲಿ. ದಾನವತೆ, ವಾನರತೆ, ಮಾನವತೆ ಎಲ್ಲವೂ ಸಮೂಹ ಬದುಕಿನ ಪ್ರತಿಬಿಂಬಗಳು. ರಾಮ ಲಕ್ಷ್ಮಣ ಸೀತೆಯೇ ಮೊದಲಾದ ಪಾತ್ರಗಳು ಮೌಲ್ಯದ ಕಾರಣದಿಂದ ಕಾವ್ಯದ ಮೊದಲ ಹಂತದಲ್ಲಿ ಚಲಿಸಿದರೂ ಅವುಗಳ ಬದುಕು ಈ ಸಮುದಾಯಕ್ಕಿಂತ ಭಿನ್ನವಾಗಬೇಕಿಲ್ಲ. ಇಲ್ಲವಾದರೆ ಈ ದೇಶದ ಸಾಮಾನ್ಯನೊಬ್ಬನಿಗೂ ರಾಮಾಯಣದಂತಹ ಪಾತ್ರಗಳು ಮಾದರಿಯ ಮೌಲ್ಯವಾಗಿ ಉಳಿಯಬೇಕಿರಲಿಲ್ಲ. ಇಂತಲ್ಲಿ ಬದುಕನ್ನು ಗ್ರಹಿಸುವ ಈ ನೆಲದ ಸಾಮಾನ್ಯ ಮನುಷ್ಯ ಧರ್ಮವನ್ನು ಬದುಕಿಗಿಂತಲೂ ಗಾಢವಾಗಿ ಪ್ರೀತಿಸುವುದಿಲ್ಲ. ಹಾಗಲ್ಲವೆಂದುಕೊಂಡರೆ ಅದು ಭ್ರಮೆಯೇ ವಿನಃ ಬೇರಲ್ಲ. ಈ ಸತ್ಯ ರಾಮಾಯಣ ಸೃಷ್ಟಿಯ ಕಾಲಕ್ಕೆ ಸ್ಪಷ್ಟವಾಗಿದೆ. ಆದ್ದರಿಂದಲೇ ಮಹಾಭಾರತದಂತಹ ಮತ್ತೊಂದು ಭವ್ಯ ಮಹಾಕಾವ್ಯ ರೂಪುಗೊಳ್ಳುವುದು ಸಾಧ್ಯವಾಗುತ್ತದೆ. ಬದುಕಿನ ಏಕಮುಖ ಚಲನೆಯಿಂದ ಹಿಡಿದು, ಮಹಿಳೆ ಮತ್ತು ವಿದ್ಯೆ ಹೀಗೆ ಎಲ್ಲಾ ಪರಂಪರಾಗತ ಮೌಲ್ಯಗಳ ಸಂಚಲನ ಸಾಧ್ಯವಾಗಿ ಎಲ್ಲವೂ ಸರಳವಾಗಬೇಕಾದ ಮತ್ತು ಮುಖ್ಯವಾಗಿ ಕ್ರೋಢಿಕೃತಗೊಳ್ಳಬೇಕಾದ ಸಾಧ್ಯತೆಯು ಮಹಾಭಾರತದಲ್ಲಿ ಕಾಣಿಸಿಕೊಳ್ಳುತ್ತದೆ. ಕರ್ಣ ಸೂತಪುತ್ರನಾಗುವುದು, ಕೃಷ್ಣ ಸಹಜವಾಗಿ ಸಾಯುವುದು ಇಂಥದ್ದೇ ಹತ್ತು ಹಲವು ಘಟನೆಗಳು ಈ ಮಾತಿಗೆ ಪ್ರೇರಕವಾಗಬಲ್ಲವು.




ದೇವರುಗಳನ್ನು ಕುರಿತ ಪುರಾಣಗಳು ನಮ್ಮಲ್ಲಿ ಸಾಕಷ್ಟು ಇದ್ದರೂ ಅವುಗಳ ಪರಂಪರೆಯನ್ನು ಮಹಾಕಾವ್ಯವನ್ನಾಗಿ ನೋಡುವ ಪ್ರಯತ್ನ ನಮ್ಮಲ್ಲಿ ಇಲ್ಲ. ಅವುಗಳನ್ನು ಅಗತ್ಯಕ್ಕೆ ಅನುಗುಣವಾಗಿ ರಾಮಾಯಣ ಮಹಾಭಾರತಗಳಲ್ಲೇ ಸಿಂಹಾವಲೋಕನ ಕ್ರಮದಲ್ಲಿ ಪರಿಶೀಲನೆ ಮಾಡುವ ಪ್ರಯತ್ನ ನಡೆದಿದೆ. ಹಾಗೆ ದೇವರ ಪಾತ್ರಗಳನ್ನು ಭೂಲೋಕಕ್ಕೆ ಕರೆತಂದು ಅವುಗಳನ್ನು ಸಾಮಾನ್ಯ ಮಾನವರನ್ನಾಗಿಸಿ ಬದುಕಿನೊಳಗೆ ಅವರನ್ನು ಪರಿಪಕ್ವಗೊಳಿಸಿ ಆ ಉದಾಹರಣೆಗಳೊಂದಿಗೆ ಈ ನೆಲದ ಬದುಕುಗಳಿಗೆಲ್ಲ ಮಾರ್ಗದರ್ಶನ ನೀಡುವ ಪ್ರಯತ್ನವೇ ಪ್ರಧಾನವಾಗಿ ಕಾಣಿಸುತ್ತದೆ. ಎಲ್ಲಕ್ಕೂ ಮಿಗಿಲಾಗಿ ಸೃಷ್ಟಿ ಕರ್ತನೊಬ್ಬನಿದ್ದಾನೆ ಎನ್ನುವ ನಂಬಿಕೆಯನ್ನು ಹುಟ್ಟಿಸುತ್ತಲೇ ಮನುಷ್ಯ ಜನ್ಮ ದೊಡ್ಡದು, ಇರುವ ಕಾಲದಲ್ಲಿ ಸಾರ್ಥಕ ಜೀವನವನ್ನು ನಡೆಸಬೇಕು ಎನ್ನುತ್ತಾ ಬದುಕಿಗೆ ಹೋರಾಟವನ್ನು ಪ್ರಚೋದಿಸುವ ಪ್ರಯತ್ನವೇ ದೇಶದ ಮಹಾಕಾವ್ಯಗಳ ಪ್ರಧಾನ ಆಶಯವಾಗಿದೆ.

ದಿನದಿಂದ ದಿನಕ್ಕೆ ನಾಗರಿಕತೆಯ ಹೆಸರಿನಲ್ಲಿ, ವಿಜ್ಞಾನದ ಆವಿಷ್ಕಾರದಲ್ಲಿ ಜಗತ್ತನ್ನೆ ಕಿರಿದುಗೊಳಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಇವೆಲ್ಲಕ್ಕೂ ಮೂಲವಾದ ಬದುಕು ದೊಡ್ಡದೆನ್ನುವ ನಂಬಿಕೆಯನ್ನು ಉಳಿಸಿಕೊಳ್ಳುವಲ್ಲಿ ಇಂತಹ ಮಹಾಕಾವ್ಯಗಳ ಪರಿಶೀಲನೆಯನ್ನಾಗಲಿ ಅಥವಾ ಮರು ಚಿಂತನೆಯನ್ನಾಗಲಿ ಅಲ್ಲಗಳೆಯಬೇಕಿಲ್ಲ.

ಸಾಹಿತ್ಯವೆಂದರೆ ಅದು ಜೀವನದ ಪ್ರತಿಬಿಂಬ ಎನ್ನುವ ಸಾಮಾನ್ಯ ತರ್ಕದ ಕಾರಣದಿಂದಲೂ ಅಂತಹ ಬಹಳಷ್ಟು ಶ್ರೇಷ್ಠವಾದ ಕಾವ್ಯಗಳನ್ನು ಗಮನಿಸಬೇಕಾದ ಅಗತ್ಯವಿದೆ. ವಿಶ್ವದ ಸಂದರ್ಭದಲ್ಲಿಯೇ ಜೀವನವನ್ನು ಕುರಿತಾದ ಭಾರತೀಯರ ವಿಶಿಷ್ಟ ಮತ್ತು ವಿಭಿನ್ನ ಮನೋಧರ್ಮವನ್ನು

ಇಲ್ಲಿ ನಾವು ಪರಿಗಣಿಸಲೇಬೇಕು. ಹೀಗೆ ಒಂದು ಜೀವನಕ್ರಮದ ಚಿಂತನೆ ಕಾಡುವಾಗೆಲ್ಲ ನಿನ್ನೆಗಳು ನೆನಪಾಗುವುದು ಸಹಜ. ಆ ನೆಪದಲ್ಲೇ ಈ ದೇಶದ ಮಹಾಕಾವ್ಯಗಳನ್ನೊಮ್ಮೆ ಅವಲೋಕಿಸುವ ಅಗತ್ಯತೆ ಎಲ್ಲಾ ಕಾಲದಲ್ಲಿಯೂ ಆ ಕಾಲಗಳ ಅಗತ್ಯಕ್ಕೆ ತಕ್ಕಂತೆಯೇ ಚಿಂತಿಸಲ್ಪಡುತ್ತದೆ. ಬಹುಮುಖಿಯಾದ ಜೀವನವನ್ನು ಹತ್ತು ಹಲವು ನೆಲೆಗಳಿಂದ, ಜೀವಿಗಳಿಂದ ನೋಡುವಾಗ ಒಂದಲ್ಲ ಒಂದು ಕಾರಣಕ್ಕೆ ನಮ್ಮ ಆ ನಿನ್ನೆಯ ಮಹಾಕಾವ್ಯಗಳ ಪಾತ್ರಗಳೇ ಒಂದಲ್ಲ ಒಂದು ವಿಧದಲ್ಲಿ ನಮ್ಮನ್ನು ಪ್ರತಿನಿಧಿಸತೊಡಗುತ್ತವೆ.

ಮನುಜ ಮತ ವಿಶ್ವಪಥವಾಗಲೆನ್ನುವ ಹಾರೈಕೆ ಒಂದೆಡೆ, ರಾಮ-ಕೃಷ್ಣರ ಹೆಸರಿನಲ್ಲಿ ಸನಾತನವನ್ನು ಉಳಿಸುವ ಮತೀಯತೆ ಮತ್ತೊಂದೆಡೆ. ಈ ನಡುವೆಯೇ ನಾಗರಿಕತೆಯ ಲವಲೇಶದ ಸೋಂಕು ಇಲ್ಲದ ಅದೆಷ್ಟೋ ಜನಾಂಗಗಳು ಬುಡಕಟ್ಟಿನಲ್ಲೋ, ಬಡತನದಲ್ಲೋ, ಕೊಳಚೆ ಪ್ರದೇಶದ ಅಸ್ತಿತ್ವದಲ್ಲೋ ನರಳುವುದು ನಿರಂತರವಾಗಿ ನಡೆದಿದೆ. ಈ ಜೊತೆಗೆ ಚಿಂತನೆ ಮರುಚಿಂತನೆಗಳ ಹೆಸರಿನಲ್ಲಿ ವೇದಿಕೆಗಳ ಮೇಲಿಂದ ಸಂಸ್ಕೃತಿ-ಉಪಸಂಸ್ಕೃತಿಗಳ ಹೊಸ ವ್ಯಾಖ್ಯಾನದ ತಾಕಲಾಟಗಳು ನಡೆದಿವೆ. ರಾಮ-ಕೃಷ್ಣರನ್ನು, ಮಹಾಕಾವ್ಯದ ಪಾತ್ರಗಳನ್ನು ನಮ್ಮದೇ ಆಸ್ತಿ ಎಂದು ಗುತ್ತಿಗೆ ಹಿಡಿಯುವ ಪ್ರಯತ್ನ ಒಂದೆಡೆಯಾದರೆ, ನಮ್ಮ ಪಾತ್ರಗಳಿಗೆ ಮೋಸವಾಗಿದೆ, ಶೋಷಣೆಯಾಗಿದೆ ಎನ್ನುವ ಬಂಡಾಯದ ಧ್ವನಿಗಳು ಮತ್ತೊಂದೆಡೆ. ಹಿಡಿಯಾಗಿ ನಿನ್ನೆಗಳನ್ನು ನೆಪ ಮಾಡಿಕೊಂಡೇ ಸಮರ್ಥಿಸುವುದಾಗಲಿ, ಪ್ರತಿಭಟಿಸುವುದಾಗಲಿ – ಈ ಹೊತ್ತಿನ ಬದುಕಿಗೆ ಎಳ್ಳಷ್ಟು ಲಾಭವನ್ನೂ ಒದಗಿಸುವುದಿಲ್ಲ. ಬದಲಿಗೆ ಈಗಾಗಲೇ ಮನುಷ್ಯ - ಮನುಷ್ಯರ ನಡುವೆ ಇರುವ ಕಂದರವನ್ನು ಆಳವಾಗಿಸಬಹುದು. ಆದ್ದರಿಂದಲೇ ನಿನ್ನೆಗಳನ್ನು ಒಪ್ಪಿಕೊಂಡ ನಾವು ಬದುಕನ್ನು ಗೌರವಿಸಬೇಕು. ಆದರೆ ಅದರಲ್ಲಿ ನಿರಂತರ ಎಚ್ಚರವಿರಬೇಕು. ರಾಮನನ್ನಾಗಲಿ, ಕೃಷ್ಣನನ್ನಾಗಲಿ ಜಾತಿಯ ಮೇಲುಸ್ತರದಲ್ಲಿಂತೋ ಹಾಗೇ ಬದುಕಿನ ಸಾಮಾನ್ಯತೆಗೂ ಚಾಚಿಕೊಳ್ಳಬೇಕು. ದಾನವತೆ-ದಾಸ್ಯತೆ ಈ ಮೊದಲಾದವು ಗುಣಗಳಾಗಿರಬೇಕೆ ವಿನಃ ಪಾತ್ರಗಳಾಗಬಾರದು. ನಿನ್ನೆಗಳಲ್ಲಿ ಕಾವ್ಯಗಳಿಗೆ ಇರಬಹುದಾದ ವಿಶ್ವವ್ಯಾಪಕತೆಯನ್ನು ಜಾತಿ ಧರ್ಮಗಳ ಕಾರಣದಿಂದ ಸಂಕುಚಿತಗೊಳಿಸಿದ್ದನ್ನು ಒಡೆದು ಅವೆಲ್ಲವನ್ನೂ ಸಾರ್ವತ್ರೀಕರಣಗೊಳಿಸಿ ಸಾಮಾನ್ಯವಾಗಿಯೇ ಗ್ರಹಿಸಬೇಕು. ಹಾಗಾದಾಗಲೇ ರಾಮ, ಶಂಬೂಕ, ಏಕಲವ್ಯ, ಕರ್ಣ, ಭೀಷ್ಮ, ಕೃಷ್ಣರೇ ಮೊದಲಾದವರು ಈ ಭಾರತ ನೆಲದ ಒಂದೊಂದು ಪಾತ್ರಗಳಷ್ಟೆ ಆಗುತ್ತಾರೆ. ಈ ಹಿನ್ನೆಲೆಯಿಂದ ಈ ದೇಶದ ಸಮಗ್ರ ಪುರಾಣ - ಕಾವ್ಯಗಳನ್ನು ಪುನರ್-ರಚಿಸುವ ಪ್ರಯತ್ನವಷ್ಟೇ ಈಗ ಪ್ರಧಾನವಾಗಿ ಆಗಬೇಕಿರುವುದು.

**ಡಾ|| ಜಿ. ಪ್ರಶಾಂತ ನಾಯಕ**
ಉಪನ್ಯಾಸಕ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ - ೫೭೭ ೪೫೧

# ವಿನೋದ ಗಣಿತ

**ಮೇ ತಿಂಗಳ ಪ್ರಶ್ನೆಗಳಿಗೆ ಉತ್ತರ**

**ಗ**ಣಿತ ಶಾಸ್ತ್ರದಲ್ಲಿ ಒದಗಿಬರುವ ಒಂದು ಸುಲಭ ಬಗೆಯನ್ನು ಮಾರ್ಚ್ ತಿಂಗಳಿನಲ್ಲಿ ಪ್ರಸ್ತಾಪಿಸಿದ್ದೇವಷ್ಟೆ. 'ಸರಿ' 'ಬೆಸ' ಸಂಖ್ಯೆಗಳ ಚಿರಪರಿಚಿತ ಲಕ್ಷಣಗಳನ್ನು ಪ್ರಯೋಗಿಸಿ ಸಾಧಿಸಬಹುದಾದ ಒಂದೆರಡು ಪ್ರಶ್ನೆಗಳನ್ನು ಮಾರ್ಚ್ ಮತ್ತು ಏಪ್ರಿಲ್ ತಿಂಗಳ 'ಹೊಸತು' ಸಂಚಿಕೆಗಳಲ್ಲಿ ಕಂಡೆವು. ಏಪ್ರಿಲ್ ತಿಂಗಳಿನಲ್ಲಿ ಕೇಳಿರುವ ಹೊಸ ಪ್ರಶ್ನೆಗಳಿಗೆ ಉತ್ತರ ಹುಡುಕುವಲ್ಲಿ, ಗಣಿತ ಶಾಸ್ತ್ರದಲ್ಲಿ ತುಂಬಾ ಉಪಯುಕ್ತತೆಯನ್ನು ಕಂಡಿರುವ ಆದರೆ ತುಂಬಾ ಸರಳ ವ್ಯಾಖ್ಯಾನವನ್ನು ಕೊಡಬಹುದಾದ ಇನ್ನೊಂದು ಎಣಿಕೆಯ ತಂತ್ರವನ್ನು ಉಪಯೋಗಿಸುತ್ತೇವೆ. ಈ ತಂತ್ರದ ಹಿಂದಿರುವ ತತ್ವಗಳಿಗೆ 'ಹಕ್ಕಿಗಳು ಮತ್ತು ಗೂಡುಗಳ ನ್ಯಾಯ' ಎಂದು ಕರೆಯಬಹುದು ! ಹಕ್ಕಿಗಳ ಸಂಖ್ಯೆ ಅವುಗಳ ಗೂಡುಗಳ ಸಂಖ್ಯೆಗಿಂತ ಮೀರಿದ್ದರೆ, ಆ ಹಕ್ಕಿಗಳೆಲ್ಲಾ ಗೂಡುಗಳೊಳಗೆ ಸೇರಿಕೊಂಡಿದ್ದಾಗ, ಯಾವುದಾದರೊಂದು ಗೂಡಿನಲ್ಲಿ ಕಡೆಯ ಪಕ್ಷ ಎರಡಾದರೂ ಹಕ್ಕಿಗಳು ಸೇರಿಕೊಂಡಿರಬೇಕು !

ಮೇಲೆ ಹೇಳಿದ 'ನ್ಯಾಯ'ಕ್ಕಿಂತಲೂ ಹೆಚ್ಚು ವ್ಯಾಪಕವಾದ ನ್ಯಾಯವನ್ನು ಕೆಳಗೆ ಕಂಡಂತೆ ವ್ಯಾಖ್ಯಾನಿಸಬಹುದು.

**ನ್ಯಾಯ ೨** : 'ಯ' ಒಂದು ದತ್ತ ಧನ ಪೂರ್ಣಾಂಕವಾಗಿರಲಿ. ಗೂಡುಗಳ ಸಂಖ್ಯೆ 'ಮ' ಆಗಿರಲಿ. 'ಯ' ಮತ್ತು 'ಮ'ಗಳ ಗುಣಲಬ್ಧ 'ತ' ಆಗಿರಲಿ. 'ತ'ಗೂ ಮೀರಿದ ಸಂಖ್ಯೆಯ ಹಕ್ಕಿಗಳು 'ಮ'ಗೂಡುಗಳಲ್ಲಿ ಸೇರಿಕೊಂಡಿದ್ದರೆ, ಯಾವುದಾದರೊಂದು ಗೂಡಿನಲ್ಲಿಯಾದರೂ 'ಯ'ಗಿಂತ ಕಡೆಯ ಪಕ್ಷ ಒಂದಾದರೂ ಹೆಚ್ಚಾಗಿರದ ಸಂಖ್ಯೆಯಷ್ಟು ಹಕ್ಕಿಗಳು ಸೇರಿಕೊಂಡಿರಬೇಕು.

**ಸೂಚನೆ** : ಮೇಲಿನ 'ನ್ಯಾಯ'ದಲ್ಲಿ ದತ್ತಸಂಖ್ಯೆ 'ಯ' ಸಂಖ್ಯೆ ೧ಕ್ಕೆ ಸಮ ಎಂದುಕೊಂಡರೆ ಹಕ್ಕಿ ಮತ್ತು ಗೂಡುಗಳ ನ್ಯಾಯದ ಹಳೆಯ ಸ್ವರೂಪ ದೊರಕುತ್ತದೆ. ಹೀಗಾಗಿ 'ನ್ಯಾಯ' ೩ರ ಉಪಯೋಗ ಹೆಚ್ಚು ವ್ಯಾಪಕ ಸ್ವರೂಪ ಉಳ್ಳದ್ದು.

**ಮೇ ತಿಂಗಳ ಮೊದಲನೆಯ ಪ್ರಶ್ನೆಗೆ ಉತ್ತರ** : ಇದಕ್ಕೆ ಉತ್ತರವನ್ನು 'ನ್ಯಾಯ ೨'ರ ಉಪಯೋಗದಿಂದ ಸಾಧಿಸಬಹುದು.

ಪ್ರಶ್ನೆಯಲ್ಲಿ ಬರುವ ೩೦ ಜನರನ್ನು ೩೦ ಹಕ್ಕಿಗಳೆಂದೂ ವಾರದ ಏಳು ದಿನಗಳನ್ನು ಏಳು ಗೂಡುಗಳೆಂದೂ ಅನ್ವಯಿಸಿಕೊಳ್ಳೋಣ. ಆಗ 'ಹಕ್ಕಿ'ಗಳು 'ಗೂಡು'ಗಳಿಗೆ ಸೇರಿಕೊಳ್ಳುವುದು ಎಂದರೆ ೩೦ ಜನರನ್ನು ಅವರವರ ಜನ್ಮದಿನಕ್ಕನುಸಾರವಾಗಿ ಏಳು ದಿನಗಳಲ್ಲಿ ವಿಭಾಗಿಸುವುದು ಎಂದುಕೊಳ್ಳಬಹುದು.

'ನ್ಯಾಯ ೨'ನ್ನು ಉಪಯೋಗಿಸುವ ಬಗೆ : ದತ್ತ ಸಂಖ್ಯೆ '೪' ಆದರೆ ಗೂಡುಗಳ ಸಂಖ್ಯೆಯೊಡನೆ ಅದರ ಗುಣಲಬ್ಧವು ೨೮. ೨೮ಕ್ಕಿಂತ ಹೆಚ್ಚಿನ, ಅಂದರೆ ೩೦ ಹಕ್ಕಿಗಳನ್ನು ೭ ಗೂಡಿನಲ್ಲಿ ತುಂಬಲಾಗಿದೆ. ಹೀಗಾಗಿ 'ನ್ಯಾಯ ೨'ರ ಪ್ರಕಾರ ೪ಕ್ಕಿಂತ ಹೆಚ್ಚಿನ (ಉದಾ:೫) ಸಂಖ್ಯೆಯ ಹಕ್ಕಿಗಳು ಒಂದೇ ಗೂಡಿನಲ್ಲಿರಬೇಕು ! ಪ್ರಶ್ನೆಗೆ ಉತ್ತರ ಸಿಕ್ಕಿದಂತಾಯಿತು.

**ಮೇ ತಿಂಗಳ ಎರಡನೆಯ ಪ್ರಶ್ನೆಗೆ ಉತ್ತರ** : ಪ್ರಶ್ನೆಯಲ್ಲಿ ಪ್ರಸ್ತಾಪಿಸಿರುವ ೧೦೦ ಕಿ. ಮೀ. X ೧೦೦ ಕಿ.ಮೀ. ಚದರದ ಅಭಯಾರಣ್ಯವನ್ನು, ಅಡ್ಡ ಮತ್ತು ಲಂಬ ರೇಖೆಗಳನ್ನು ಉಪಯೋಗಿಸಿ ೨೦ ಕಿ.ಮೀ. X ೨೦ ಕಿ. ಮೀ. ಚದರದ ೨೫ ಕ್ಷೇತ್ರಗಳನ್ನಾಗಿ ವಿಂಗಡಿಸಿದೆಯೆಂದು ಊಹಿಸಿಕೊಳ್ಳೋಣ. ಈ ೨೫ ಕ್ಷೇತ್ರಗಳನ್ನು ೨೫ 'ಗೂಡು'ಗಳೆಂದುಕೊಂಡರೆ ಹಾಗೂ ೫೧ ಹುಲಿಗಳನ್ನು 'ಹಕ್ಕಿ'ಗಳೆಂದುಕೊಂಡರೆ, ಯಾವುದೇ ಕ್ಷಣದಲ್ಲೂ 'ಹಕ್ಕಿ'ಗಳು 'ಗೂಡು'ಗಳಲ್ಲಿ ಸೇರಿಕೊಂಡಿರುತ್ತವಷ್ಟೆ. ಈಗ 'ನ್ಯಾಯ ೨'ನ್ನು ಉಪಯೋಗಿಸಲು ದತ್ತ ಸಂಖ್ಯೆ ೨ ಎಂದುಕೊಳ್ಳಿ. ಇಲ್ಲಿಂದ ಮುಂದೆ 'ನ್ಯಾಯ ೨'ರ ಉಪಯೋಗವನ್ನು ಮೇಲೆ ಹೇಳಿದಂತೆ ಉಪಯೋಗಿಸಿ ನೋಡಿದಾಗ ಯಾವುದೇ ಕ್ಷಣದಲ್ಲಿ ಯಾವುದಾದರೊಂದು ಕ್ಷೇತ್ರದಲ್ಲಾದರೂ **ಮೂರು** ಹುಲಿಗಳು ಇರಲೇಬೇಕು ಎಂದು ತಿಳಿಯುತ್ತದೆ.

**ಗಮನಿಸಿ** : ಮೇ ತಿಂಗಳ ವಿನೋದ ಗಣಿತದಲ್ಲಿ, ಎರಡನೆಯ ಪ್ರಶ್ನೆಗೆ ಉತ್ತರವಾಗಿ ಕಡೆಯ ಪಕ್ಷ ೨ ಹುಲಿಗಳಾದರೂ ೨೦ ಕಿ. ಮೀ. X ೨೦ ಕಿ. ಮೀ. ಚದರದ ಅರಣ್ಯ ಪ್ರದೇಶವನ್ನು ಹಂಚಿಕೊಳ್ಳಲಾಗುತ್ತದೆಂದು ತೋರಿಸಿ ಎಂದು ಕೇಳಲಾಗಿತ್ತು. ಈ ಉತ್ತರವನ್ನು ಪಡೆದುಕೊಳ್ಳಲು ಅರಣ್ಯದಲ್ಲಿರುವ ಹುಲಿಗಳ ಸಾಂದ್ರತೆಯು '೫೧'ರಷ್ಟು ದೊಡ್ಡ ಸಂಖ್ಯೆಯಾಗಿರಬೇಕಾಗಿಲ್ಲ! ಹಕ್ಕಿಗಳು ಮತ್ತು ಗೂಡುಗಳ ನ್ಯಾಯದ ಪ್ರಕಾರ ಕೇವಲ '೨೬' ಹುಲಿಗಳಿದ್ದರೆ ಸಾಕು !

**ಈ ತಿಂಗಳ ಹೊಸಪ್ರಶ್ನೆ**

ಒಂದು ರಾಷ್ಟ್ರದಲ್ಲಿರುವ ರಾಜಕೀಯ ಪಕ್ಷಗಳನ್ನು 'ಎಡ' 'ಬಲ' ಮತ್ತು 'ಎಡಬಿಡಂಗಿ' ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಎಲ್ಲ ಮೌಲ್ಯಗಳನ್ನೂ ಮೂಲೆಗೊತ್ತಿ ಚುನಾವಣಾ ರಾಜಕೀಯದಲ್ಲೇ ಮಗ್ನವಾಗಿರುವ ಈ ಪಕ್ಷಗಳಲ್ಲಿ ಯಾವುದೇ ಎರಡು ವಿಭಿನ್ನ ವಿಧದ ಪಕ್ಷಗಳು ಪರಸ್ಪರ ವಿಲೀನಗೊಳ್ಳುವುದಕ್ಕೆ ಏನೇನೂ ಆತಂಕವಿಲ್ಲ! ಆದರೆ ಈ ವಿಲೀನಗಳು ಕೆಳಗಿನ ನಿಯಮಗಳನ್ನು ಪಾಲಿಸುತ್ತವೆ :

೧. ಒಂದೇ ವಿಧದ ಎರಡು ಪಕ್ಷಗಳು ವಿಲೀನಗೊಳ್ಳುವುದಿಲ್ಲ;
೨. ಎರಡು ವಿಭಿನ್ನ ವಿಧದ ಪಕ್ಷಗಳು ವಿಲೀನಗೊಂಡಾಗ ಬರುವ ನೂತನ ಪಕ್ಷವು ಅವೆರಡೂ ಅಲ್ಲದ ಉಳಿದಿರುವ ಇನ್ನೊಂದು ವಿಧದ ಪಕ್ಷವಾಗಿರುತ್ತದೆ. ಉದಾ : ಒಂದು ಎಡಪಕ್ಷ ಒಂದು ಬಲಪಕ್ಷದೊಡನೆ ವಿಲೀನಗೊಂಡಾಗ ಬರುವ ಪಕ್ಷ ಒಂದು 'ಎಡಬಿಡಂಗಿ' ಪಕ್ಷವಾಗಿರುತ್ತದೆ.

ಮೇಲಿನ ನಿಯಮಗಳಿಗನುಸಾರವಾಗಿ ಪಕ್ಷಗಳ ವಿಲೀನೀಕರಣ ಹಲವಾರು ಬಾರಿ ನಡೆದು ಕೊನೆಗೊಂದು ದಿನ ಆ ರಾಷ್ಟ್ರದಲ್ಲಿ ಏಕಮಾತ್ರ ರಾಜಕೀಯ ಪಕ್ಷ (ಎರಡೇ ರಾಜಕೀಯ ಪಕ್ಷಗಳಿರಬೇಕೆಂಬ ನಮ್ಮ ಹಲವಾರು ರಾಜಕಾರಣಿಗಳ ನಿರೀಕ್ಷೆಗೂ ಮೀರಿ) ಉಳಿಯುತ್ತದೆ. ಆರಂಭದಲ್ಲಿ ಆ ರಾಷ್ಟ್ರದಲ್ಲಿದ್ದ ಎಡ ಪಕ್ಷಗಳು ೬೦, ಬಲಪಕ್ಷಗಳು ೩೫ ಮತ್ತು ಎಡಬಿಡಂಗಿ ಪಕ್ಷಗಳು ೪೨ ಆದರೆ ಕೊನೆಯ ಹಂತದಲ್ಲಿ ಹುಟ್ಟಿಬಂದ ಏಕಮಾತ್ರ ಪಕ್ಷ ಯಾವ ವಿಧವಾದ ಪಕ್ಷ ?

□□□

## ಚಾತುರ್ವರ್ಣ ಧರ್ಮ ದರ್ಶನ



*ಕುಮಾರ ಕಕ್ಕಯ್ಯ ಪೋಳ*

**ಪುಟ : 172** **ಬೆಲೆ : ರೂ. 75**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - 3

*ಇಂದಿನ ಜಾತಿ ವ್ಯವಸ್ಥೆಗೆ ನಾಂದಿ ಹಾಡಿದ ಹಿಂದೂ ಧರ್ಮದ ಭದ್ರ ಬುನಾದಿ ಚಾತುರ್ವರ್ಣ್ಯ ವ್ಯವಸ್ಥೆಯ ಮೇಲೆ ವಿಚಾರವಾದೀ ಕ್ಷ-ಕಿರಣ ಹಾಯಿಸಿ ಅನಾರೋಗ್ಯಕಾರೀ ಅಂಶಗಳನ್ನು ಗುರುತಿಸುವಲ್ಲಿ ಸಫಲವಾದ ದಿಟ್ಟ ಕೃತಿ. ತಮಗನುಕೂಲ ಶಾಸ್ತ್ರ ರಚಿಸಿ ಶ್ರಮಜೀವಿ ಹಾಗೂ ಅಬಲೆಯರನ್ನು ವಿದ್ಯಾರ್ಜನೆಯಿಂದ ದೂರವಿರಿಸಿ ತೋಳ್ಬಲದ ರಾಜರನ್ನು ಓಲೈಸಿ ಧರ್ಮದ ಅಧಿಕಾರಿಗಳು ತಾವೆಂದು ಮೆರೆದ ಧಾರ್ಮಿಕ ಗ್ರಂಥಕರ್ತರ ನಿಜಬಣ್ಣವನ್ನು ನಿಷ್ಠುರ ಮಾತುಗಳಿಂದ ಖಂಡಿಸಲಾಗಿದೆ. ವೈಚಾರಿಕ ವಲಯಕ್ಕೆ ಅಪೂರ್ವ ಕೊಡುಗೆ.*

## ಅಲೆಮಾರಿಯ ಹೆಜ್ಜೆಗಳು (ಪ್ರವಾಸ ಕಥನ)



*ಎಂ. ವೆಂಕಟಸ್ವಾಮಿ*

**ಪುಟ : 213** **ಬೆಲೆ : ರೂ. 50**

**ಕನ್ನಡ ಪುಸ್ತಕ ಪ್ರಾಧಿಕಾರ**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018

*ಉದ್ಯೋಗದ ನಿಮಿತ್ತ ಭಾರತದ ವಿವಿಧ ಪ್ರಾಂತ್ಯಗಳನ್ನು ಸಂದರ್ಶಿಸಿದ ಶ್ರೀ ವೆಂಕಟಸ್ವಾಮಿ ಭೂವಿಜ್ಞಾನಿಯ ಭಾಷೆಯಲ್ಲಿ ಪ್ರಸ್ತುತಪಡಿಸಿರುವ ಈ ಪ್ರವಾಸ ಕಥನವು ಕೇವಲ ಹೋಗಿಬಂದ ಕಥೆಯಾಗಿ ಉಳಿಯದೆ ಸಂಶೋಧನಾ ದೃಷ್ಟಿ ಮತ್ತು ಪರಿಶೀಲನ ಪ್ರಜ್ಞೆಯೊಂದಿಗೆ ನಮ್ಮ ಸುತ್ತ ಹರಡಿಕೊಳ್ಳುತ್ತದೆ. ಪ್ರವಾಸ ಸಂದರ್ಭದ ಒಂದು ಅವಧಿ ಪ್ರವಾಸಿಯ ಆತ್ಮಕಥೆ ಕೂಡಾ ಆಗಿರುತ್ತದೆಂದು ಲೇಖಕರ ಅನಿಸಿಕೆ. ಅಲೆಮಾರಿಯಾಗಿದ್ದಾಗ ಅನುಭವಿಸಿದ ಸಿಹಿಕಹಿಗಳೆಲ್ಲವೂ ಈ ಪುಸ್ತಕದಲ್ಲಿ ದಾಖಲಾಗಿವೆ.*

## ಮರುಗಡಲು (ನಾಟಕ)



*ಗ. ಸು. ಭಟ್ಟ, ಬೆತ್ತಗೇರಿ*

**ಪುಟ : 92** **ಬೆಲೆ : ರೂ. 50**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರ ಕೊಡ್ಲ, ಅಂಕೋಲಾ, ಉ. ಕ. - 581314

*ಅರ್ಥಪೂರ್ಣ ಮಾತುಗಳನ್ನು ಪಾತ್ರಗಳಿಂದ ಹೇಳಿಸುತ್ತಾ, ಅಯೋಗ್ಯರ ಆಡಳಿತದಲ್ಲಿರುವ ಅಸಮಂಜಸ ಕಳೆಗಳನ್ನು ಕಿತ್ತು ಬಿಸುಟುತ್ತ, ನೇರವಾಗಿ ವರ್ತಮಾನಕ್ಕೇ ಸ್ಪಂದಿಸುವ ಈ ನಾಟಕದ ವಸ್ತು ಹಿಂಸೆಯಿಂದ ಮಾನವನನ್ನು ಅಹಿಂಸೆಯೆಡೆಗೆ ಬದಲಿಸುವುದೇ ಆಗಿದೆ. ಕಡಲುಗಳೆಲ್ಲಾ ಹಿಂಗಿ ಭೂಮಿಯೆಲ್ಲ ಮರುಭೂಮಿಯಾದಾಗ ಒಂದು ಹನಿ ಮಳೆಗಾಗಿ ಹಾರೈಸುವ, ತನ್ಮೂಲಕ ಆಶಾವಾದದ ಚಿಗುರೊಡೆಸುವ ಸಹೃದಯನೊಬ್ಬ ಇಲ್ಲಿ ಕಾಣಸಿಗುತ್ತಾನೆ.*

## ಸ್ತ್ರೀವಾದದ ಪ್ರಸ್ತುತತೆ (ಲೇಖನ ಸಂಗ್ರಹ)



*ಡಾ|| ಎಸ್. ವಿ. ಪ್ರಭಾವತಿ*

**ಪುಟ : 98** **ಬೆಲೆ : ರೂ. 60**

**ಡಾ|| ಎಸ್. ವಿ. ಪ್ರಭಾವತಿ**, ಕನ್ನಡ ಉಪನ್ಯಾಸಕಿ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ವಿಜಯನಗರ, ಬೆಂಗಳೂರು.

*ವಿದೇಶದಿಂದ ಆಮದಾದದ್ದು ಎಂಬ ಹಣೆಪಟ್ಟಿಯೊಂದಿಗೆ ಆರಂಭವಾದ ಭಾರತದ ಸ್ತ್ರೀವಾದಿ ಚಳವಳಿ ಇಂದು ಯಾರ ಹಂಗೂ ಇಲ್ಲದೆ ಈ ಮಣ್ಣಲ್ಲಿ ಗಟ್ಟಿಯಾಗಿ ತನ್ನ ನೆಲೆಯನ್ನು ಭದ್ರಪಡಿಸತೊಡಗಿದೆ. ಇಲ್ಲಿನ ಹೆಚ್ಚಿನ ಲೇಖನಗಳು ಇದನ್ನು ಸಮರ್ಥಿಸಿವೆ. ಇಂದು ಆಕೆ ಯಾವ ಘಟ್ಟದಲ್ಲಿದ್ದಾಳೆಂದು ಪುರಾಣೇತಿಹಾಸ ಪಾತ್ರಚಿತ್ರಣದಿಂದ ಊಹಿಸಬಹುದು. ಆಧುನಿಕ ಲೇಖಕಿಯರು ಸೃಷ್ಟಿಸಿದ ಮಹಿಳಾ ಪಾತ್ರಗಳು ತಮ್ಮ ಆಶೋತ್ತರಗಳೇನು, ಎಂಬುದನ್ನು ಸ್ಪಷ್ಟಪಡಿಸಿವೆ.*

## ಬೆಕೆಟ್ (ನಾಟಕ)



*ಜಾ ಆನ್ವಿ, ಕನ್ನಡಕ್ಕೆ : ಎ. ಎನ್. ಪ್ರಸನ್ನ*

**ಪುಟ : 126** **ಬೆಲೆ : ರೂ. 50**

**ಲಿಪಿ ಪ್ರಕಾಶನ**, ಬ್ಯೂಗಲ್‌ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು-4

*ಮೂಲ ಕೃತಿಯ ಸಾಹಿತ್ಯಕ್ಕೆ ಕೊಂಚವೂ ಧಕ್ಕೆಯಾಗದಂತೆ ಪಾಶ್ಚಿಮಾತ್ಯ ಶ್ರೇಷ್ಠ ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸುವ ಎ. ಎನ್. ಪ್ರಸನ್ನರಿಂದ ಇನ್ನೊಂದು ಗಮನ ಸೆಳೆಯುವ ನಾಟಕ. ಧರ್ಮ ಮತ್ತು ರಾಜಕಾರಣದ ನಡುವಿನ ತಿಕ್ಕಾಟ ಇಲ್ಲಿನ ಕಥಾವಸ್ತು. ಅಧಿಕಾರದ ಅಮಲು ರಾಜನಿಗೂ, ಧಾರ್ಮಿಕ ಒಲವು ಪಾದ್ರಿಗೂ ತಲೆಗೇರಿದಾಗ ಸಮಸ್ಯೆಯ ತೀವ್ರತೆ-ಸಂಘರ್ಷ ಬಿಂಬಿತವಾಗಿದೆ. ಉತ್ತಮ ಪಾತ್ರ ನಿರ್ವಹಣೆಯಿದ್ದು ಪ್ರದರ್ಶನ ಯೋಗ್ಯ ನಾಟಕ.*

## ಅಂತರಂಗದ ಹೂವು (ಕವನ ಸಂಕಲನ)



*ವಿ. ಗಣೇಶ*

**ಪುಟ : ೭೩** **ಬೆಲೆ : ರೂ. ೪೫**

**ಹೇಮಂತ ಸಾಹಿತ್ಯ**, ಶ್ರೀ ವೆಂಕಟೇಶ, ನಂ. 972, 4ನೇ 'ಇ' ಬ್ಲಾಕ್, ರಾಜಾಜಿನಗರ, ಬೆಂಗಳೂರು - 10

*ಭಾವಜೀವಿಯಾದವನಿಗೆ ಕವನಗಳನ್ನು ಬರೆಯಲು ಕಸರತ್ತು ಮಾಡಬೇಕಾಗಿಲ್ಲವೆಂದು ಇಲ್ಲಿನ ಸಹಜ-ಸುಂದರ ೪೩ ಕವನಗಳು ನಿರೂಪಿಸುತ್ತವೆ. ಬದುಕಿನಿಂದ ಸುಂದರವಾದುದನ್ನು ಮಾತ್ರ ಆಯ್ದುಕೊಂಡು ನಮ್ಮೊಂದಿಗೆ ಕ್ಷಣಕಾಲ ಸಂತೋಷವಾಗಿ ಕಳೆಯಲು ಬಯಸುವ ಕವಿಯ ಲೇಖನಿಯಿಂದ ಕುಸುಮ ಕೋಮಲವೆನ್ನಬಹುದಾದ ಭಾವಗೀತೆಗಳು ಅರಳಿ ಕಂಪು ಬೀರುತ್ತಿವೆ. ಭಾವನೆಗಳಿಗೆ ಭಾಷೆಯ ತೊಡಕು ಅಡ್ಡಿಯಾಗದಂತೆ ಅನುವಾದಿಸಿದ್ದಾರೆ.*

## ನಮ್ಮದೇ ದನಿಯೆತ್ತಿ ಎಂದು ಹಾಡೇವೋ (ಕವನಗಳು)

*ಡಾ|| ಕೆ. ಸರೋಜಾ*

**ಪುಟ : 132** **ಬೆಲೆ : ರೂ. 50**

**ಮಹಿಳಾ ಸಾಹಿತ್ಯಿಕ**, ನವನಗರ, ಹುಬ್ಬಳ್ಳಿ

*ಪಿತ-ಪತಿ-ಸುತರ ರಕ್ಷಣೆಯಲ್ಲಿರಬೇಕೆಂದೂ, ಸ್ವಾತಂತ್ರ್ಯಕ್ಕೆ ಅನರ್ಹಳೆಂದೂ ಮನುವಿನಿಂದ ಬೇಡಿ ತೊಡಿಸಿಕೊಂಡ ಸ್ತ್ರೀಗೆ ರಕ್ಷಕರಿದ್ದೂ ದಯನೀಯ ಸ್ಥಿತಿಯುಂಟಾದುದು ಹೇಗೆ ? ಉತ್ತರ ಹುಡುಕುವ ಪ್ರಯತ್ನ ಈ ಕವನಗಳಲ್ಲಿ ಸಾಗಿದೆ. ಇಲ್ಲಿನ ಎಲ್ಲ ಕವಿತೆಗಳೂ ಅಸಹಾಯಕ ಹೆಣ್ಣಿನ ನೋವಿನ ಧ್ವನಿಗಳನ್ನು ಸ್ಪಷ್ಟವಾಗಿ ಗುರುತಿಸಿವೆ. ಹೊನ್ನು ಮಣ್ಣುಗಳ ಜೊತೆಗೆ ಪುರುಷನ ಒಡೆತನಕ್ಕೆ ಸೇರುವ ಹೆಣ್ಣು ಒಂದು ವಸ್ತುವಲ್ಲ ಎಂಬ ತೀವ್ರ ಪ್ರತಿಭಟನೆ ಈ ಕವಿತೆಗಳ ಮುಖ್ಯ ದನಿಯಾಗಿದೆ.*

## ಸೂಳೆ ಸಂಕವ್ವೆ (ನಾಟಕ)



*ಮುದೇನೂರ ಸಂಗಣ್ಣ*

**ಪುಟ : [illegible]** **ಬೆಲೆ : ರೂ. 50**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ

*ಧಾರ್ಮಿಕ ವಲಯದಲ್ಲಿ ದೇವದಾಸಿ, ಚಾತುರ್ವರ್ಣ್ಯ ವ್ಯವಸ್ಥೆಯ ವೇಶ್ಯೆ, ಜಾನಪದ ಲೋಕದಲ್ಲಿ ಸೂಳೆಯಾಗಿ ಶತಮಾನಗಳಿಂದ ಮಹಿಳೆಯ ಪಾಲಿಗೆ ಶಾಪವಾದ ಒಂದು ಅನಿಷ್ಟ ಪದ್ಧತಿಯ ನಾನಾ ಮುಖಗಳು ಈ ನಾಟಕದಲ್ಲಿ ಅನಾವರಣಗೊಂಡಿವೆ. ಇಲ್ಲಿನ ಸಂಕವ್ವೆ ಪಾತ್ರದ ಮಾನವೀಯ ನೆಲೆಯುಳ್ಳ ಮಾತುಗಳಿಗೆ ಕವಡೆಯ ಬೆಲೆಯಾದರೂ ಬಂದಾಗ ಆಕೆಯ ಸ್ಥಿತಿ ಸುಧಾರಣೆ ಕಂಡೀತು. ಅಲಕ್ಷಿತ ಶಿವಶರಣೆಯೋರ್ವಳ ವಚನಾಧಾರಿತ ನಾಟಕ.*

**- ಇಂದಿರಾ ಕುಮಾರಿ**

# ರಾಷ್ಟ್ರೀಯ ಚಳುವಳಿ ಮತ್ತು ಕುವೆಂಪು ಅವರ ತಾತ್ವಿಕ ನಿಲುವು

*ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಕುವೆಂಪು ಚಿಂತನೆಯ ಮೂಸೆಯಲ್ಲಿ ಹುಟ್ಟಿ ಮುಂಚಾಚಿದ್ದು ವಿಶ್ವಪ್ರಜ್ಞೆ ಪರಿಕಲ್ಪನೆ. ಬೇರಿನ ಸಂಬಂಧ ಕತ್ತರಿಸಿಕೊಳ್ಳುವ ನಾಜೂಕುತನ ಅದಕ್ಕೆ ತಿಳಿಯದು. ಅವರು ಅಖಂಡ ಕರ್ನಾಟಕದ ಕನಸು ಕಟ್ಟುವಾಗಲೂ ವಿಶ್ವಪ್ರಜ್ಞೆ ಜಾಗೃತವಾಗಿತ್ತು. ಹಾಗಾಗಿಯೇ ಅವರ ಪ್ರಾದೇಶಿಕತೆ ರಾಷ್ಟ್ರೀಯತೆಗೆ ಉತ್ತೇಜಕವಾದುದು; ರಾಷ್ಟ್ರೀಯತೆ ಅಂತರ ರಾಷ್ಟ್ರೀಯತೆಗೆ ಹೆಗಲು ಕೊಡುವಂತಹುದು.*

ತಿಮ್ಮನಹಳ್ಳಿ ವೇಣುಗೋಪಾಲ್



ವಸಾಹತುಶಾಹಿ ವಿರುದ್ಧ ಹೋರಾಟದ ಸ್ವರೂಪದೊಂದಿಗೆ ರೂಪುಗೊಂಡ ನಮ್ಮ ಆಧುನಿಕ ಪ್ರತಿಭಟನೆ ಎಂಬುದು ಆಂತರಿಕ ವೈರುಧ್ಯಗಳನ್ನು ಅರಗಿಸಿಕೊಂಡು ಸಾಗುವ ತಂತ್ರವನ್ನು ರೂಢಿಸಿಕೊಂಡಿತ್ತು. ಅದು ಪರಸ್ಪರ ಭಿನ್ನ ಎನ್ನಬಹುದಾದ ರಾಷ್ಟ್ರೀಯವಾದ ಮತ್ತು ಸನಾತನವಾದ ಈ ಎರಡು ಪರಿಕಲ್ಪನೆಗಳನ್ನು ಸಂಘರ್ಷಗೊಳ್ಳದಂತೆ ಬಹು ಎಚ್ಚರಿಕೆಯಿಂದ ಪೋಷಿಸಿಕೊಂಡು ಬರುವಲ್ಲಿ ವಹಿಸಿದ ಜಾಣ್ಮೆ ಮತ್ತು ಪಡೆದ ಯಶಸ್ಸು ಚಾರಿತ್ರಿಕ ವಿಪರ್ಯಾಸ. ವಸಾಹತುಶಾಹಿಯು ಬೌದ್ಧಿಕ ಸೇವೆಯ ನೆಪದಲ್ಲಿ ತನ್ನ ಹಿತರಕ್ಷಣೆಗಾಗಿ ಈ ನೆಲದಲ್ಲಿ ಪರಿಚಯಿಸಿದ್ದ ಪಾಶ್ಚಾತ್ಯ ಶಿಕ್ಷಣವು ಉದಾರವಾದಿ ಮತ್ತು ನಿರಂಕುಶಮತಿ ಚಿಂತನೆಗಳ ಉಪ ಉತ್ಪನ್ನಕ್ಕೆ ಕಾರಣವಾಗಿತ್ತು. ನಿರಂಕುಶಮತಿಯನ್ನು ಗುಣಾತ್ಮಕ ಬಳುವಳಿಯಾಗಿ ಸ್ವೀಕರಿಸಿದ ಈ ನೆಲದ ಒಂದು ಬಹುದೊಡ್ಡ ಸಮುದಾಯವು ತನ್ನ ಒಳ ಹಿತಶತ್ರುಗಳಿಂದ ಬಿಡುಗಡೆಗೊಳಿಸಿಕೊಳ್ಳುವಲ್ಲಿ ನಡೆಸಿದ ಪ್ರಯತ್ನ ಮತ್ತು ಅನುಭವಿಸಿದ ತೊಳಲಾಟವು ಒಂದು ಸಾಮಾಜಿಕ ಚಲನೆಯಾಗಿತ್ತು. ಇಂತಹ ಸಂಕ್ರಮಣ ಸನ್ನಿವೇಶದಲ್ಲಿ ಜನ ಸಂವೇದಿ ಲೇಖಕನೊಬ್ಬ ಎದುರುಗೊಳ್ಳುವ ಸವಾಲುಗಳನ್ನು ಹೇಗೆ ನಿವಾರಿಸಿಕೊಳ್ಳಬಲ್ಲ ಮತ್ತು ತನ್ನ ಪ್ರಜ್ಞೆಯು ಸಮಕಾಲೀನ ವಿದ್ಯಮಾನಗಳಿಂದ ಪ್ರೇರಣೆ ಮತ್ತು ನಿಯಂತ್ರಣಕ್ಕೆ ಒಳಗಾಗುವಾಗ ಹೇಗೆ ಪ್ರತಿಕ್ರಿಯಿಸಬಲ್ಲ ? ಈ ಹಿನ್ನೆಲೆಯಲ್ಲಿ ಅವನ ಗ್ರಹಿಕೆಯ ವಿಸ್ತಾರ ಮತ್ತು ಮಿತಿಗಳ ಮೌಲ್ಯಮಾಪನವನ್ನು ಚರಿತ್ರೆ ಮಾಡುತ್ತದೆ.

ಪ್ರಚಲಿತ ಸಾಮಾಜಿಕಾರ್ಥಿಕತೆಯೊಳಗೆ ಉಲ್ಬಣಗೊಂಡಿದ್ದ ದ್ವಂದ್ವಮಾನ ಸಂಗತಿಗಳು ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಘಟಿಸಿದ ಬ್ರಾಹ್ಮಣೇತರ ಚಳುವಳಿಯ ಮೂಲಕ ಮತ್ತಷ್ಟು ಒತ್ತಡಕ್ಕೆ ಸಿಲುಕಿದ್ದು ಮೈಸೂರು ಸಂಸ್ಥಾನ ಚರಿತ್ರೆಯಲ್ಲಿ ಒಂದು ಅಪೂರ್ವ ಬೆಳವಣಿಗೆಯಾಗಿತ್ತು. ಅದು ಪೂರ್ವ ಕಲ್ಪನೆಗಳಲ್ಲಿ ತಂದ ಪಲ್ಲಟದಿಂದಾಗಿಯೇ ಚಾರಿತ್ರಿಕ ಮಹತ್ವವನ್ನು ಹೊಂದಿತ್ತು. ರಾಷ್ಟ್ರೀಯ ಬೂರ್ಜ್ವಾ ನಾಯಕತ್ವವು ಹಿಂದೂ ರಾಷ್ಟ್ರೀಯತೆಯ ಯಜಮಾನಿಕೆಯನ್ನು ಸ್ಥಾಪಿಸುವ ಗುಪ್ತ ಕಾರ್ಯಸೂಚಿಯನ್ನು ಹೊಂದಿ ಅದನ್ನು ರಾಜಕೀಯ ರಾಷ್ಟ್ರೀಯತೆಯ ಮಾರುವೇಷದಲ್ಲಿ ಸಾಧಿಸಬಹುದು ಎಂದು ಭ್ರಮಿಸಿತ್ತು. ಅದು ಅಪಪ್ರಜ್ಞೆಯಿಂದಾಗಿ ಹುಟ್ಟಿತ್ತು. ಇಂತಹ ಸೂತ್ರವನ್ನು ಹಿಡಿದುಕೊಂಡು ಬ್ರಿಟಿಷರ ವಿರುದ್ಧದ ಹೋರಾಟವನ್ನು ಅವಾಸ್ತವಿಕ ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸುತ್ತಿದ್ದ ಒಂದು ಗುಂಪಿಗೆ ಭಂಗ' ತರಲೆತ್ನಿಸಿ ರಾಷ್ಟ್ರೀಯತೆಯ ಕಲ್ಪನೆ ಅನ್ನುವುದು ಬಹುಮುಖಿ ಆಶಯಗಳನ್ನೊಳಗೊಂಡ ಮೌಲ್ಯ ಎಂದು ಒಪ್ಪಿಕೊಳ್ಳುವಂತೆ ಒತ್ತಾಯಿಸುತ್ತಿತ್ತು. ಹಾಗಾಗಿಯೇ ಸ್ವರಾಜ್ಯಕ್ಕಾಗಿ ಹವಣಿಸುತ್ತಿದ್ದ ರಾಜಕೀಯ ಶಕ್ತಿಗಳಿಗೆ ಇದ್ದ ಒಂದೇ ಅನಿವಾರ್ಯ ಆಯ್ಕೆಯೆಂದರೆ ಶತಮಾನಗಳಿಂದ ನಿರ್ಲಕ್ಷಿತಗೊಂಡಿದ್ದ ಬಹುದೊಡ್ಡ ಸಮುದಾಯದ ಸಾಮಾಜಿಕ-ಆರ್ಥಿಕ ತುಡಿತಗಳೊಂದಿಗೆ ಅನುಸಂಧಾನ ನಡೆಸದೆ ಗತಿಶೀಲತೆ ಕಂಡುಕೊಳ್ಳಲು ಸಾಧ್ಯವೇ ಇರಲಿಲ್ಲ. ಈ ತಾತ್ವಿಕ ತಾಕಲಾಟದಲ್ಲೇ ಪರಿಹಾರ ಅರಸುತ್ತಾ ಮುನ್ನುಗ್ಗುವ ಆಯಾಮ ಪಡೆದುಕೊಂಡದ್ದು ನಮ್ಮ ರಾಷ್ಟ್ರೀಯ ಚಳುವಳಿಯಲ್ಲಿನ ವಿಶೇಷ ಅಂಶ. ಇಂತಹ ಕಾಲಘಟ್ಟದಲ್ಲಿ ಬಂದ ಕನ್ನಡ ನವೋದಯ ಸಾಹಿತಿಗಳಲ್ಲಿ ವಿಶಿಷ್ಟ ಅಭಿವ್ಯಕ್ತಿಯಾದ ಕುವೆಂಪು ಮತ್ತು ಅವರಂತಹವರ ಸಾಹಿತ್ಯ ತೋರಿದ ಪ್ರತಿಕ್ರಿಯಾತ್ಮಕತೆಯನ್ನು ಈ ಚಾರಿತ್ರಿಕ ಬೆಳವಣಿಗೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ವಿಧಾನ ಇಂದು ಕಸಿವಿಸಿ ತರುತ್ತಿರುವ ವಿಮರ್ಶೆ ವಿಮುಖ ಆರಾಧನೆಯ ಅಪಾಯದಿಂದ ಪಾರು ಮಾಡಲು ಸಾಧ್ಯ. ರಾಷ್ಟ್ರಪ್ರಜ್ಞೆ, ಶೂದ್ರಪ್ರಜ್ಞೆ, ಅಧ್ಯಾತ್ಮ ದೃಷ್ಟಿಕೋನ ಈ ಮೂರನ್ನೂ ಏಕಕಾಲದಲ್ಲಿ ಹೊಂದಿದ್ದ ಕುವೆಂಪು ಅವರ ತಾತ್ವಿಕತೆಯು ಕಂಡ ಯಶಸ್ಸು-ಹಿನ್ನಡೆಯನ್ನು ಮಾತ್ರವಲ್ಲ, ದ್ವಂದ್ವವನ್ನೂ, ವಸಾಹತುಶಾಹಿ ಹುಟ್ಟಿಹಾಕಿದ್ದ ವಿದ್ಯಮಾನಗಳು ಮುಖಾಮುಖಿಗೊಳ್ಳುವುದನ್ನೂ ಹೇಳುತ್ತವೆ.

ಬ್ರಿಟಿಷ್ ವಸಾಹತುಶಾಹಿ ಆಗಮನ ಈ ದೇಶಕ್ಕೆ ವರ-ಶಾಪ ಎರಡೂ ಆಗಿದ್ದುದರ ಬಗೆಗೆ ಈಗಾಗಲೇ ಹೆಚ್ಚೆಚ್ಚು ಚರ್ಚೆ-ಅಧ್ಯಯನ ಆಗಿದೆ. ಪುರೋಹಿತಶಾಹಿ, ಊಳಿಗಮಾನ್ಯಶಾಹಿಯ ಇತಿಹಾಸವೇ ಭಾರತೀಯ ಇತಿಹಾಸವೂ ಆಗಲ್ಪಟ್ಟಿರುವ ಈ ದೇಶಕ್ಕೆ ವಸಾಹತುಶಾಹಿಯ ಸೇರ್ಪಡೆ ಒಂದು ಗಮನಾರ್ಹ ಬೆಳವಣಿಗೆಯಾಗಿತ್ತು. ಭಾರತೀಯ ಶ್ರೇಣೀಕೃತ ಸಮಾಜದಲ್ಲಿ ಅನೂಚಾನಿತ ಈ ಸೂಕ್ಷ್ಮದರ್ಶಕ ಅಲ್ಪಸಂಖ್ಯಾತ ಯಜಮಾನ ವರ್ಗ ತಮ್ಮ ಸ್ಥಾನಮಾನಗಳು ಪಲ್ಲಟಗೊಳ್ಳುವ ತಲ್ಲಣದ ಅನುಭವವನ್ನು ಬಹುಸಂಖ್ಯಾತೀಕರಿಸತೊಡಗಿತು. ತನ್ನ ಅಧಿಕಾರದ ವಿಸ್ತರಣೆ ಮತ್ತು ಸ್ಥಿರೀಕರಣವನ್ನೇ ಪ್ರಧಾನವಾಗಿಸಿಕೊಂಡಿದ್ದ ವಸಾಹತುಶಾಹಿಯು ಎದುರಾದ ಈ ತರಹದ ತೊಡಕುಗಳನ್ನು ಬಹು ನಾಜೂಕಿನಿಂದ ನಿವಾರಿಸಿಕೊಳ್ಳತೊಡಗಿತು. ಹೀಗೆ ಎಲ್ಲರಿಗಾಗಿ ಎಂದು ತೆರೆದ ಪಾಶ್ಚಿಮಾತ್ಯ ಶಿಕ್ಷಣದ ವಿರುದ್ಧ ಅಪಸ್ವರ ಎತ್ತಿದ ಈ ಯಜಮಾನ ವರ್ಗವೇ ಅದರ ಲಾಭ ಪಡೆಯಲು ಮುಂಚೂಣಿಯಲ್ಲಿದ್ದು ಸವಲತ್ತು ಗಿಟ್ಟಿಸಿಕೊಂಡು ಬ್ರಿಟಿಷರ ಬಗೆಗೆ ಧನ್ಯತಾಭಾವದಲ್ಲಿ ತಲ್ಲೀನವಾಗಿತ್ತು. ಆದರೆ ಅದರ ಮತ್ತೊಂದು ಗುಂಪು ಉದಾರವಾದಿ ಚಿಂತನೆಯಿಂದ ಪ್ರಭಾವಿತವಾಗಿ ರಾಷ್ಟ್ರಭಕ್ತಿಯನ್ನು ಸ್ವರಾಜ್ಯ ಗಳಿಕೆಗಾಗಿ ಗಳಿಸಲು ಹೆಣಗುತ್ತಿತ್ತು. ಇಂತಹ ಅದೆಷ್ಟೋ ಅಚಾರಿತ್ರಿಕ ಸಂಗತಿಗಳಿದ್ದರೂ ಅದರ ಆಗಮನವು ಚಾರಿತ್ರಿಕ ಎನ್ನಬಹುದಾದ ರೀತಿಯಲ್ಲಿ ತಮ್ಮ ನೆಲದಲ್ಲೇ ಪರಕೀಯ ಭಾವದಿಂದ ನರಳುತ್ತಿದ್ದವರಿಗೆ ಆತ್ಮಾಭಿಮಾನದ ಬೀಜ ಬಿತ್ತಿದ್ದು ನಿಜ. ಇಂತಹ ಹೊತ್ತಿನಲ್ಲಿ ಶೂದ್ರ ಸಾಂಸ್ಕೃತಿಕ ಜಗತ್ತಿನ ವಕ್ತಾರರಂತೆ ಗೌರವಿಸಲ್ಪಟ್ಟಿರುವ ಕುವೆಂಪು ಅವರ ಈ ಪ್ರತಿಕ್ರಿಯೆಗೆ ಗಂಭೀರ ಸ್ವರೂಪ ಸಿಕ್ಕಿದೆ. ''ಬ್ರಿಟಿಷರು ಬಂದುದರಿಂದಲೇ ಎಲ್ಲರಿಗೂ ವಿದ್ಯಾಭ್ಯಾಸ ಕೊಟ್ಟರು, ಇದರಿಂದಾಗಿ ನಮ್ಮಲ್ಲಿ ಆತ್ಮಾಭಿಮಾನವಾದರೂ ಮೂಡಿತು, ಪ್ರತಿಭಟಿಸುವಂತ ಶಕ್ತಿಯಾದರೂ ಬಂದಿತು. ಅವರು ಬರದಿದ್ದರೆ ನಾನು ಎಲ್ಲಿರುತ್ತಿದ್ದೆ ಗೊತ್ತೇನು ? ನಾನು ಕುಪ್ಪಳ್ಳಿಯಲ್ಲಿ ಸಗಣಿ ಹೊತ್ಕೊಂಡು ಯಾರಾದ್ರೂ ಒಬ್ಬ ಹಾರವನ ಜಮೀನಿನಲ್ಲಿ ಕೆಲಸ ಮಾಡ್ಕೊಂಡು ಇರುತ್ತಿದ್ದೆ'' (ರಾಷ್ಟ್ರಕವಿ ಸಂದರ್ಶನ - ಪುಟ ೭೯).

೧೮೫೩ರಲ್ಲಿ ಕಾರ್ಲ್ ಮಾರ್ಕ್ಸ್‌ರು ಅಭಿಪ್ರಾಯಿಸಿದ್ದ ಬ್ರಿಟಿಷರು ಭಾರತದ ಚರಿತ್ರೆಯಲ್ಲಿ ತಂದ 'ಸಾಮಾಜಿಕ ಕ್ರಾಂತಿ'ಯನ್ನು ಅನ್ವಯಿಸುವುದು ಚಾರಿತ್ರಿಕ ಗತಿ ತಾರ್ಕಿಕತೆಯ ವರ್ಗ ಪರಿಕಲ್ಪನೆಯ ಸಂದರ್ಭಕ್ಕಾದರೂ ಕುವೆಂಪು ಅವರ ಮಾತಿನ ಹಿನ್ನೆಲೆಯಲ್ಲಿ ಅದಕ್ಕಿರುವ ಮತ್ತೊಂದು ಮುಖವನ್ನು ಅರ್ಥೈಸಬಹುದಾಗಿದೆ. ಇಲ್ಲಿ ಕುವೆಂಪು ಅವರು ಬ್ರಿಟಿಷರ ಬಗೆಗೆ ಅಪಾರ ಮೋಹಗೊಂಡಿದ್ದರೆಂದೇನೂ ಅಲ್ಲ; ವಾಸ್ತವವಾದಿ ಚಿಂತನೆಯ ಕುವೆಂಪು ಅವರಿಗೆ ಭಾರತಕ್ಕೆ ಬ್ರಿಟಿಷರ ಆಗಮನದಿಂದ ಆದ ಸೀಮಿತ ಇತ್ಯಾತ್ಮಕ ಪರಿಣಾಮದ ಬಗೆಗೆ ಅರಿವಿತ್ತು. ಅವರೇ ಬರೆದಂತೆ (ಆದರೆ ಪ್ರಖರ ರಾಷ್ಟ್ರೀಯವಾದಿ ಧಾಟಿಯಲ್ಲಿ ಅಲ್ಲ) 'ಭರತ ಖಂಡದ ಬದುಕಿನಲ್ಲಿ ಸ್ವಾತಂತ್ರ್ಯೋದಯಕ್ಕೆ ಪೂರ್ವದ ಒಂದೂವರೆ ಶತಮಾನವು ನಮ್ಮ ರಾಷ್ಟ್ರದ ಇಳಿಗಾಲದ ಯುಗವೆಂದು ಸಾಮಾನ್ಯವಾಗಿ ಭಾವಿಸುತ್ತೇವೆ.

ರಾಜಕೀಯದಲ್ಲಿ ದಾಸ್ಯ, ಆರ್ಥಿಕದಲ್ಲಿ ದಾರಿದ್ರ್ಯ, ಸಾಮಾಜಿಕದಲ್ಲಿ ಛಿದ್ರತೆ, ಧಾರ್ಮಿಕದಲ್ಲಿ ಕ್ಷುದ್ರತೆ ಎಂಬೆಲ್ಲಾ ವರ್ಣನೆಗೆ ಪಕ್ಕಾಗುವ ಆ ಕಾಲಕ್ಕೆ ಇಳಿಗಾಲವೆಂದು ಹೆಸರಿಟ್ಟರೆ ಅದರಲ್ಲಿ ತಪ್ಪೇನು ? ಹೌದು; ಲೋಕನಿಷ್ಠವಾದ ಮನೋಧರ್ಮಕ್ಕೆ ಅದರಲ್ಲಿ ತಪ್ಪೇನೂ ಕಾಣುವುದಿಲ್ಲ. ಆದರೆ ಆತ್ಮಶ್ರೀ ದೃಷ್ಟಿಯಿಂದ ಅದು ತಪ್ಪು.'

ಇಲ್ಲೆಲ್ಲಾ ಖಚಿತ ಜಾಡು ಹಿಡಿದು ನಡೆವ ಕುವೆಂಪು ತನ್ನದಲ್ಲದ ಋಣಾತ್ಮಕ ಅಂಶಗಳನ್ನು ನಮ್ರ ಮತ್ತು ಉತ್ಸಾಹದೊಂದಿಗೆ ಹೇರಿಕೊಳ್ಳುವುದೇಕೆ ? ಗುಲಾಮಗಿರಿಯ ಎಲ್ಲ ಮೂಲಗಳನ್ನೂ, ಮುಖಗಳನ್ನೂ ಪ್ರಶ್ನಿಸುವ ಕುವೆಂಪು ಧರ್ಮದ ಮೃದೋದಕ ಆಯಾಮವಾದ ಅಧ್ಯಾತ್ಮವನ್ನು ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡುದಾದರೂ ಏಕೆ ? ಇದಕ್ಕೆ ಉತ್ತರ ಸರಳವಾದುದು. ಸುಧಾರಣಾವಾದವನ್ನು ಒಪ್ಪಿಕೊಂಡಂತಹ ಆ ಕಾಲದ ನವೋದಯದ ಎಲ್ಲಾ ಬರಹಗಾರರಲ್ಲಿ ಈ ರೀತಿಯ ವೈರುಧ್ಯಗಳು, ದ್ವಂದ್ವಗಳು ಸಹಜವೆನ್ನುವ ರೀತಿಯಲ್ಲಿ ದಟ್ಟೈಸುತ್ತವೆ. ಆ ಕಾಲದ ಸಾಹಿತ್ಯವನ್ನೂ ಒಳಗೊಂಡು ಸಮಾಜದ ಬಹುತೇಕ ಎಲ್ಲಾ ಅಂಗಗಳನ್ನು ಪ್ರಭಾವಿಸಿ ಪ್ರಧಾನ ಧಾರೆಯಾಗಿ ಪ್ರವಹಿಸಿದ ಗಾಂಧಿವಾದ ಹಿಂದೂ ಸಮಾಜದಲ್ಲಿನ ರೋಗ ಮೂಲವನ್ನು ವೈಚಾರಿಕ ದಿವಾಳಿತನದಲ್ಲಿ ಗ್ರಹಿಸಲು ತವಕಗೊಂಡಿದ್ದು ಕಾರಣವಾಗಿತ್ತು. ಆದರೆ ರಾಷ್ಟ್ರೀಯ ಚಳುವಳಿಯನ್ನೂ ಒಳಗೊಂಡಂತೆ ಸಾಂಸ್ಕೃತಿಕ ಕ್ಷೇತ್ರವೂ ಅಧ್ಯಾತ್ಮದ ಪರಿಭಾಷೆಯಲ್ಲಿ ಮಾತನಾಡಿದ್ದು ಅದು ಎಲ್ಲಾ ಅನಿಷ್ಟಗಳ ನಿವಾರಕ ಎಂಬ ನಂಬಿಕೆ ಕವಿದಿದ್ದ ವಾತಾವರಣದಲ್ಲಿ ಬರೆಯ ಹೊರಟ ಕುವೆಂಪು ಅವರಂತಹ ವೈಚಾರಿಕಗ್ರಾಹಿ ಕವಿಯೂ ಬಿಡಿಸಿಕೊಳ್ಳಲಾಗದ್ದು ಸಾಂತ್ವನವಿಲ್ಲದ ವಿಷಾದದಂತೆ ತೋರುತ್ತದೆ. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆಯೇ ಗಮನಿಸುವುದಾದರೆ ಗಾಂಧೀಜಿಯ ಬಗೆಗೆ ಒಂದಿಷ್ಟೂ ಬಿರುಕಿಲ್ಲದ ಎಂಥ ದಟ್ಟ ನಂಬಿಕೆ ಕುವೆಂಪು ಅವರಿಗಿತ್ತೆಂದರೆ 'ಗಾಂಧೀಜಿಯಿರುವರೋ ಅಳದಿರೋ ತಮ್ಮ, ಕೊನೆಗಾಣುವುದೋ ಈ ರಾತ್ರಿ' ; ಭಾರತದ ತುಡಿತಕ್ಕೆ ಇಂತಹ ಎಷ್ಟೋ ಸಾಂತ್ವನಗಳನ್ನು ಹೇಳುತ್ತಲೇ ತಮ್ಮ ಆಲೋಚನಾ ಕ್ರಮವನ್ನು ಗಾಂಧಿ ಚಿಂತನೆಯಿಂದ ಗಾಢವಾಗಿ ಪ್ರಭಾವಿಸಿಕೊಂಡಿದ್ದಾರೆ. ಶೂದ್ರ ಸ್ವಾಭಿಮಾನದ ಪೆರಿಯಾರ್ ಅಥವಾ ನಿರೀಶ್ವರ ಮಾರ್ಕ್ಸ್‌ವಾದಿ ಗೊಳ್ಳಬಹುದಾಗಿದ್ದ ಎಲ್ಲಾ ಕ್ರಾಂತಿಕಾರಿ ಗುಣಗಳನ್ನು ಹೊಂದಿದ್ದರೂ ಸುಧಾರಣಾವಾದಿ ಗಾಂಧೀಜಿಯ ಗಾಢ ಪ್ರಭಾವಕ್ಕೆ ಪಕ್ಕಾಗಿ ತಮಗೆ ತಾವೇ ಕೆಲ ಮಿತಿಗಳನ್ನು ಹೇರಿಕೊಂಡರು. ಈ ಮುಖೇನ ಕುವೆಂಪು ಅಧ್ಯಾತ್ಮ, ಗಾಂಧೀಜಿಯ ಅಧ್ಯಾತ್ಮದೊಂದಿಗೆ ಅಭೇದತೆಯನ್ನು ಸಾಧಿಸಿತು. ಕುವೆಂಪು ಅವರಿಗೆ ವಿಜ್ಞಾನವೂ ಅಧ್ಯಾತ್ಮವೂ ಒಂದು ಅನ್ನಿಸಲು ಆ ದಿಮಾನಗಳ ಒತ್ತಡ ಮಾತ್ರವಲ್ಲ, ಪರಮಹಂಸರು - ವಿವೇಕಾನಂದರು ಇಂತಹ ದಾರ್ಶನಿಕರ ತಾತ್ವಿಕತೆಯ ಗಾಢ ಪ್ರಭಾವವೂ ಇದ್ದುದಾಗಿತ್ತು.

ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಕುವೆಂಪು ಚಿಂತನೆಯ ಮೂಸೆಯಲ್ಲಿ ಹುಟ್ಟಿ ಮುಂಚಾಚಿದ್ದು ವಿಶ್ವ ಪ್ರಜ್ಞೆ ಪರಿಕಲ್ಪನೆ. ಬೇರಿನ ಸಂಬಂಧ ಕತ್ತರಿಸಿಕೊಳ್ಳುವ ನಾಜೂಕುತನ ಅದಕ್ಕೆ ತಿಳಿಯದು. ಅವರು ಅಖಂಡ ಕರ್ನಾಟಕದ ಕನಸು ಕಟ್ಟುವಾಗಲೂ ವಿಶ್ವಪ್ರಜ್ಞೆ ಜಾಗೃತ ವಾಗಿತ್ತು. ಹಾಗಾಗಿಯೇ ಅವರ ಪ್ರಾದೇಶಿಕತೆ ರಾಷ್ಟ್ರೀಯತೆಗೆ ಉತ್ತೇಜಕವಾದುದು; ರಾಷ್ಟ್ರೀಯತೆ ಅಂತರ ರಾಷ್ಟ್ರೀಯತೆಗೆ ಹೆಗಲು ಕೊಡುವಂತಹುದು. ಕುವೆಂಪು ಒಪ್ಪಿತ ರಾಷ್ಟ್ರೀಯತೆ ಪುನರುತ್ಥಾನವಾದವನ್ನು ನಿಷ್ಠೂರವಾಗಿ ನಿರಾಕರಿಸುವಂತಹದು. ರಾಷ್ಟ್ರೀಯತೆ ಯನ್ನು ಪರಮಪವಿತ್ರ ಮೌಲ್ಯ ಎಂದು ಬೊಬ್ಬಿಡುವ ಪುನರುತ್ಥಾನವಾದಿಗಳನ್ನು ಅನುಮಾನಿಸುತ್ತದೆ. ಆದರೆ ಇಂತಹ ಕುವೆಂಪು ಸಹ ತಮಗೆ ತಾವೇ ಕೆಲವು ಮಿತಿಗಳ ಮುಖೇನ ನಿರ್ಬಂಧಿಸಿಕೊಳ್ಳುತ್ತಾರೆ. ರಾಷ್ಟ್ರೀಯ ಚಳುವಳಿಗೆ ಸ್ಫೂರ್ತಿ, ಹುರುಪು ತುಂಬುವ ಭರದಲ್ಲಿ ಚಿತ್ರಗೊಂಡ ಎಷ್ಟೋ ವ್ಯಕ್ತಿತ್ವಗಳು ಮತ್ತು ಸಂಕೇತಗಳು ಪ್ರಶ್ನಾರ್ಹವಾಗಿ ನಿಲ್ಲುತ್ತವೆ. ಅವು ಸಾಂದರ್ಭಿಕ ಸದುದ್ದೇಶದ ಆಯ್ಕೆಗಳಾಗಿದ್ದರೂ ರಾಷ್ಟ್ರೀಯ ಚಳುವಳಿಯ ದೂರಗಾಮಿ ಪರಿಣಾಮವನ್ನು ಋಣಾತ್ಮಕಗೊಳಿಸುತ್ತವೆ. ರಾಷ್ಟ್ರೀಯವಾದಿ ಸಾಂಸ್ಕೃತಿಕ ಕುವೆಂಪು ಅವರು ಪ್ರಾರಂಭಿಕ ಕೆಲವು ರಾಷ್ಟ್ರೀಯವಾದಿ ನಾಯಕರು ಮಾಡಿದ ಅನುದ್ದೇಶಿತ ಪ್ರಮಾದವನ್ನೇ ಮಾಡಿದ್ದು. ಸೌಮ್ಯ ಗಾಂಧಿ ಯುಗದಲ್ಲಿ ಬರೆಯುತ್ತಿದ್ದ ಕುವೆಂಪು ಮತ್ತು ಇತರ ಬಹಳಷ್ಟು ನವೋದಯ ಲೇಖಕರು ಬ್ರಿಟಿಷರು ಸೃಷ್ಟಿಸಿದ್ದ ಭಾರತದ ವಿಕೃತ ಚರಿತ್ರೆ ಮತ್ತು ತಿಲಕ್ ಪ್ರಣೀತ ಉಗ್ರ ರಾಷ್ಟ್ರೀಯವಾದಿ ಮಾದರಿ ಬಳಸಿದ ಧಾರ್ಮಿಕ ಸಂಕೇತ ಮತ್ತು ಆ ತರಹದ ತೀವ್ರ ಪ್ರೇರಣೆಯಿಂದ ಪಾರಾಗಲು ಸಾಧ್ಯವಾಗಿರಲಿಲ್ಲ. ಮಧ್ಯ ಯುಗೀನ ಭಾರತದ ಚಾರಿತ್ರಿಕ ಪಾತ್ರವಾದ ರಾಣಾ ಪ್ರತಾಪಸಿಂಹನನ್ನು ರಾಷ್ಟ್ರೀಯ ವೀರನನ್ನಾಗಿ ಪ್ರತಿಷ್ಠಾಪಿಸಿ ರಾಷ್ಟ್ರೀಯ ಚಳುವಳಿಯನ್ನು ಮುಂದೊತ್ತಲು ಸನ್ನೆಯಾಗಿ ಬಳಸಿಕೊಳ್ಳಬಹುದೆಂದು ಯೋಚಿಸಿದುದಾಗಿತ್ತು. ರಾಣಾ ವಿದೇಶಿಯರೆಂದು ಗುರುತಿಸಿದ ಮೊಗಲರ ವಿರುದ್ಧ ಹೋರಾಡಿದ್ದು. ಅಕ್ಬರ್ ಪಾರತಂತ್ರ್ಯದ ಸೊಕ್ಕಾಗಿ, ಮಾಯೆಯಾಗಿ ಗುರುತಿಸಲ್ಪಟ್ಟರೆ ಪ್ರತಾಪಸಿಂಹನು ಸ್ವಾತಂತ್ರ್ಯದ ಹೆಗ್ಗೆಚ್ಚು ಆಗಿಯೂ ಮುಕ್ತಿಯಾಗಿಯೂ ಪ್ರತೀಕಗೊಳ್ಳುತ್ತಾನೆ. ಅಲ್ಲಿ ಉಲ್ಲೇಖಗೊಳ್ಳುವ 'ಧೂರ್ತ ಮೊಗಲರು' ಅನ್ನುವುದು ಹೀಯಾಳಿಕೆಯಾಗುತ್ತದೆ. ಅಂದು ದಟ್ಟೈಸುತ್ತಿದ್ದ ಹಿಂದೂ-ಮುಸ್ಲಿಂ ಭೇದದ ಹಿನ್ನೆಲೆಯಲ್ಲಿ ಭಾರತೀಯ ಮುಸ್ಲಿಂರು ವಿದೇಶಿಯರೆಂದು ತಂತಾನೆ ಚಿತ್ರಿತಗೊಳ್ಳುತ್ತಿತ್ತು. ಹಿಂದೂ ಪುನರುತ್ಥಾನವಾದಿಗಳು ಇದನ್ನು ಸುಲಭವಾಗಿ ದುರುಪಯೋಗಪಡಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಯಾವ ಮೂಲಭೂತ ವಾದಿಗಳನ್ನು ವಿರೋಧಿಸಬೇಕೆಂದು ತಾವು ಬಯಸಿದ್ದರೋ ಅರಿವಿಲ್ಲದೆ ಅವರ ಬೆಂಬಲಕ್ಕೆ ನಿಂತಂತೆ ವೈರುಧ್ಯವಿತ್ತು. ಆ ಕಾಲಮಾನದಲ್ಲಿ ಬದುಕಿದ್ದ ಮತ್ತು ಬರೆಯ ಹೊರಟ ಕುವೆಂಪುವಿನಂತಹ ರಾಷ್ಟ್ರೀಯವಾದಿ ಬರಹಗಾರರು ಆಗ ಬೂರ್ಜ್ವಾ ರಾಷ್ಟ್ರೀಯ ನಾಯಕತ್ವ ಪ್ರಚುರಪಡಿಸುತ್ತಿದ್ದ ರಾಷ್ಟ್ರದ ರಾಜಕೀಯ ದಾಸ್ಯ ವಿಮೋಚನೆ ರಾಷ್ಟ್ರೀಯ ಸಾಮಾಜಿಕ-ಸಾಂಸ್ಕೃತಿಕ ವಿಮೋಚನೆಯೂ ಹೌದು ಎಂಬ ವಿಚಾರಧಾರೆಯು ಪ್ರಭಾವಿಸದೆ ಇರಲಿಲ್ಲ. ಈ ಜರೂರು ಚಾರಿತ್ರಿಕ ಪಾತ್ರಗಳ ಆಯ್ಕೆಯಲ್ಲಿ ಅವರ ದೃಷ್ಟಿಯನ್ನು ಮಂದ್ರಗೊಳಿಸಿತು.

ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಅದನ್ನು ಈ ರೀತಿ ಸ್ವಾಗತಿಸುತ್ತಾರೆ:

*'ಅರ್ಜಿತವಾಗಲಿ ಈ ಸ್ವಾತಂತ್ರ್ಯ ಶ್ರೀ ಚಾಮುಂಡಿ ಪದತಲಕೆ*
*ರಕ್ಷೆಯಾಗಲಿ ರಾಮಚಂದ್ರನ ರುದ್ರಕೋದಂಡ*
*ರಕ್ಷೆಯಾಗಲಿ ಆಂಜನೇಯ ವಜ್ರದೋರ್ದಂಡ'*

(ಸ್ವಾತಂತ್ರ್ಯೋದಯದ ಮಹಾ ಪ್ರಗಾಥಾ)

ಇಲ್ಲಿ ದಟ್ಟವಾಗಿ ಬಳಕೆಯಾಗುವ ಹಿಂದೂ ಪಾರಿಭಾಷಿಕ ಪದಗಳು ಆಧುನಿಕತೆಯಲ್ಲಿ ರೂಪುಗೊಳ್ಳುತ್ತಿದ್ದ ಬಹುಧರ್ಮೀಯ ಭಾರತದ ಅಸ್ತಿತ್ವವನ್ನೇ ನಿರಾಕರಿಸುತ್ತವೆ. ಅಂದರೆ ಇದರರ್ಥ ಕುವೆಂಪು ಏಕರೂಪಿ ಅಹಂಕಾರದ ಕೋಮುಭಾವನೆಯಿಂದ ಪ್ರೇರೇಪಿತ ಗೊಂಡಿದ್ದಾರೆ ಅಂದೇನೂ ಅಲ್ಲ. ಊಹಿಸಿಕೊಳ್ಳಲಾಗದ್ದು ಕೂಡ. ಇಲ್ಲಿ ನನ್ನ ಮುಖ್ಯ ವಾದ ಅಂದಿನ ಚಾರಿತ್ರಿಕ ಘಟ್ಟವೇ ಅಂತಹುದಾಗಿದ್ದು ಎಲ್ಲವನ್ನೂ ಕೋಮು ಜಾಳೀಸಿನಿಂದ ನೋಡುತ್ತಾ ಅಳೆಯುವ, ತೀರ್ಮಾನಿಸುವ ಪರಿಪಾಠ ಬಲವಾಗಿತ್ತು. ರಾಮ ರಹೀಮನೊಳಗೂ ರಹೀಮ ರಾಮನೊಳಗೂ ವ್ಯಕ್ತಗೊಳ್ಳುವ ಆದರ್ಶ ಮಾದರಿ ಭಾರತೀಯ ಪರಂಪರೆಯಲ್ಲಿ ಇದ್ದರೂ ಆಧುನಿಕವಾಗಿ ಚರ್ಚಿತವಾಗುತ್ತಿದ್ದ ಕೋಮುವಾದಕ್ಕೆ ಆ ಸಾಮರಸ್ಯದ ವ್ಯಾಖ್ಯಾನ ಅರ್ಥವಾಗುತ್ತಿರಲಿಲ್ಲ. ಕಾಂಗ್ರೆಸ್ ಮತ್ತು ಹಿಂದೂ ಧರ್ಮೀಯ ನಾಯಕತ್ವದಲ್ಲಿ ರೂಪುಗೊಳ್ಳುವ ಸ್ವತಂತ್ರ ಭಾರತವನ್ನು ದಲಿತರನ್ನೂ ಒಳಗೊಂಡಂತೆ ಮುಸ್ಲಿಂ ಸಮುದಾಯವು ಅನುಮಾನ-ಆತಂಕಗಳಿಂದ ನೋಡುವ ವಾತಾವರಣವಿದ್ದ ಕಾಲ ಅದಾಗಿತ್ತು. ಉಪೇಕ್ಷೆಯ ವಿಷಯಗಳೂ ಸೂಕ್ಷ್ಮ ಸ್ವರೂಪ ಪಡೆದು ಕೋಮು ಪ್ರಕ್ಷುಬ್ಧತೆಗೊಳ್ಳುವ ಅಪಾಯವೇ ಇತ್ತು.

ಅದೇ ಕುವೆಂಪು 'ಸಾರಿ ಬಾ ಸರ್ವಗೆ ಸ್ವಾತಂತ್ರ್ಯಂ, ಸರ್ವಗೆ ಸಾರಿ ಬಾ ಸೌಹಾರ್ದಮಂ' ಎಂದು ಸ್ವಾತಂತ್ರ್ಯ ಸಂಭ್ರಮವನ್ನು ಆಹ್ವಾನಿಸುವಲ್ಲಿ ರಕ್ತ ಧುನಿಯಂತಹ ಕವನಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ನೀಡುವ ರಕ್ತಕ್ರಾಂತಿಯ ಆಯಾಮ ಅವರ ರಾಷ್ಟ್ರ ಕಟ್ಟುವ ಬದ್ಧತೆಯನ್ನು ಗಟ್ಟಿಯಾಗಿ ಧ್ವನಿಸುತ್ತದೆ.

ಕುವೆಂಪು ಒಬ್ಬ ಸೃಜನಶೀಲ ಬರಹಗಾರ, ಕಲಾವಿದ. ಸ್ವಾತಂತ್ರ್ಯ ಹೋರಾಟ ತುಟ್ಟ ತುದಿಯಲ್ಲಿದ್ದಾಗ ಬರೆಯಹೊರಟ ಅವರಲ್ಲಿ ಉದ್ವಿಗ್ನತೆಯಿದೆ, ಭಾವತೀವ್ರತೆಯಿದೆ. ಅವರೇ ತಮ್ಮ ಆತ್ಮಕಥೆ (ನೆನಪಿನ ದೋಣಿಯಲ್ಲಿ) ಹೇಳಿಕೊಂಡಂತೆ 'ನನ್ನ ದೇಶಭಕ್ತಿಯ ಕವನಗಳು ಬರಿಯ ಕಾವ್ಯವಾಗಿರಲಿಲ್ಲ. ಅಗ್ನಿ ಸ್ಫೋಟಕ ವಸ್ತುಗಳಾಗಿದ್ದವು'. ಇದು ಆತ್ಮ ಪ್ರಶಂಸೆಯಲ್ಲ. ರಾಷ್ಟ್ರೀಯ ಚಳುವಳಿಗೆ ಅಗತ್ಯವಾಗಿದ್ದ ಪರಿಸರ ನಿರ್ಮಿಸುವಲ್ಲಿ, ಜನರನ್ನು ವಸಾಹತು-ರಾಜಶಾಹಿಗಳೆರಡಕ್ಕೂ ಎದುರಾಗಿ ಅಣಿಗೊಳಿಸುವಲ್ಲಿ ಅವರ ಸಾಹಿತ್ಯ ವಹಿಸಿದ ಪಾತ್ರ ಕೆಲವು ಮಿತಿಗಳ ನಡುವೆಯೂ ಮಹತ್ವದ್ದಾಗಿತ್ತು.

ಹೀಗೆ ರಾಷ್ಟ್ರೀಯ ಚಳುವಳಿಯ ಉತ್ಕರ್ಷದ ದಿನಗಳು ಹುಟ್ಟಹಾಕಿದ್ದ ಆಕರ್ಷಣೆ, ವಿಕರ್ಷಣೆಯ ಸಂಗತಿಗಳು ಅವರ ರಾಷ್ಟ್ರೀಯ ತಾತ್ವಿಕತೆಯನ್ನು ಪ್ರಭಾವಿಸಿವೆ ಮತ್ತು ನಿಯಂತ್ರಿಸಿವೆ. ಅದು ಅವರ ಸಾಹಿತ್ಯವನ್ನು ಪರಿಣಾಮದಲ್ಲಿ ಲಾಭನಷ್ಟಗಳಿಗೆ ಕಾರಣವಾಗಿಸಿವೆ.

**ತಿಮ್ಮನಹಳ್ಳಿ ವೇಣುಗೋಪಾಲ್**
ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಹೊಸದುರ್ಗ-೫೭೭೫೨೭, ಚಿತ್ರದುರ್ಗ ತಾಲ್ಲೂಕು

# ಆಕಾಶಗಂಗೆಯ ಅಂಗಳದಲ್ಲಿ ಮಂಗಳ

**ಬೇ**ಸಿಗೆಯ ಧಗೆ ಉತ್ತರ ಕರ್ನಾಟಕದವರಿಗೆ - ಮಾನ್‌ಸೂನ್‌ನ ತಂಗಾಳಿ ದಕ್ಷಿಣ ಭಾಗಕ್ಕೆ - ಮಳೆಯ ಆರ್ಭಟ ಕರಾವಳಿಗೆ, ಇದು ಜೂನ್ ತಿಂಗಳಿನ ವೈಶಿಷ್ಟ್ಯ. ವರ್ಷವಿಡೀ ಉತ್ತರ - ದಕ್ಷಿಣವಾಗಿ ಸ್ವಲ್ಪವೇ ಓಲಾಡುವಂತೆ ಕಾಣುವ ಸೂರ್ಯನ ಚಲನೆ. ''ಸಾಕು, ಸಾಕು'' ಎನ್ನಿಸುವ ಬಿಸಿಲನ್ನು ಕಡಿಮೆ ಮಾಡುವಂತೆ ಸೂರ್ಯ ಉತ್ತರದ ಗರಿಷ್ಠವನ್ನು ಮುಟ್ಟಿ ಹಿಂದೆ ಸರಿಯುತ್ತಾನೆ. ಇದೇ ದಕ್ಷಿಣಾಯನ. ಜೂನ್ ೨೧ರ ಅಪರಾಹ್ಣ ೧ ಗಂಟೆ ೮ ನಿಮಿಷಕ್ಕೆ ದಕ್ಷಿಣಾಯನದ ಆರಂಭ. ಆ ದಿನದ ವೈಶಿಷ್ಟ್ಯ ಇದೊಂದೇ ಅಲ್ಲ. ಅಮಾವಾಸ್ಯೆ ಜೊತೆಗೆ ಸೂರ್ಯಗ್ರಹಣವೂ ಉಂಟು. ಅಪರಾಹ್ಣ ೩ ಗಂಟೆ ೩ ನಿಮಿಷಕ್ಕೆ ಆರಂಭವಾಗುವ ಗ್ರಹಣ ರಾತ್ರಿ ೮ ಗಂಟೆ ೪ ನಿಮಿಷಕ್ಕೆ ಮುಗಿಯುವುದು. ಪೂರ್ಣತೆಯ ನೆರಳು ಆಫ್ರಿಕಾ ಖಂಡವನ್ನು ಹಾದುಹೋಗುವುದು. ಭಾರತಕ್ಕೆ ನೆರಳು ಸೋಂಕುವುದೂ ಇಲ್ಲ.

ಮೋಡಗಳ ನಡುವೆ ಕಣ್ಣುಮುಚ್ಚಾಲೆ ಆಡುವ ನಕ್ಷತ್ರಲೋಕದ ನೋಟವೇ ದುರ್ಲಭ ಆಗಬಹುದು. ಹಾಗೊಮ್ಮೆ ಶುಭ್ರವಾಗಿಲ್ಲದಿದ್ದರೂ ತಿಳಿಮೋಡದ ಆಕಾಶ ದೊರೆತಾಗ, ನೆತ್ತಿಯ ಮೇಲೆ ಕಾಣುವುದು ಏಕಾಂಗಿ ನಕ್ಷತ್ರ ಚಿತ್ರಾ (ಸ್ಪೈಕಾ). ಅದರಿಂದ ಸ್ವಲ್ಪ ಉತ್ತರಕ್ಕೆ ಬೂಟಿಸ್ (ಸಹದೇವ) ಪುಂಜದ ಸ್ವಾತಿ ಹೊಳೆಯುವುದನ್ನು ಕಾಣಬಹುದು. ಎರಡರ ನಡುವಿನ ಬಣ್ಣದ ವ್ಯತ್ಯಾಸವನ್ನು ಗಮನಿಸಿ. ಚಿತ್ರಾ ನೀಲಿ ಬಣ್ಣದ್ದು; ಸ್ವಾತಿ ಕಿತ್ತಲೆ ಬಣ್ಣದ್ದು. ಉತ್ತರದಲ್ಲಿ ಸಪ್ತರ್ಷಿಮಂಡಲ; ದಕ್ಷಿಣದಲ್ಲಿ ತ್ರಿಶಂಕು ಮತ್ತು ಸೆಂಟಾರೆಸ್ ಸ್ಫುಟವಾಗಿ ಕಾಣುವುವು.

ರಾತ್ರಿ ಸುಮಾರು ೮ ಗಂಟೆಯ ಹೊತ್ತಿಗೆ ಆಗ್ನೇಯ ದಿಕ್ಕಿನತ್ತ ಕಣ್ಣು ಹಾಯಿಸಿ. ವೃಶ್ಚಿಕದ ಆಕಾರ ಗುರುತಿಸುವುದು ಸಾಧ್ಯವಾಗುತ್ತದೆ. ದಿಗಂತದ ಅಂಚಿನಲ್ಲಿ ಕಾಣುವ ಕೆಂಪು ಚುಕ್ಕೆ ಮಂಗಳಗ್ರಹ. ಮಿನುಗದೇ ತಟಸ್ಥವಾಗಿ ನಿಲ್ಲುವ ಈ ಕೆಂಪು ಕಾಯ ನಕ್ಷತ್ರಗಳನ್ನು ನಾಚಿಸುವ ಪ್ರಕಾಶ ಪಡೆಯುವುದು. ಭೂಮಿಯಿಂದ ಅದರ ದೂರ ಕನಿಷ್ಠವಾಗುತ್ತಿರುವುದೇ ಪ್ರಕಾಶದ ಗರಿಷ್ಠಕ್ಕೆ ಕಾರಣ. ತೆಳುವಾದ ಮೋಡಗಳ ನಡುವೆಯೂ ತನ್ನ ಅಸ್ತಿತ್ವವನ್ನು ಹೊರಗೆಡಹುವ ಇದನ್ನು ಗುರುತಿಸಲು ನಕ್ಷೆ ಬೇಕಿಲ್ಲ. ಆದರೆ ಇಲ್ಲಿ ನಕ್ಷೆ ಕೊಟ್ಟಿದೆ. ಮಂಗಳದ ಸಹಾಯದಿಂದ ಆಸುಪಾಸಿನ ವಿಲಕ್ಷಣ ಕಾಯಗಳನ್ನು ಗುರುತಿಸಲು ಸಹಾಯವಾಗಲಿ ಎಂಬುದೇ ಉದ್ದೇಶ. ವೃಶ್ಚಿಕ ಮತ್ತು ಧನು ರಾಶಿಗಳ ನಡುವೆ ಕಾಣುವ ಮಂಗಳ ವಾಸ್ತವವಾಗಿ ಒಫಿಯೂಕಸ್ ನಕ್ಷತ್ರಪುಂಜದ ಎಲ್ಲೆಯೊಳಗಿದೆ, ಎಂಬುದನ್ನು ಗಮನಿಸಿ. ಮಂಗಳದ ಪ್ರಕಾಶದ ಹೆಚ್ಚಳವನ್ನು ಗುರುತಿಸಲು ಸಮೀಪದ ಕೆಂಪು ನಕ್ಷತ್ರ ಜ್ಯೇಷ್ಠಾದ ನೆರವು ಪಡೆಯಬಹುದು. ಈ ತಿಂಗಳಲ್ಲಿ ಮಂಗಳ ಅತಿ ಪ್ರಕಾಶಮಾನವಾದ ನಕ್ಷತ್ರ ಸಿರಿಯಸ್‌ಗಿಂತ ಹೆಚ್ಚು ಪ್ರಕಾಶ ಪಡೆಯುವುದು.

ಆಕಾಶಗಂಗೆಯ ಅಂಗಳದಲ್ಲಿ ಓಡುತ್ತಿರುವ ಮಂಗಳದ ಸುತ್ತ, ಮುಕ್ತ ಗುಚ್ಛಗಳು, ಗೋಳೀಯ ಗುಚ್ಛಗಳು, ನೆಬ್ಯುಲಗಳು ಹರಡಿವೆ. ನಕ್ಷೆಯನ್ನು ಬಳಸಿ ಈ ಕಾಯಗಳನ್ನು ಗುರುತಿಸಿ. M ಸಂಖ್ಯೆಗಳನ್ನು ಗುರುತು ಮಾಡಲಾಗಿದೆ. ದುರ್ಬೀನಿದ್ದರೆ ಅನುಕೂಲ. ಮೋಡ ಇಲ್ಲದಾಗ, ಚಂದ್ರನೂ ಇಲ್ಲದಾಗ ಈ ಭಾಗವನ್ನು ಗಮನಿಸಿದಿರಾದರೆ ತೆಳ್ಳನೆಯ ಬಿಳಿ ಪರದೆ ಹರಡಿದಂತೆ ಕಾಣುತ್ತದೆ. ಹಾಲು ಹಾದಿ, ಕ್ಷೀರಪಥ, Milky way ಎಂಬ ಹೆಸರುಗಳೇಕೆ ಸಂದಿವೆ ಎಂದೂ ಸ್ಪಷ್ಟವಾಗುತ್ತದೆ.

ಕಳೆದ ತಿಂಗಳು ಹಿನ್ನಡೆ ನಡೆಸಿದ್ದ ಮಂಗಳ ಈ ತಿಂಗಳು ನೇರ ನಡೆಯಲಿದೆ. ಅಂದರೆ ಧನುರಾಶಿಯತ್ತ ಚಲಿಸುತ್ತದೆ. ದಿನೇ ದಿನೇ ಅದರ ಚಲನೆಯನ್ನು ಗುರುತುಮಾಡಲು ಈ ನಕ್ಷೆಯನ್ನೇ ಬಳಸಬಹುದು (ನಕ್ಷೆಯಲ್ಲಿ ಸೂಚಿಸಿರುವ ಸ್ಥಾನ ೧೦ನೇ ತಾರೀಖಿಗೆ ಅನುಗುಣವಾಗಿದೆ).

ಬೆಳಗಿನ ಜಾವ – ನೈಋತ್ಯದಂಚಿನಲ್ಲಿ ಮಂಗಳ ಪ್ರಕಾಶಿಸಿದರೆ ಪೂರ್ವದಲ್ಲಿ ಶುಕ್ರ ಮುಖ್ಯ ಆಕರ್ಷಣೆಯಾಗಿರುತ್ತದೆ. ತನ್ನ ''ಎತ್ತರ''ದಲ್ಲಿ (ದಿಗಂತದಿಂದ ಅಳೆದ ಕೋನ) ಗರಿಷ್ಠ ಮುಟ್ಟುವ ಶುಕ್ರ ೧೭ರಂದು ಬಾಲಚಂದ್ರನ ಪಕ್ಕದಲ್ಲೇ ಕಾಣುತ್ತದೆ.

ಬುಧಗ್ರಹ ತಿಂಗಳ ಮೊದಲವಾರ ಸಂಜೆ ಪಶ್ಚಿಮದ ಅಂಚಿನಲ್ಲಿ ಕಾಣುವುದಾದರೂ, ತಿಂಗಳ ಕೊನೆಯ ಹೊತ್ತಿಗೆ ಬೆಳಗಿನ ಝಾವ ಕಾಣತೊಡಗುತ್ತದೆ. ಆದರೆ ಸಂಧ್ಯಾಪ್ರಕಾಶದ ಬೆಳಕಿನಲ್ಲಿ ಇದನ್ನು ಹುಡುಕುವುದು ಕಷ್ಟ.

ತಿಂಗಳ ಕೊನೆಯಲ್ಲಿ ಶನಿಗ್ರಹ ಪೂರ್ವದ ಅಂಚಿನಲ್ಲಿ ಬೆಳಗಿನ ಝಾವ ಕಾಣುವುದು. ೬ರಂದು ಹುಣ್ಣಿಮೆ. ಅಂದು ಚಂದ್ರನ ಪಕ್ಕದಲ್ಲಿ ಕಾಣುವ ಕೆಂಪು ಮಂಗಳ; ಸ್ವಲ್ಪ ಅಂತರದಲ್ಲಿ ಕೆಂಪು ನಕ್ಷತ್ರ ಜ್ಯೇಷ್ಠಾ. ಈ ತಿಂಗಳ ಹೆಸರೂ ಜ್ಯೇಷ್ಠಾ. ವಾಸ್ತವವಾಗಿ ೫ರಂದು ಚಂದ್ರ ಜ್ಯೇಷ್ಠಾ ನಕ್ಷತ್ರಕ್ಕೆ ಸಮೀಪವಾಗಿರುತ್ತದೆ. ೧೭ರಂದು ಶುಕ್ರಗ್ರಹದ ಸಮೀಪ ಕಾಣುವ ಚಂದ್ರ ೧೯ರಂದು ಶನಿಗ್ರಹದ ಮುಂದೆಯೇ ಹಾದುಹೋಗುತ್ತದೆ. ಈ ವಿಚಿತ್ರ ''ಗ್ರಹಣ''ದ ನೋಟ ನ್ಯೂಝಿಲೆಂಡ್‌ನವರಿಗೆ ಲಭ್ಯ. ನಮಗೆ ಅವೆರಡೂ ಸಮೀಪವಾಗಿರುವುದು ಮಾತ್ರ ಕಾಣುತ್ತದೆ.

ನಿಯತಕಾಲಿಕವಾಗಿ ಬರುವ ಧೂಮಕೇತು ಷೂಮಾಸ್ ಸಿಂಹರಾಶಿಯಲ್ಲಿ ಚಲಿಸುತ್ತಿದೆ. ಆದರೆ ದುರ್ಬೀನಿನಲ್ಲಿ ಮಾತ್ರ ಕಾಣುವಷ್ಟು ಕ್ಷೀಣವಾಗಿದೆ. ಕಳೆದ ತಿಂಗಳು ಸೂರ್ಯನನ್ನು ಸಮೀಪಿಸಿದ್ದ ಲೀನಿಯರ್ ಧೂಮಕೇತು ಈ ತಿಂಗಳಲ್ಲಿ ಹೆಚ್ಚಿನ ಪ್ರಕಾಶ ಪಡೆಯಬಹುದೆಂಬ ನಿರೀಕ್ಷೆ ಇತ್ತು. ಆದರೆ ಅದು ಎರಡು ಹೋಳಾಗಿ ಹೋಗಿರುವುದರಿಂದ ಎರಡೂ ತುಂಡುಗಳ ಒಟ್ಟು ಪ್ರಕಾಶವೇ ಕುಂದಿದೆ. ಬರಿಗಣ್ಣಿಗೆ ಕಾಣುವಂತಿಲ್ಲ.

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ವೈದ್ಯಕೀಯದಲ್ಲಿ ಹೊಸತು

ಡಾ|| ಸಿ. ಆರ್. ಚಂದ್ರಶೇಖರ್

ವೈದ್ಯವಿಜ್ಞಾನ ಇಂದು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ಅನೇಕ ಕಾಯಿಲೆಗಳ ಕಾರಣಾಂಶಗಳನ್ನು ಪತ್ತೆಮಾಡಿದೆ. ರೋಗನಿದಾನಕ್ಕೆ 'ಹೈಟೆಕ್' ತಂತ್ರಜ್ಞಾನದ ಬಳಕೆಯಾಗುತ್ತಿದೆ. ಅನೇಕ ಔಷಧಗಳ ಮತ್ತು ಚಿಕಿತ್ಸಾ ವಿಧಾನಗಳ ಆವಿಷ್ಕಾರವಾಗಿ, ಸಾವು ನೋವು ತಗ್ಗುತ್ತಿವೆ. ವೈದ್ಯವಿಜ್ಞಾನದಲ್ಲಿ ಅನೇಕ ಶಾಖೆ ಉಪಶಾಖೆಗಳಾಗಿದ್ದು, ಒಂದೊಂದು ಶಾಖೆ ಉಪಶಾಖೆಯಲ್ಲಿ ಸಂಗ್ರಹವಾಗುತ್ತಿರುವ ಜ್ಞಾನವನ್ನು ಒಬ್ಬ ವ್ಯಕ್ತಿ ತನ್ನ ಜೀವಿತ ಕಾಲವನ್ನೆಲ್ಲಾ ಬಳಸಿದರೂ ಅರಗಿಸಿಕೊಳ್ಳಲಾರ. ವಿಜ್ಞಾನ ಮತ್ತು ತಂತ್ರಜ್ಞಾನದ ಅಪರಿಮಿತ ಬೆಳವಣಿಗೆಯಿಂದ ಮನುಷ್ಯ ನಿತ್ಯಜೀವನದಲ್ಲಿ ಆರಾಮವಾಗಿರಲು ಅಸಂಖ್ಯಾತ ವಸ್ತುಗಳನ್ನು, ವ್ಯವಸ್ಥೆಗಳನ್ನು ರೂಪಿಸಿಕೊಂಡಿದ್ದಾನೆ. ಆದರೆ ಆತನ ಆರೋಗ್ಯ ಸುಧಾರಿಸಿದೆಯೇ ? ಯಾವುದಾದರೂ ಕಾಯಿಲೆಗಳನ್ನು ಮೂಲೋತ್ಪಾಟನೆ ಮಾಡಿ ಪ್ರಪಂಚದಿಂದ ಅಟ್ಟಲಾಗಿದೆಯೇ ? ಮನುಷ್ಯರನ್ನು ಕಾಡುವ ಎಲ್ಲ ಕಾಯಿಲೆಗಳಿಗೆ 'ಗುಣ' ಮಾಡುವಂತಹ ಔಷಧೋಪಚಾರಗಳ ಆವಿಷ್ಕಾರವಾಗಿದೆಯೇ ? ಪ್ರಪಂಚದಲ್ಲಿ ಅನಾರೋಗ್ಯದಿಂದ ಬಳಲುವವರ ಸಂಖ್ಯೆ ಕಡಿಮೆಯಾಗಿ, ಆರೋಗ್ಯವಂತರ ಸಂಖ್ಯೆ ಹೆಚ್ಚುತ್ತಿದೆಯೇ ?

ಇಂದು ಹಲವು ಕಾಯಿಲೆಗಳನ್ನಷ್ಟೇ ಗುಣಮಾಡಲು ಸಾಧ್ಯವಾಗಿದೆ. **ಕೊರತೆಯ ಕಾಯಿಲೆಗಳು** : ಮುಖ್ಯವಾಗಿ ಪೌಷ್ಟಿಕಾಂಶಗಳ ಕೊರತೆಯಿಂದ ಬರುವಂತವು. ಉದಾ : ವಿಟಮಿನ್ 'ಎ' ಕೊರತೆಯಿಂದ ಬರುವ ಇರುಳು ಕುರುಡುತನವನ್ನು ಆ ವಿಟಮಿನ್ ಕೊಟ್ಟು ವಾಸಿ ಮಾಡಬಹುದು. ಅಯೋಡಿನ್ ಕೊರತೆಯನ್ನು ತುಂಬಿ 'ಹೈಪೋಥೈರಾಯಿಡಿಸಮ್' ಮತ್ತು 'ಕ್ರೆಟನಿಸಂ'ಅನ್ನು ನಿವಾರಿಸಬಹುದು. ಕಬ್ಬಿಣಾಂಶ, ಫೋಲಿಕ್ ಆಮ್ಲದ ಕೊರತೆಯಿಂದ ಬರುವ ಅನಿಮಿಯಾವನ್ನು ಗುಣಪಡಿಸಬಹುದು. ಡೋಪಮಿನ್ ಕೊರತೆಯಿಂದ ಬರುವ ಖಿನ್ನತೆ ಕಾಯಿಲೆಯನ್ನು 'ಖಿನ್ನತೆ ನಿವಾರಕ ಔಷಧ'ವನ್ನು ಕೊಟ್ಟು ಸರಿಪಡಿಸಬಹುದು. ಹೀಗಿದ್ದರೂ ನಮ್ಮ ದೇಶದಲ್ಲಿ ಅಪೌಷ್ಟಿಕತೆಯಿಂದ ಉಂಟಾಗುವ ಅನೇಕ ಕಾಯಿಲೆಗಳಿಂದ ನಮ್ಮ ಮಕ್ಕಳು, ಗರ್ಭಿಣಿಯರು, ಸ್ತ್ರೀಯರು, ವೃದ್ಧರು ಬಳಲುವುದು ತಪ್ಪಿಲ್ಲ. ನಮ್ಮ ದೇಶದಲ್ಲಿರುವ ಅರ್ಧದಷ್ಟು ಅಂಧರಿಗೆ ಅಂಧತ್ವ ಬರಲು 'ವಿಟಮಿನ್ ಎ' ಕೊರತೆಯೇ ಕಾರಣ. ಶೇಕಡಾ ೪೦ರಷ್ಟು ಜನ ಬಡತನ ರೇಖೆಯಿಂದ ಕೆಳಗಿದ್ದು ಅವರಿಗೆ ಎರಡು ಹೊತ್ತಿನ ಊಟ ಸಿಗದಿರುವುದು ಒಂದು ಕಾರಣವಾದರೆ, ಗರ್ಭಿಣಿಯರಿಗೆ, ಮಕ್ಕಳಿಗೆ ಎಂತಹ ಆಹಾರ ಕೊಡಬೇಕು ಎಂದು ಜನರಿಗೆ ತಿಳಿದಿಲ್ಲದಿರುವುದು ಮತ್ತೊಂದು ಪ್ರಮುಖ ಕಾರಣ. ಉಚಿತವಾಗಿ, ಅವರಿಗೆ ಲಭ್ಯವಾಗುವ ರೀತಿಯಲ್ಲಿ ವೈದ್ಯಕೀಯ ಸೇವಾ ಸೌಲಭ್ಯಗಳು ದೊರೆಯದಿರುವುದೂ ಅಷ್ಟೇ ಪ್ರಮುಖ ಕಾರಣ.




ಆಂಟಿಬಯಾಟಿಕ್‌ಗಳ ಆವಿಷ್ಕಾರದಿಂದ ಲಕ್ಷಾಂತರ ಜನರ ಪ್ರಾಣ ಉಳಿಯಿತು, ಉಳಿಯುತ್ತಾ ಇದೆ. ೧೯೨೮ರಲ್ಲಿ ಸರ್ ಅಲೆಕ್ಸಾಂಡರ್ ಫ್ಲೆಮಿಂಗ್ ಕಂಡುಹಿಡಿದ ಪೆನಿಸಿಲಿನ್‌ನಿಂದ ಹಿಡಿದು ಮೂರನೇ ತಲೆಮಾರಿನ ಸಿಫಾಲೋಸ್ಪೊರಿನ್‌ಗಳು, ಕ್ವಿನೋಲೋನ್‌ಗಳ ವರೆಗೆ, ಹತ್ತಾರು ವಿಶಾಲ ಶ್ರೇಣಿಯ ಆಂಟಿಬಯಾಟಿಕ್‌ಗಳು ಬಳಕೆಯಲ್ಲಿವೆ. ಇವು ಬೆಕ್ಟೀರಿಯಾಗಳನ್ನು ಕೊಲ್ಲಬಲ್ಲವು. ಸ್ವಲ್ಪಮಟ್ಟಿಗೆ ಫಂಗಸ್‌ಗಳನ್ನು ನಾಶಮಾಡಬಲ್ಲವು. ಆದರೆ ವೈರಸ್‌ಗಳನ್ನು ಏನೂ ಮಾಡಲಾರವು. ಹೀಗಾಗಿ ಸರ್ವೇಸಾಮಾನ್ಯವಾದ ನೆಗಡಿಗೆ (common cold) ಇಂದಿಗೂ ಔಷಧವಿಲ್ಲ, ಫ್ಲೂಗೆ ಔಷಧವಿಲ್ಲ, ಚಿಕ್ಕಮ್ಮ (chicken pox), ಗೌತಲಮ್ಮ (Mumps), ದಡಾರ (Measles), ಪೋಲಿಯೋ, ಮಿದುಳು ಜ್ವರ (Viral encephalitis or menengitis), ಏಡ್ಸ್ - ಎಚ್‌ಐವಿ ಸೋಂಕಿಗೆ ಔಷಧವಿಲ್ಲ, ಇಷ್ಟಲ್ಲದೆ, ಆಂಟಿಬಯಾಟಿಕ್‌ಗಳನ್ನು ವಿವೇಚನೆ ಇಲ್ಲದೆ, ವೈದ್ಯರೂ, ರೋಗಿಗಳೂ ಬಳಸುತ್ತಾ ಬಂದು ಅನೇಕ ರೋಗಾಣುಗಳು ಲಭ್ಯವಿರುವ ಎಲ್ಲಾ ಆಂಟಿಬಯಾಟಿಕ್‌ಗಳಿಗೆ 'ಪ್ರತಿರೋಧ' (Resistance)ವನ್ನು ಬೆಳೆಸಿಕೊಂಡಿವೆ. ಹೀಗಾಗಿ ಎಷ್ಟೋ ಸೋಂಕುಗಳಲ್ಲಿ, ಕೊಟ್ಟ ಆಂಟಿಬಯಾಟಿಕ್‌ಗಳು ಕೆಲಸ ಮಾಡದೆ ಹಣ ಶ್ರಮ ವ್ಯರ್ಥವಾಗುತ್ತಿದೆ; ರೋಗಿಗಳ ನರಳಿಕೆ ಮುಂದುವರೆದಿದೆ. ಹೊಸ ಆಂಟಿಬಯಾಟಿಕ್‌ಗಳ ಬೆಲೆ ದುಬಾರಿ ಇದ್ದು ಮಧ್ಯಮ ವರ್ಗದವರಿಗೂ ಅವನ್ನು ಕೊಂಡುಕೊಳ್ಳುವುದು ಕಷ್ಟವಾಗಿದೆ.

ಸಿಡುಬುರೋಗ ಒಂದನ್ನು ಮಾತ್ರ ಪ್ರಪಂಚದಿಂದ ಉಚ್ಚಾಟಿಸಲು ಸಾಧ್ಯವಾಗಿದೆ. ಉಳಿದೆಲ್ಲ ರೋಗಗಳು ಮತ್ತು ಅವುಗಳ ಹಾವಳಿ ಹಾಗೇ ಇದೆ. ಅನೇಕ ರೋಗಗಳು ಒಂದು ಹಂತದಲ್ಲಿ ನಮ್ಮ ಹತೋಟಿಗೆ ಬಂದಿವೆ. ಅವನ್ನು ಉಚ್ಚಾಟಿಸಬಹುದು ಎಂದು ಕೊಳ್ಳುತ್ತಿದ್ದಂತೆಯೇ, ಅವು ಮರುಕಳಿಸಿವೆ. ಉದಾಹರಣೆಗೆ, ಕ್ಷಯ, ಮಲೇರಿಯಾ, ಪ್ಲೇಗ್ ರೋಗಗಳು. ಇದಕ್ಕೆ ಕಾರಣ, ಜನರಲ್ಲಿ ಆರೋಗ್ಯ ಪ್ರಜ್ಞೆ ಬೆಳೆಯಲಿಲ್ಲ. ಮನೆಯ ಒಳಗೆ ಹೊರಗೆ ಸಮಾಜದಲ್ಲಿ ಸ್ವಚ್ಛತೆಯ ಅಗತ್ಯವನ್ನು ಜನ ಅರಿಯಲಿಲ್ಲ. ರೋಗಾಣುಗಳು ಎಲ್ಲಿ ಹುಟ್ಟುತ್ತವೆ, ಹೇಗೆ ಬೆಳೆಯುತ್ತವೆ, ಹೇಗೆ ಹರಡುತ್ತವೆ ಎಂಬುದು ವೈದ್ಯರಿಗೆ ತಿಳಿದಿದೆಯೇ ಹೊರತು, ಜನಸಾಮಾನ್ಯರಿಗೆ ತಿಳಿಸುವ ಕೆಲಸ ಆಗಲಿಲ್ಲ. ರೋಗ ಬಂದರೆ ವೈದ್ಯರಲ್ಲಿಗೆ ಹೋಗಿ, ಔಷಧಿ ತಿನ್ನಬೇಕು ಎಂದು ಜನ ತಿಳಿದರೆ ವಿನಾ ಕಾಯಿಲೆಗಳು ಬರದಂತೆ ಮಾಡಲು ಸಾಧ್ಯವಿದೆ, ಅದು ತಮ್ಮ ಕೈಯಲ್ಲಿಯೇ ಇದೆ ಎಂದು ತಿಳಿದುಕೊಳ್ಳಲಿಲ್ಲ. ಇಂದಿಗೂ ಕುಡಿಯುವ ನೀರಿನ ಮೂಲಗಳಾದ ಕೆರೆ, ಬಾವಿ, ಹೊಳೆ, ನದಿ, ಸರೋವರಗಳಿಗೆ ಮನುಷ್ಯ ಮತ್ತು ಪ್ರಾಣಿಗಳ ಮಲ, ಮೂತ್ರ ಹಾಗೂ ಕೈಗಾರಿಕೆಗಳ ತ್ಯಾಜ್ಯ ವಸ್ತುಗಳು ಸೇರುತ್ತಾ ನೀರಿನ ಮೂಲಕ ಹರಡುವ ಟೈಫಾಯಿಡ್, ಅತಿಸಾರ, ಕಾಲರಾ, ಪೋಲಿಯೋ, ಅಮೀಬಿಯಾಸಿಸ್‌ನಂತಹ ರೋಗಗಳು ಎಲ್ಲೆಡೆ ಕಂಡುಬರುತ್ತವೆ. ಜನಸಂಖ್ಯೆಯ ಶೇಕಡಾ ೯೦ರಷ್ಟು ಜನರ ಕರುಳುಗಳಲ್ಲಿ ಕೊಕ್ಕೆ ಹುಳು, ದುಂಡು ಹುಳು, ದಾರದ ಹುಳು, ಲಾಡಿ ಹುಳುಗಳು ಮನೆಮಾಡಿವೆ. ಹೊಟ್ಟೆ ನೋವು, ಮಲಬದ್ಧತೆ, ಭೇದಿ, ರಕ್ತಹೀನತೆ ಅಪೌಷ್ಟಿಕತೆಗೆ ಕಾರಣವಾಗಿವೆ. ಯಾವುದೇ ಶಾಲೆಯಲ್ಲಿ ಶೇ. ೪೦ರಿಂದ ೫೦ ಮಕ್ಕಳು ಈ ಮೂಲದ ತೊಂದರೆಗಳಿಂದ ಬಳಲುತ್ತಿದ್ದಾರೆ.

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸೋಂಕು ರೋಗಗಳನ್ನು ಬಹುಮಟ್ಟಿಗೆ ತಡೆಗಟ್ಟಿದ್ದಾರೆ. ಇದಕ್ಕೆ ಕಾರಣ ಸ್ವಚ್ಛತೆಗೆ ಅವರು ಕೊಡುವ ಪ್ರಾಮುಖ್ಯತೆ. ವೈಯಕ್ತಿಕ ಸ್ವಚ್ಛತೆ, ಮನೆಯ ಒಳಗೆ ಮತ್ತು ಹೊರಗೆ ವಾಸಸ್ಥಳಗಳ ಸ್ವಚ್ಛತೆ, ತ್ಯಾಜ್ಯವಸ್ತುಗಳ ಸರಿಯಾದ ವಿಲೇವಾರಿ, ಕುಡಿಯುವ ನೀರು ಮತ್ತು ಸೇವಿಸುವ ಆಹಾರದ ಶುದ್ಧತೆ ಇವು ಈ ಸಾಧನೆಗೆ ಕಾರಣವಾಗಿವೆ. ಇದನ್ನು ನಾವು ಅವರಿಂದ ಕಲಿಯಬೇಕು.

ಆದರೆ, ಅಸಾಂಕ್ರಾಮಿಕ ರೋಗಗಳ ಹಾವಳಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ದಿನೇ ದಿನೇ ಏರುತ್ತಿದೆ. ನಮ್ಮ ದೇಶವೂ ಇದರಲ್ಲಿ ಹಿಂದೆ ಬಿದ್ದಿಲ್ಲ. ಅಧಿಕ ರಕ್ತದೊತ್ತಡ, ಹೃದ್ರೋಗಗಳು, ಸಿಹಿಮೂತ್ರರೋಗ, ಬೊಜ್ಜು, ಕೀಲುಗಳ ಉರಿತ, ಕ್ಯಾನ್ಸರ್, ದೀರ್ಘಕಾಲ ಕಾಡುವ ಒತ್ತಡದ ತಲೆನೋವು ಮತ್ತು ಮೈಗ್ರೇನ್ ತಲೆನೋವು, ರಕ್ತನಾಳಗಳು ಕಟ್ಟಿಕೊಳ್ಳುವ ಕಾಯಿಲೆಗಳು ಇತ್ಯಾದಿ. ಈ ಕಾಯಿಲೆಗಳೆಲ್ಲ

ಮಾನಸಿಕ ಒತ್ತಡದಿಂದ ಬರುವಂತಹ ಕಾಯಿಲೆಗಳು – ಮನೋದೈಹಿಕ ರೋಗಗಳು. ಇದರ ಜೊತೆಗೆ ಮಾನಸಿಕ ಕಾಯಿಲೆಗಳಾದ ಖಿನ್ನತೆ, ಆತಂಕ, ಡಿಮೆನ್ಷಿಯಗಳೂ ಹೆಚ್ಚುತ್ತಿವೆ. ಅಪಘಾತ, ಆತ್ಮಹತ್ಯೆ, ಹಿಂಸಾಚಾರ, ಅಪರಾಧ ಪ್ರವೃತ್ತಿಯೂ ಏರುತ್ತಿದೆ. ಇವಕ್ಕೆಲ್ಲಾ ಪ್ರೇರಣೆ ನೀಡುವ ಅಂಶಗಳೆಂದರೆ,

೧. ವಿಪರೀತ ಸ್ಪರ್ಧೆ, ಅನಿಶ್ಚಯತೆ, ಅಭದ್ರತೆ;
೨. ಮಹತ್ವಾಕಾಂಕ್ಷೆ, ಹೆಚ್ಚಿದ ಸ್ವಾರ್ಥ;
೩. ಕುಟುಂಬ ವ್ಯವಸ್ಥೆ ಸಡಿಲಗೊಳ್ಳುತ್ತಾ, ವ್ಯಕ್ತಿಕೇಂದ್ರವಾದ ವ್ಯವಸ್ಥೆ ಬರುತ್ತಿರುವುದು, ವಿಚ್ಛೇದನಗಳು ಹೆಚ್ಚುತ್ತಿರುವುದು, ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿರುವುದು;
೪. ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಕೇವಲ ವ್ಯಾವಹಾರಿಕ ಮಟ್ಟವನ್ನು ಮುಟ್ಟಿರುವುದು. ಸಾಮಾಜಿಕ ಸಂಬಂಧಗಳು, ಆಸರೆಗಳು ಇಲ್ಲವಾಗುತ್ತಿರುವುದು;
೫. ನೈತಿಕ ಮೌಲ್ಯಗಳು ಕುಸಿದಿರುವುದು, ಹಣಕ್ಕೇ ಪ್ರಾಧಾನ್ಯತೆ;
೬. ಕಟ್ಟುಪಾಡುಗಳಿಲ್ಲದ, ಮುಕ್ತ ಹಾಗೂ ಸ್ವೇಚ್ಛಾಚಾರದ ಲೈಂಗಿಕ ಚಟುವಟಿಕೆಗಳು;
೭. ಹೆಚ್ಚುತ್ತಿರುವ ಅಸಮಾನತೆ, ಅವ್ಯವಸ್ಥೆ, ಶೋಷಣೆಗಳು;
೮. ವಲಸೆ, ಕಿಕ್ಕಿರಿದು ತುಂಬಿರುವ ಬೆಳೆಯುತ್ತಿರುವ ನಗರ ಹಾಗೂ ಪಟ್ಟಣಗಳು ಮತ್ತು ಅಲ್ಲಿನ ಪರಿಸರ ಮಾಲಿನ್ಯ;
೯. ಮದ್ಯಸಾರ, ಹೊಗೆಸೊಪ್ಪು, ಮಾದಕ ವಸ್ತುಗಳು ಸುಲಭವಾಗಿ ಎಲ್ಲೆಡೆ ಲಭ್ಯವಿರುವುದು, ಜನ ಅದನ್ನು ಬಳಸುತ್ತಿರುವುದು;
೧೦. ಹೆಚ್ಚುತ್ತಿರುವ ಮಾನಸಿಕ ಗೊಂದಲ, ದ್ವಂದ್ವ, ಅತೃಪ್ತಿ, ಅಸಮಾಧಾನಗಳು, ಚಿಂತೆ ವ್ಯಥೆಗಳು, ಭಯ, ನಿರಾಶೆಗಳು.

ಹೀಗಾಗಿ ೧೯೯೦ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ಪ್ರಕಟಿಸಿರುವ ಮಾಹಿತಿ ಹೀಗಿದೆ : ಪ್ರಪಂಚದಾದ್ಯಂತ, ಜನರ ಸಾವಿಗೆ ಕಾರಣವಾಗುವ **ಟಾಪ್** ೧೦ ಕಾಯಿಲೆಗಳಿವು :

೧. ಉಸಿರಾಟದ ವ್ಯವಸ್ಥೆಯ ಕೆಳಭಾಗದ ಸೋಂಕುಗಳು – ಶ್ವಾಸಕೋಶಗಳು – ಶ್ವಾಸನಾಳಗಳ ಕಾಯಿಲೆಗಳು ;
೨. ಹೃದಯಕ್ಕೆ ರಕ್ತ ಪೂರೈಸುವ ರಕ್ತನಾಳಗಳು ಕಟ್ಟಿಕೊಳ್ಳುವ ಕಾಯಿಲೆಗಳು; ಹೃದಯಾಘಾತ. (Ischaemic Heart Disease);
೩. ಮಿದುಳಿಗೆ ರಕ್ತ ಪೂರೈಕೆಯಲ್ಲಿ ಆಗುವ ಅಡೆತಡೆಗಳ ಕಾಯಿಲೆಗಳು – ಲಕ್ವ (Cerebro - vascular diseases);
೪. ಭೇದಿ – ಅತಿಸಾರ;
೫. ಹೆರಿಗೆ ನಂತರದ ತೊಂದರೆಗಳು (ಹೆಚ್ಚು ರಕ್ತ ಸ್ರಾವ, ಸೋಂಕು, ಹೆರಿಗೆ ಕಷ್ಟವಾಗಿ ತಾಯಿ ಮತ್ತು ಮಗು ನಿತ್ರಾಣಗಳಾಗುವುದು);
೬. ಕ್ಷಯರೋಗ;
೭. ಶ್ವಾಸಕೋಶಕ್ಕೆ ಸಂಬಂಧಿಸಿದ ಕಾಯಿಲೆಗಳು;
೮. ದಡಾರ;
೯. ಮಲೇರಿಯಾ;
೧೦. ರಸ್ತೆ ಅಪಘಾತಗಳು.

ಹಾಗೆಯೇ, ವ್ಯಕ್ತಿಗಳ ದೈಹಿಕ ಮತ್ತು ಮಾನಸಿಕ ಶಕ್ತಿ ಸಾಮರ್ಥ್ಯಗಳನ್ನು ಕುಗ್ಗಿಸಿ, ಅವರು ದುರ್ಬಲರಾಗುವಂತೆ ಮಾಡುವ (Disability producing) ಟಾಪ್ ೧೦ ಕಾಯಿಲೆಗಳಿವು:

೧. ತೀವ್ರ ಮಟ್ಟದ, ಒಳಜನ್ಯ ಖಿನ್ನತೆ;
೨. ರಕ್ತ ಕೊರೆ, ಅನಿಮಿಯಾ;
೩. ಅಪಘಾತ, ಬೀಳುವುದರಿಂದ ಆಗುವ ಗಾಯಗಳು, ಪೆಟ್ಟುಗಳು ;
೪. ಮದ್ಯಪಾನ ಸೇವನೆ ಮತ್ತು ಚಟ ;
೫. ಶ್ವಾಸಕೋಶದ ಕಾಯಿಲೆಗಳು ;
೬. ಮೇನಿಯಾ - ಖಿನ್ನತೆ - ಕಾಯಿಲೆ (Bipolar Mood Disorders) ;
೭. ಆಜನ್ಮ ನ್ಯೂನತೆಗಳು ;
೮. ಮೂಳೆ ಮತ್ತು ಕೀಲುಗಳ ಉರಿತ (Osteo-arthritis) ;
೯. ಸ್ಕಿಜೋಫ್ರೀನಿಯಾ ಮನೋರೋಗ ;
೧೦. ಗೀಳು ಮನೋರೋಗ (Obsessive compulsive disorder).




ಪ್ರಪಂಚದಾದ್ಯಂತ ಕಂಡುಬರುವ 'ಡಿಸೆಬಿಲಿಟಿ' (ಮೈಮನಗಳ ಶಕ್ತಿ ಸಾಮರ್ಥ್ಯದ ನಷ್ಟ)ಯಲ್ಲಿ ಶೇಕಡಾ ೧೧ರಷ್ಟು ಜನರಲ್ಲಿ ಡಿಸೆಬಿಲಿಟಿಗೆ ಮಾನಸಿಕ ಕಾಯಿಲೆಗಳೇ ಕಾರಣ ಎಂದು ವರದಿಯಾಗಿದೆ. ಪ್ರತಿವರ್ಷ ೧೦ ಲಕ್ಷ ಜನ ಮನೋಕ್ಲೇಶಗಳಿಂದ ಜೀವನದಲ್ಲಿ ಜಿಗುಪ್ಸೆ ಹೊಂದಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಭಾರತದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವವರ ಸಂಖ್ಯೆ ಪ್ರತಿವರ್ಷ ಒಂದು ಲಕ್ಷ! ಆದರೆ ಮಾನಸಿಕವಾಗಿ ನೊಂದವರಿಗೆ, ಕಾಯಿಲೆ ಬಿದ್ದವರಿಗೆ ಚಿಕಿತ್ಸೆ ನೀಡಲು ಇರುವ ಮಾನಸಿಕ ಆಸ್ಪತ್ರೆಗಳ ಸಂಖ್ಯೆ ಕೇವಲ ೪೦. ಮೂರು ಲಕ್ಷ ಜನಸಂಖ್ಯೆಗೆ ಒಬ್ಬರಂತೆ, ಇಡೀ ದೇಶದಲ್ಲಿರುವ ಮನೋವೈದ್ಯರ ಸಂಖ್ಯೆ ಕೇವಲ ೩,೦೦೦ !

ಇಂದು ನಮ್ಮ ದೇಶದಲ್ಲಿ 'ಇನ್‌ವಿಟ್ರೋಫರ್ಟಿಲೈಸೇಶನ್' ಮಾಡಿ ಟೆಸ್ಟ್ ಟ್ಯೂಬ್ ಬೇಬಿಗಳನ್ನು ಸೃಷ್ಟಿಸುತ್ತಿರುವ ತಜ್ಞರಿದ್ದಾರೆ. ಹೃದಯದ ಕಸಿ ಮಾಡುವ ಸರ್ಜನ್‌ಗಳಿದ್ದಾರೆ. ಅತ್ಯಾಧುನಿಕ ರೀತಿಯ ಉಪಕರಣಗಳನ್ನು ಅಳವಡಿಸಿ ಶಸ್ತ್ರಕ್ರಿಯೆ ಮಾಡುವ ಆರ್ಥೋಪಿಡಿಕ್ ಸರ್ಜನ್‌ಗಳಿದ್ದಾರೆ. ಪೊರೆಹಿಡಿದ ಮಸೂರವನ್ನು ಅಲ್ಲೇ ಕರಗಿಸಿ, ಹೀರಿ ತೆಗೆದು, ಅದರ ಜಾಗದಲ್ಲಿ ಆಧುನಿಕ ಕೃತಕ ಮಸೂರವನ್ನಿಟ್ಟು ದೃಷ್ಟಿ ಕೊಡುವ ನೇತ್ರತಜ್ಞರಿದ್ದಾರೆ. ಒಂದು ತೊಟ್ಟು ರಕ್ತವನ್ನು 'ಫೀಡ್' ಮಾಡಿದರೆ ಇಡೀ ರಕ್ತದ ಸಂಪೂರ್ಣ ವಿವರಗಳನ್ನು ಕೊಡುವ ಹೈಟೆಕ್ ಯಂತ್ರಗಳಿರುವ ಆಸ್ಪತ್ರೆಗಳಿವೆ. ಸಿ.ಟಿ.ಸ್ಕ್ಯಾನ್, ಎಂ.ಆರ್.ಐ., ಅಲ್ಟ್ರಾಸೌಂಡ್ ಯಂತ್ರಗಳು, ಇ.ಸಿ.ಜಿ., ಇ.ಇ.ಜಿ., ಎಲೆಕ್ಟ್ರೋ ಮೈಯೋಗ್ರಾಂ, ಲೇಸರ್ ಚಿಕಿತ್ಸೆ, ಮೂತ್ರನಾಳದಲ್ಲಿರುವ ಕಲ್ಲುಗಳನ್ನು ಕರಗಿಸಿ ಶಸ್ತ್ರಚಿಕಿತ್ಸೆ ಇಲ್ಲದೆಯೇ ಹೊರಹೋಗುವಂತೆ ಮಾಡುವ ವ್ಯವಸ್ಥೆ ಎಲ್ಲಾ ಇವೆ. ಹೊರದೇಶಗಳಲ್ಲಿ ಹೆಸರು ಮಾಡಿ ಅತ್ಯಂತ ಮೇಧಾವಿ ಹಾಗೂ ಕರಕೌಶಲ್ಯ ಉಳ್ಳ ತಜ್ಞವೈದ್ಯರು ಇದ್ದಾರೆ. ಆದರೆ ಇವುಗಳ ಮತ್ತು ಇವರ ಸೇವೆ ಮತ್ತು ಸಹಾಯ ಎಷ್ಟು ಜನರಿಗೆ ಸಿಗುತ್ತದೆ ? ಜನಸಂಖ್ಯೆಯ ಶೇಕಡಾ ಒಂದರಷ್ಟು ಜನರಿಗೂ ಈ ಸೌಲಭ್ಯಗಳು ಸಿಗುವುದಿಲ್ಲ ಎಂಬುದು ವಾಸ್ತವಿಕ ಕಟುಸತ್ಯ.

ಜನಸಂಖ್ಯೆಯ ಶೇಕಡಾ ೨೫ರಷ್ಟು ಜನರಿರುವ ನಗರ ಪ್ರದೇಶಗಳಲ್ಲೇ ಈ ಎಲ್ಲ ಆಧುನಿಕ ವೈದ್ಯಕೀಯ ಸೌಲಭ್ಯಗಳು ಮತ್ತು ತಜ್ಞರು ಇದ್ದಾರೆ. ಜನಸಂಖ್ಯೆಯ ಶೇಕಡಾ ೭೫ರಷ್ಟು ಜನರಿರುವ ಗ್ರಾಮೀಣ ಪ್ರದೇಶಗಳಲ್ಲಿ ಇರುವವರು ನಾಟಿವೈದ್ಯರು, ಅಳಲೆಕಾಯಿ ಪಂಡಿತರು, ನಿರಾಶೆ - ನಿರುತ್ಸಾಹಗಳಿಂದ ಬಳಲುವ ಎಂಬಿಬಿಎಸ್ ವೈದ್ಯರು, ಔಷಧಗಳಿಲ್ಲದ, ಲ್ಯಾಬ್ ಇಲ್ಲದ, ಶಸ್ತ್ರಕ್ರಿಯಾ ಕೊಠಡಿ ಇಲ್ಲದ, ಬೆಡ್-ಬೆಡ್‌ಶೀಟ್ ಇಲ್ಲದ ಪ್ರಾಥಮಿಕ ಆರೋಗ್ಯ ಕೇಂದ್ರಗಳು ! ಪ್ರತಿ ೧೫೦೦ ಜನರಿಗೆ ಒಬ್ಬರಂತೆ ವೈದ್ಯರಿದ್ದರೂ, ಅವರೆಲ್ಲ ನಗರ-ಪಟ್ಟಣವಾಸಿಗಳ ಸೇವೆಯಲ್ಲಿ ನಿರತರಾಗಿದ್ದಾರೆ, ಪರಸ್ಪರ ಸ್ಪರ್ಧಿಸುತ್ತಾ, ಅನೈತಿಕ, ಅವೈಜ್ಞಾನಿಕ ಪ್ರಾಕ್ಟೀಸ್‌ನಲ್ಲಿ ತೊಡಗಿದ್ದಾರೆ.

**ಖಾಸಗೀಕರಣ ಮತ್ತು ವ್ಯಾಪಾರೀಕರಣ**

ಕಳೆದ ಹತ್ತು ವರ್ಷಗಳಲ್ಲಿ ವೈದ್ಯಕೀಯ ಕ್ಷೇತ್ರದಲ್ಲಿ ಖಾಸಗೀಕರಣ ಮತ್ತು ವ್ಯಾಪಾರೀಕರಣ ನಿರಂತರವಾಗಿ ನಡೆದಿದೆ. ಎಲ್ಲೆಡೆ ಖಾಸಗಿ ಚಿಕಿತ್ಸಾಲಯಗಳು, ನರ್ಸಿಂಗ್ ಹೋಂಗಳು ಹೈಟೆಕ್ ಆಸ್ಪತ್ರೆಗಳು ತಲೆಯೆತ್ತಿವೆ. ಅಲ್ಲಿ ಕುಳಿತರೆ ದುಡ್ಡು, ನಿಂತರೆ, ಉಸಿರಾಡಿದರೆ ದುಡ್ಡು ಕೊಡಬೇಕು. ಅಮೃತಶಿಲೆಯ ನೆಲಹಾಸು, ಫಳಫಳನೆ ಹೊಳೆಯುವ ಗೋಡೆಗಳು, ಹವಾನಿಯಂತ್ರಣ, ಸಿನೇಮಾ ಶೂಟಿಂಗ್‌ಗೆ ಸಜ್ಜಾಗಿರುವಂತೆ ಅಲಂಕೃತಗೊಂಡ ಸಿಬ್ಬಂದಿ ಕಣ್ಣು ಕುಕ್ಕುವ ಹೈಟೆಕ್ ಯಂತ್ರಗಳನ್ನು ಇಟ್ಟುಕೊಂಡು ಇದೇ ಉತ್ತಮ ವೈದ್ಯ ಸೇವೆ ಎಂದು ಇವುಗಳ ಮಾಲಿಕರು ಹೇಳುತ್ತಾರೆ. ಜನರೂ ನಂಬುತ್ತಾರೆ. ಇಂದು ಸರ್ಕಾರಿ

ಆಸ್ಪತ್ರೆಗೆ ಯಾರೂ ಹೋಗಲಿಚ್ಛಿಸುವುದಿಲ್ಲ. ದರಿದ್ರರು, ಕಡುಬಡವರು, ವಿಧಿ ಇಲ್ಲದೆ ಹೋಗುತ್ತಾರೆ. ಸರ್ಕಾರಿ ವೈದ್ಯರು, ನರ್ಸ್‌ಗಳು ಖಾಸಗಿಯಾಗಿ ಪ್ರಾಕ್ಟೀಸ್ ಮಾಡುತ್ತಾರೆ. ಈ ವ್ಯವಸ್ಥೆಯಲ್ಲಿ 'ರೋಗಿಗಳು' ಒಂದು ಬಂಡವಾಳ, ಶೋಷಣೆಗೆ ಒಳಗಾಗುವ ನತದೃಷ್ಟರು. ರೋಗನಿದಾನಕ್ಕೆ ದುಬಾರಿ ಚಿಕಿತ್ಸಾ ವಿಧಾನಗಳಿಗೇ ಮೊದಲ ಆದ್ಯತೆ. ರೋಗ ಗುಣವಾದರೆ, ರೋಗಿ ಉತ್ತಮಗೊಂಡರೆ ಅದೊಂದು ಆಕಸ್ಮಿಕ ಅಷ್ಟೆ. ರೋಗ ತಡೆಗೆ, ನಿವಾರಣಾ - ಮುಂಜಾಗ್ರತೆ ಕ್ರಮಗಳಿಗೆ ಯಾವ ಗಮನವೂ ಇಲ್ಲ. ಆದರೆ ಇದನ್ನೇ 'ವೈದ್ಯಕೀಯದಲ್ಲಿ ಹೊಸತು' ಎಂದು ಜನ ತಿಳಿದಿರುವುದು ಒಂದು ದೊಡ್ಡ ದುರಂತ.

ಆಧುನಿಕ ವೈದ್ಯ ವಿಜ್ಞಾನದ ಈ ಕೆಟ್ಟ ಪ್ರದರ್ಶನವನ್ನು ಕಂಡ ಜನ ಈಗ ಪರ್ಯಾಯ ವೈದ್ಯ ವ್ಯವಸ್ಥೆಗಳತ್ತ ನೋಡುತ್ತಿದ್ದಾರೆ. ಹಳೆಯ ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಯೋಗ, ಧ್ಯಾನ, ಪ್ರಾಣಾಯಾಮಗಳ ಮೊರೆ ಹೋಗುತ್ತಿದ್ದಾರೆ. ಬೇರೆಡೆಯಿಂದ ಬಂದ ಹೋಮಿಯೊಪತಿ, ಯುನಾನಿ, ರೇಖಿ, ಆಕುಪಂಕ್ಚರ್, ಆಕುಪ್ರೆಶರ್, ಪ್ರಾನಿಕ್ ಹೀಲಿಂಗ್, ಮೆಗ್ನೆಟೋ ಥೆರಪಿ, ವಿಪಸ್ಸನಾ ಇತ್ಯಾದಿಗಳನ್ನೂ ಒಂದು ಕೈ ನೋಡುತ್ತಿದ್ದಾರೆ. ಹಳೆಯ ಶಾಸ್ತ್ರಗಳೆಲ್ಲ ಈಗ ಹೊಸ ಉಡುಗೆ ತೊಟ್ಟು 'ನಮ್ಮದೂ ವೈಜ್ಞಾನಿಕ ಶಿಸ್ತೇ' ಎಂದು ಹೇಳುತ್ತಿರುವುದು ಎಷ್ಟು ನಿಜ ? ಪ್ರಜ್ಞಾವಂತರು ಯೋಚಿಸಬೇಕು. ಮಾಹಿತಿಗಳನ್ನು ಕಲೆ ಹಾಕಿ ವಿಶ್ಲೇಷಿಸಬೇಕು.

ಕಾಯಿಲೆಗಳು ಬರದಂತೆ ಮಾಡಲು, ವ್ಯಕ್ತಿ ನಿರೋಗಿಯಾಗಿರುವುದಷ್ಟೇ ಅಲ್ಲ, ಆರೋಗ್ಯವಂತನಾಗಿ ಆನಂದವಾಗಿರಲು ಸಾಧ್ಯವಿದೆ. ಇದು ಪ್ರಾಚೀನ ಭಾರತದ ಕೊಡುಗೆ.

೧. **ಹಿತಮಿತ ಆಹಾರ ಸೇವನೆ** : ಹಸಿವಿಲ್ಲದೇ ಏನನ್ನೂ ತಿನ್ನಬಾರದು, ಹಸಿವಾಗಿ ಉಣದಿರಬಾರದು. ಸುಲಭವಾಗಿ ಜೀರ್ಣವಾಗಬಲ್ಲ ಹಸಿರು ಸೊಪ್ಪು, ತರಕಾರಿ, ಹಣ್ಣು, ಹಾಲು, ಕಾಳುಗಳು, ಸಾತ್ವಿಕ ಸಸ್ಯಾಹಾರ ಸೇವನೆ. ಉಪ್ಪು, ಹುಳಿ, ಖಾರ, ಎಣ್ಣೆ ಜಿಡ್ಡು, ಸಿಹಿ ತಗ್ಗಿಸಿ.

೨. **ಸ್ವಚ್ಛತೆಯೇ ದೇವರು** : ಆಹಾರ ಸೇವಿಸುವ ಮೊದಲು, ಆಹಾರ ಪದಾರ್ಥಗಳನ್ನು ಮುಟ್ಟುವಾಗ, ತಯಾರು ಮಾಡಿ ಬಡಿಸುವಾಗ, ಕೈಗಳು ಸ್ವಚ್ಛವಾಗಿರಬೇಕು. ನಿತ್ಯ ಸ್ನಾನ, ಮನೆಯ ಒಳಗೆ ಹೊರಗೆ ಸ್ವಚ್ಛತೆಗೆ ಗಮನ ನೀಡಿ.

೩. **ವ್ಯಾಯಾಮ** : ನಡಿಗೆ, ಓಟ, ಈಜು, ಆಟ, ಯೋಗಾಸನಗಳು ನಿತ್ಯವೂ ಇರಬೇಕು.

೪. **ಪ್ರಸನ್ನ ಮನಸ್ಸು** : ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಹತೋಟಿಯಲ್ಲಿಡಬೇಕು. ಸರಳ, ತೃಪ್ತ ಜೀವನ ಮಾಡಬೇಕು. ಕಷ್ಟ ಸುಖಗಳನ್ನು ಸಮಭಾವದಿಂದ ಸ್ವೀಕರಿಸಬೇಕು. ದೇವರ ಧ್ಯಾನ, ಆಧ್ಯಾತ್ಮಿಕ ಚಟುವಟಿಕೆಗಳಿಂದ ಮನಸ್ಸಿಗೆ ನೆಮ್ಮದಿ. ಸ್ವಾರ್ಥಕ್ಕಿಂತ ಪರ ಹಿತ, ಪರೋಪಕಾರಕ್ಕೆ ಹೆಚ್ಚು ಗಮನ ನೀಡಿ.

೫. **ಆರೋಗ್ಯಕರ ಮನರಂಜನೆ** : ಸಂಗೀತ ಶ್ರವಣ, ಓದು, ಪ್ರವಾಸ, ಚಿತ್ರಕಲೆ, ನಾಟ್ಯ, ನಾಟಕ, ಕಲಾವಸ್ತುಗಳ ಸೃಷ್ಟಿ, ಧಾರ್ಮಿಕ ಪುಸ್ತಕಗಳ ಪಠಣ, ಸ್ನೇಹಪೂರ್ಣ ಆಟಗಳು ದೇಹ ಮತ್ತು ಮನಸ್ಸುಗಳಿಗೆ ಹಿತವನ್ನು ನೀಡಬಲ್ಲವು. ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸಬಲ್ಲವು.

**ಸಿ. ಆರ್. ಚಂದ್ರಶೇಖರ್**
ಟೈಪ್-೫, ಬ್ಲಾಕ್ ೨, ನಂ. ೧೫, ನಿಮ್ಹಾನ್ಸ್ ಕ್ವಾರ್ಟರ್ಸ್
ಬೆಂಗಳೂರು- ೫೬೦ ೦೨೯

# ಏಡ್ಸ್ ಪಿಡುಗು ನಿಜವೇ

ಜನವರಿ ೨೦ನೇ ದಿನಾಂಕ ಗೌಹಾತಿ ನಗರದಲ್ಲಿ ಒಂದು ಸಭೆ ನಡೆಯಿತು. ಸಭೆಗೆ ಮುಖ್ಯ ಅತಿಥಿ ಪುರುಷೋತ್ತಮನ್ ಮುಲ್ಲೊಲ್ಲಿ. ಅವರು ತಮ್ಮ ಭಾಷಣದಲ್ಲಿ ಕೆಲವು ಸಂಗತಿಗಳನ್ನು ಹೊರಗೆಡಹಿದರು. ಈ ಸಂಗತಿಗಳು ನಿಂತ ನೆಲವನ್ನೇ ನಡುಗಿಸುವಂಥವು. ಪುರುಷೋತ್ತಮನ್ ಅವರು ನ್ಯಾಕೋ ಸಂಸ್ಥೆಯು ನೀಡುವ ಸುಳ್ಳು ಅಂಕಿ ಸಂಖ್ಯೆಗಳನ್ನು ಬೆಳಕಿಗೆ ತಂದರು. ನ್ಯಾಕೋ ಅಂದರೆ ನ್ಯಾಶನಲ್ ಏಡ್ಸ್ ಕಂಟ್ರೋಲ್ ಆರ್ಗನೈಸೇಶನ್. ನ್ಯಾಕೋ ೧೯೯೬ರಲ್ಲಿ ಒಂದು ಪ್ರಕಟಣೆ ಹೊರಡಿಸಿತು. ಅದರಲ್ಲಿ ೧೯೮೬ರಿಂದ ೧೯೯೬ ರವರೆಗೆ ತಾನು ೪೦,೫೫೮ ಜನರ ರಕ್ತ ತಪಾಸಣೆ ಮಾಡಿದ್ದಾಗಿದೆ ಎಂದು ಹೇಳಿತು. ಇವರಲ್ಲಿ ೩,೭೧೨ ಜನರು ಎಚ್.ಐ.ವಿ. ಪಾಸಿಟಿವ್ ಎಂದು ತಿಳಿಯಿತೆಂದು ಸಾರಿತು. ತನ್ನ ಕಾರ್ಯವನ್ನು ನ್ಯಾಕೋ ಮುಂದುವರೆಸಿತಂತೆ. ಎರಡು ವರ್ಷಗಳ ನಂತರ ತನ್ನ ಅಂಕಿ ಸಂಖ್ಯೆಗಳನ್ನು ಮತ್ತೆ ಬಿಡುಗಡೆ ಮಾಡಿತು. ಅದರಂತೆ ೧೯೮೬ ರಿಂದ ೧೯೯೮ರವರೆಗೆ ಅದು ೨೯,೯೭೫ ಜನರ ರಕ್ತವನ್ನು ಪರೀಕ್ಷಿಸಿತಂತೆ. ಈ ಪರೀಕ್ಷೆಯಿಂದ ೫,೩೨೭ ಜನರು ಪಾಸಿಟಿವ್ ಎಂದು ಕಂಡುಬಂದಿದೆಯಂತೆ. ಪುರುಷೋತ್ತಮನ್ ಅವರ ಪ್ರಶ್ನೆ ಎಂದರೆ ಈ ಎರಡು ಹೇಳಿಕೆಗಳಲ್ಲಿ ಯಾವುದು ದಿಟ ? ೧೯೮೬ ರಿಂದ ೧೯೯೬ ರವರೆಗೆ ಅವರು ಪರೀಕ್ಷಿಸಿದ ಜನರು ೪೦,೫೫೮. ಈ ಪರೀಕ್ಷೆಯನ್ನು ಮತ್ತೆರಡು ವರ್ಷ ಮುಂದುವರೆಸಿದರೆ ಒಟ್ಟು ಸಂಖ್ಯೆ ೪೦,೫೫೮ಕ್ಕಿಂತಾ ಅಧಿಕವಾಗಬೇಕು. ಅದಾಗದೆ ೧೯೯೮ರಲ್ಲಿ ಒಟ್ಟು ಸಂಖ್ಯೆ ೨೯,೯೭೫ ಆಗಿದೆ ಎಂದು ಪ್ರಕಟಿಸಿದೆ. ಇನ್ನು ಪಾಸಿಟಿವ್ ಇದ್ದವರ ಸಂಖ್ಯೆ ೫,೩೨೭ ಎಂದು ಹೇಳಿದೆ. ಪುರುಷೋತ್ತಮನ್ ಅವರಿಗೆ ಅನಿಸಿದ್ದು ನ್ಯಾಕೋ ಸಂಸ್ಥೆ ಸುಳ್ಳು ಸಂಖ್ಯೆಗಳನ್ನು ಸೃಷ್ಟಿಸಿ ಜನರಲ್ಲಿ ಭಯವನ್ನು ಹುಟ್ಟಿಸುತ್ತಲಿದೆ, ಎಂದು.

ವಿಶ್ವ ಸಂಸ್ಥೆಯು ತನ್ನ ವಾರ್ಷಿಕ ವರದಿ ಸಲ್ಲಿಸಿದೆ. ಅದರಲ್ಲಿ ಭಾರತದಲ್ಲಿ ಏಡ್ಸ್‌ದಿಂದ ೧೯೯೯ರ ಒಂದೇ ವರ್ಷದಲ್ಲಿ ೩,೧೦,೦೦೦ ಜನ ಸತ್ತಿರುವರು ಎಂದಿದೆ. ಆದರೆ ನ್ಯಾಕೋ ಸಂಸ್ಥೆಯ ಹೇಳಿಕೆಯಂತೆ ೧೯೮೬ ರಿಂದ ೨೦೦೦ ಇಸ್ವಿಯವರೆಗೆ ಭಾರತದಲ್ಲಿ ಅಂದಾಜು ೧೫,೦೦೦ ಜನರು ಸತ್ತಿರುವರು ಎಂದಿದೆ. ಇವೆರಡರಲ್ಲಿ ಯಾವುದು ನಿಜ ?

ನ್ಯಾಕೊ ಸಂಸ್ಥೆಯ ಅಂಕಿಗಳನ್ನು ನಿಜವೆಂದು ಪರಿಗಣಿಸಿದರೆ ಕೆಲವು ಸಂಗತಿಗಳು ನಿಚ್ಚಳವಾಗುತ್ತವೆ. ಹದಿನಾಲ್ಕು ವರ್ಷಗಳಲ್ಲಿ ೧೫,೦೦೦ ಜನ ಸತ್ತರು. ಅಂದರೆ ಸರಾಸರಿ ಪ್ರತಿವರ್ಷ ೧೦೭೧ ಜನರು ಮರಣ ಹೊಂದಿದರು. ಇದೇನೂ ದೊಡ್ಡ ಸಂಖ್ಯೆ ಅಲ್ಲ. ಯಾವ ದೇಶವೂ ಏಡ್ಸ್ ರೋಗಕ್ಕೆ ಹೆದರುವ ಅಗತ್ಯವಿಲ್ಲ.

ಮುಂದುವರೆದು ಪುರುಷೋತ್ತಮನ್ ಹೇಳುವುದು ಇನ್ನೂ ಸ್ವಾರಸ್ಯಕರ ಇದೆ. ಭಾರತದ ಸಾರ್ವಜನಿಕರಲ್ಲಿ ಈ ಭೀತಿಯನ್ನು ಹುಟ್ಟಿಸುವವರು ಯಾರು ? ಈ ಭಯವನ್ನು ಚಾಣಾಕ್ಷತನದಿಂದ ಬಿತ್ತುವವರೆಂದರೆ ಬಹುರಾಷ್ಟ್ರೀಯ ಔಷಧ ಕಂಪನಿಯವರು. ಈ ಕಂಪನಿಗಳೆಲ್ಲಾ ಸೇರಿ ಇದನ್ನು ನಡೆಸಿರುವವು. ಎಚ್.ಐ.ವಿ. ಪರೀಕ್ಷೆ ಮಾಡುವ ಹಾಗೂ ವೆಸ್ಟರ್ನ್ ಬ್ಲೋಟ್ ಪರೀಕ್ಷೆ ಮಾಡುವ ರಾಸಾಯನಿಕಗಳನ್ನು ಕೇವಲ ಈ ಕಂಪನಿಗಳು ಮಾರುತ್ತವೆ. ಇಡೀ ಜಗತ್ತಿನಲ್ಲಿ ಇವೇ ಕಂಪನಿಗಳ ರಾಸಾಯನಿಕ ಬಳಸಬೇಕಾಗಿದೆ. ಅಂದರೆ ಜಗತ್ತಿನ ಮೂಲೆ ಮೂಲೆಗಳಿಂದ ಹಣವು ಹರಿದು ಈ ಕಂಪನಿಗಳಿಗೆ ತಲುಪುತ್ತದೆ.

ಭಾರತದಲ್ಲಿ ಎಚ್. ಐ. ವಿ. ಪರೀಕ್ಷೆಗೆ ರಾಸಾಯನಿಕ ತಯಾರಿಸಬಹುದು. ಆಗ ಬೆಲೆ ಕೇವಲ ಒಂದೆರಡು ರೂಪಾಯಿ ಆಗಬಹುದು. ಇಂಥ ಒಂದು ರಾಸಾಯನಿಕವನ್ನು ತಯಾರಿಸಿಯೂ ಆಯಿತು. ಎಲ್ಲ ವಿಧದಿಂದ ಅದು ಒಳ್ಳೆಯ ಗುಣಮಟ್ಟದ್ದಾಗಿತ್ತು. ಆದರೆ ಅದನ್ನು ಅಮೆರಿಕಾ ಸಂಯುಕ್ತ ರಾಷ್ಟ್ರದಲ್ಲಿರುವ ಪಟ್ಟಭದ್ರ ಹಿತಾಸಕ್ತಿಗಳು ಒಪ್ಪಲಿಲ್ಲ. ಒಂದು ವೇಳೆ ಅದನ್ನು ಒಪ್ಪಿದ್ದರೆ ಬಹುರಾಷ್ಟ್ರೀಯ ಕಂಪನಿಗಳಿಗೆ ಲಾಭವಾಗುತ್ತಿರಲಿಲ್ಲ. ಜನರು ಈ ಕಟು ಸತ್ಯಸಂಗತಿಗಳನ್ನು ತಿಳಿದುಕೊಳ್ಳಬೇಕು. ಏಡ್ಸ್ ಒಂದು ರೋಗ ನಿಜ. ಆದರೆ ಅದರ ಬಗ್ಗೆ ಸರಿಯಾದ ಜ್ಞಾನ ಪ್ರಸಾರ ಬೇಕೇ ವಿನಾ ಕೇವಲ ಭಯವಲ್ಲ.

**ಡಾ|| ಎಸ್. ಜೆ. ನಾಗಲೋಟಿಮಠ**
ಮೆಡಿಕಲ್ ಡೈರೆಕ್ಟರ್, ಬಿ. ವಿ. ವಿ. ಸಂಘ
ಬಾಗಲಕೋಟೆ - ೫೮೭ ೧೦೧

# ಕನಿಷ್ಠ ಒಂದು ಸಿಗಾರ್, ಕ್ಯೂಬಾದ್ದು

**ಮೋಹನ್ ಕುಡ್ಲ**

ಇಂಟರ್‌ನೆಟ್‌ನಲ್ಲಿ ವೆಬ್‌ಸೈಟ್‌ಗಳನ್ನು ತಿರುವುತ್ತಾ ಕೂತಿದ್ದೆ. ಹೀಗೆ ಇಂಟರ್‌ನೆಟ್ ಹೊಕ್ಕಾಗಲೆಲ್ಲಾ 'ಗ್ರಾನ್ಮಾ' ಪತ್ರಿಕೆಯತ್ತ ಕಣ್ಣಾಡಿಸಿ ಬರುವುದು ರೂಢಿ. ಹಾಗೆ ನೋಡುವಾಗಲೇ ಈ ಸುದ್ದಿ ಗೋಚರಿಸಿತು - ಕ್ಯೂಬಾದಲ್ಲಿ ಅಂತರರಾಷ್ಟ್ರೀಯ ಸಿಗಾರ್ ಮೇಳ.

ನೆನಪು ಹಿಂದಕ್ಕೆ ಹಿಂದಕ್ಕೆ ಓಡಿತು. ದಿಢೀರನೆ ಕ್ಯೂಬಾಗೆ ಹಾರಬೇಕಾಗಿ ಬಂದಾಗ ನನ್ನ ಮುಂದೆ ಕಷ್ಟಕೋಟಲೆಗಳು ಸಾಕಷ್ಟಿದ್ದವು. ಪಾಸ್‌ಪೋರ್ಟ್ ಇಲ್ಲ, ವೀಸಾ ಇಲ್ಲ, ಅಸಲಿಗೆ ದೆಹಲಿಯ ಬೀದಿಗಳಲ್ಲಿ ಈ ರಾಯಭಾರ ಕಚೇರಿಗಳು ಎಲ್ಲಿವೆ ಎಂದೇ ಗೊತ್ತಿಲ್ಲ. ಆದರೆ ಈ ಎಲ್ಲಕ್ಕೂ ಒಂದು ಕೊಂಡಿ ಇತ್ತು. ಬೀದಿ ಬೀದಿ ತೋರಿಸಲು ಯುವಜನರ ತಂಡ ಇತ್ತು. ಕುರುಚಲು ಗಡ್ಡದ, ಕೇರಳದ ಕನಸುಗಣ್ಣಿನ ಹುಡುಗ, ನಾನು, ಗುರುಶಾಂತ್ ದೆಹಲಿ ಸ್ಪರ್ಶಿಸಿದ್ದೇ ತಡ ನಮಗಾಗಿ ದೆಹಲಿ ಎಂಬ ಚಕ್ರವ್ಯೂಹ ಭೇದಿಸಿದ. ಎಲ್ಲಾ ಬೀದಿಗಳೂ ಸಲೀಸಾಗಿ ನಮ್ಮನ್ನು ಒಳಗೆ ಬಿಟ್ಟುಕೊಂಡವು. ದೇಶದ ಒಳಗೆ ಪ್ರವೇಶಿಸಲು ವೀಸಾ, ಉಳಿದುಕೊಳ್ಳಲು ಸಂಕಟ ಬಂದಾಗ ವೆಂಕಟರಮಣ ಎಂಬಂತೆ ಯೂತ್ ಹಾಸ್ಟೆಲ್ ಕಾರ್ಡು, ಹೋಗುವ ಬರುವ ಲೆಕ್ಕ ಇಡಲು ಇರುವ ಕಚೇರಿಗಳು, ನಮ್ಮನ್ನು ಕಳಿಸುತ್ತಿದ್ದ ಅಂತರರಾಷ್ಟ್ರೀಯ ಯುವಜನ ಸಂಘಟನೆಯ ಕಾಗದ ಪತ್ರಗಳ ವ್ಯವಹಾರ, ನಾವು ಪದವೀಧರರೇ ಎಂದು ಗುರುತಿಸುವ, ವಿಚಾರಿಸುವ, ಯಾವುದೇ ವ್ಯವಹಾರ ವಿದೇಶಗಳಲ್ಲಿ ಮಾಡದಿರುವಂತೆ ಅದಕ್ಕೆ ತಡೆ ಒಡ್ಡುವ, ಇದ್ದ ಬಿಡಿಗಾಸನ್ನು ಡಾಲರ್‌ಗೆ ಪರಿವರ್ತಿಸುವ ಎಲ್ಲಾ, ಎಲ್ಲಾ ಕೆಲಸಗಳಿಗೂ ಮಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸಿದ ಆತ ಕೇಳಿದ ಒಂದೇ ಗುರುದಕ್ಷಿಣೆ - ಕ್ಯೂಬಾ ಸಿಗಾರ್.

'ಕ್ಯೂಬಾ ಸಿಗಾರ್ ತನ್ನಿ - ಒಂದಾದರೂ' ವಿಮಾನ ಏರುವ ಕ್ಷಣ ಹತ್ತಿರವಾಗುತ್ತಿದ್ದಾಗ ಆತ ಕಿವಿಯಲ್ಲಿ ಪಿಸುಗುಟ್ಟಿದ. ಪಾಪ ಆತನಿಗೂ ನಮ್ಮ ಬಡಪಾಯಿ ಜೇಬುಗಳ ಪರಿಚಯವಿತ್ತು. ಇಡೀ ಸಿಗಾರ್ ಪೆಟ್ಟಿಗೆ ತನ್ನಿ ಎನ್ನಲು ಆತನೂ, ನಾವೂ ಆ ಶ್ರಮಜೀವಿಯ ಬಂಧುಗಳೇ. 'ಕನಿಷ್ಠ ಒಂದು' ಇದು ನನ್ನ ತಲೆಯಲ್ಲಿ ಗುಂಯ್‌ಗುಡುತ್ತಲೇ ಇತ್ತು.

ಕ್ಯೂಬಾದಲ್ಲಿ ಇದ್ದ ಇಡೀ ಮೂರುವಾರ ಇದು ಹೋದಲ್ಲಿ, ಬಂದಲ್ಲಿ ನನ್ನೊಡನೆಯೇ ಸಂಚರಿಸಿತು. ಗುಂಗೀಹುಳದಂತೆ ನೆನಪಿಸುತ್ತಲೇ ಇತ್ತು. ಕ್ಯೂಬಾದ ಅಂತರರಾಷ್ಟ್ರೀಯ ವಿಚಾರ ಸಂಕಿರಣ ನಡೆದ ಜಾಗದಲ್ಲಿ ಸಿಗಾರ್‌ಗಳ ಮಳಿಗೆಯೇ ಇತ್ತು. ನಾನು ಕಾಲೇಜಿನ ಮೆಟ್ಟಿಲುಗಳ ಮೇಲೆ ಅಂಬೆಗಾಲಿಡುತ್ತಿದ್ದಾಗ 'ಮ್ಯಾಕೋ' (ಗಂಡಸು) ಇಮೇಜ್ ಬರಬೇಕಾದರೆ ಸಿಗರೇಟ್ ಸೇದಲೇಬೇಕು ಎಂದು ಕಾಲೇಜಿನ ಹೀರೋಗಳನ್ನು ನೋಡಿ ನಂಬಿದ್ದವ. ಚುನಾವಣೆ ಗೆಲ್ಲಬೇಕೆಂದರೆ ಕೈಯಲ್ಲಿ ಸಿಗರೇಟ್ ಇರಬೇಕು. ಗೆಳೆಯರು ಒಂದೇ ಸಿಗರೇಟ್ ಅಂಟಿಸಿ ಕನಿಷ್ಠ ಹತ್ತು ಮಂದಿಯ ತುಟಿಯಾದರೂ ದಾಟಬೇಕು ಎಂದೆಲ್ಲಾ ನಂಬಿದ್ದವ. ಹಾಗೂ ಸಿಗರೇಟ್ ಅಂಟಿಸಿದ್ದವ. ಅದನ್ನು ಬಿಟ್ಟರೆ ಹುಡುಗಿಯರ ಗ್ಯಾಂಗ್‌ನಲ್ಲಿ ಅಲೆಯುತ್ತಿದ್ದ, ಕಟ್ಟೆಯ ಮೇಲೆ ಅವರೊಂದಿಗೆ ಕೂರುತ್ತಿದ್ದ ಸಮಯದಲ್ಲಿ ಆಗೀಗ ಸಿಗರೇಟ್‌ಗೆ ಬೆಂಕಿ ಇಟ್ಟದ್ದು ಮಾತ್ರ. ನಂತರ ಚಂದ್ರಶೇಖರ ಕಂಬಾರರ ಕವನ 'ಬೆಳೆದು ದೊಡ್ಡವನಾಗೋ ಗೆಳೆಯಾ....' ಸಾಲಿಗೆ ಸಮ್ಮತಿ ಸೂಚಿಸಿದವ. ಸಿಗರೇಟ್‌ನೊಂದಿಗೆ ನನ್ನ ನಂಟು ಇಷ್ಟು ಮಾತ್ರ.



ಆದರೆ ಈ ಸಿಗಾರ್ ಮಳಿಗೆಯಲ್ಲಿ ಹತ್ತಾರು ಬ್ರಾಂಡ್‌ಗಳು, ಸಿಗಾರ್‌ಗಿಂತಲೂ ಮುದ್ದಾಗಿದ್ದ ಅದರ ಪೆಟ್ಟಿಗೆಗಳು, ಜನರ ಜಾತ್ರೆಯೋ ಜಾತ್ರೆ. ಇಡೀ ಜಗತ್ತನ್ನು ಚೆ ಗೆವಾರ, ಫಿಡೆಲ್ ಕ್ಯಾಸ್ಟ್ರೋ, ಕ್ಯೂಬಾ ಒಂದಾಗಿ ಬೆಸೆದಿದ್ದರು. ಆದರೆ ಈ 'ಸಿ'ಗಳ ಪೈಕಿ (ಸಿ ಫಾರ್ ಕ್ಯೂಬಾ, ಚೆ, ಕ್ಯಾಸ್ಟ್ರೋ) ಸಿಗಾರ್ ಕೂಡಾ ಸೇರಿದೆ ಎಂದು ಗೊತ್ತಾಯಿತು. ಆದರೆ ನಮ್ಮ ಸ್ಥಿತಿ 'ಬಡವ ಬಾಳ್ಯಾ'ನದ್ದು. 'ಬಡವ ನಾನಾ ಕುಟುಂಬಧಾರಾ ಯಾರಾರ ಬಂದು ಉಳಸೀರೋ ಎನ್ನಾ....' ಎಂಬ ಸಂಗ್ಯಾಬಾಳ್ಯಾ ಹಾಡಿನಂತಾಗಿದ್ದೆವು. ಕ್ಯೂಬಾದಲ್ಲಿ ಎಲ್ಲೇ ಅಡ್ಡಾಡಲಿ ಸಿಗಾರ್, ಸಿಗಾರ್ ಮತ್ತು ಸಿಗಾರ್ ಕಣ್ಣಿಗೆ ಬೀಳುತ್ತಿತ್ತು.

ನಮ್ಮ ಜೋಡಿಯೇ ಕ್ಯೂಬಾಗೆ ಹಾರಿದ್ದ ತ್ರಿಪುರಾದ ಸಚಿವ ಜಿತೇಂದ್ರ ಚೌಧರಿಗೆ ಕ್ಯೂಬಾದ ಇನ್ನೊಂದು ತುದಿಯ ನೆಲವನ್ನು ಸ್ಪರ್ಶಿಸುವ ಅವಕಾಶವೂ ಸಿಕ್ಕಿಬಿಟ್ಟಿತು. ಆ ಪ್ರವಾಸವೋ ವಿಮಾನದಲ್ಲಿ ಹಾರಿ ಸಿಗಾರ್‌ಗೆ ಬೇಕಾದ ಹೊಗೆಸೊಪ್ಪು ಬೆಳೆಯುವ ನೆಲಕ್ಕೆ ಮುಟ್ಟುವುದು, ಸಿಗಾರ್ ತಯಾರಿಸುವ ಕಾರ್ಖಾನೆಗಳಿಗೆ ಭೇಟಿ ನೀಡುವುದು. ಆ ಕಾರ್ಮಿಕರ ಮನೆಯಲ್ಲೇ ಉಳಿದು ಅವರೊಡನೆ ಚ ಚ ಚ ಸೊಲ್ಲಿಗೆ ಇಡೀ ದಿನ ಕುಣಿಯುವುದು. ಜಿತೇಂದ್ರ ಚೌಧರಿ ವಾಪಸಾದಾಗ ಕೈಯಲ್ಲಿ ಪುಟ್ಟ ಪೆಟ್ಟಿಗೆ. ಅದುವರೆಗೂ 'ನಾನೊಂದು ತೀರ ನೀನೊಂದು ತೀರ' ಎಂದು ತೀರ್ಮಾನಿಸಿ ಕೈಬಿಟ್ಟುಬಿಟ್ಟಿದ್ದ ಅದೇ ಸಿಗಾರ್ ಪೆಟ್ಟಿಗೆ. ತಮ್ಮ ತೋಟಕ್ಕೆ ಬಂದವರಿಗೆ ನೆನಪಿನ ಕಾಣಿಕೆ.

ಸಿಗಾರ್ ಬಗ್ಗೆ ನೆನಪುಗಳಿಗೇನು ಕಮ್ಮಿ. ಅಸ್ತಮಾದಿಂದ ಬಳಲಿ ಬೆಂಡಾಗಿ ಹೋಗಿದ್ದ ಚೆ ಗೆವಾರನಿಗೆ ಡಾಕ್ಟರುಗಳು ತಾಕೀತು ಮಾಡಿದರು. ಇನ್ನು ಮೇಲೆ ದಿನಕ್ಕೆ ಒಂದೇ ಸಿಗಾರ್. ತಲೆಯಾಡಿಸಿದ ಚೆ. ಮಾರನೆಯ ಕ್ಷಣವೇ ಸಿಗಾರ್ ಫ್ಯಾಕ್ಟರಿಯಲ್ಲಿ ಚೆ ಗೆವಾರ ಪ್ರತ್ಯಕ್ಷ. ಕಾರ್ಖಾನೆಯವರನ್ನು ಕಾಡಿ ಬೇಡಿ ಐದು ಸಿಗಾರ್ ಸೇರಿಸಿ ಒಂದೇ ಸಿಗಾರ್ ಮಾಡಿಸಿಕೊಂಡ. ಹೌದು, ಇಡೀ ದಿನ ಒಂದೇ ಸಿಗಾರ್ ಸೇದಿದ. ಡಾಕ್ಟರುಗಳಿಗೆ ದೈನ್ಯದಿಂದ ವರದಿ ಒಪ್ಪಿಸಿದ.: 'ನಾನು ನಿಮ್ಮ ಆಜ್ಞೆಯನ್ನು ಚಾಚೂ ತಪ್ಪದೆ ಪಾಲಿಸುವ ನಮ್ರ ರೋಗಿ.'

ಚೆ ಗೆವಾರನ ಪಡ್ಡೆತನಕ್ಕೆ ಸಿಗಾರ್ ಒಂದು ಸಾಕ್ಷಿಯಂತಿತ್ತು. ಅಸ್ತಮಾದಿಂದ ಬಚಾವಾಗಲು ಇನ್‌ಹೇಲರ್ ಇಟ್ಟುಕೊಳ್ಳುವುದು ಚೆ ಗೆವಾರನಿಗೆ ನೆನಪಿಸಬೇಕಿತ್ತು. ಆದರೆ ಸಿಗಾರ್ ಕೋವಿಯೊಂದಿಗೇ, ಕಾವ್ಯದೊಂದಿಗೇ ಆತನ ಗಂಟುಮೂಟೆಯಲ್ಲಿ ಸೇರಿಹೋಗಿರುತ್ತಿತ್ತು. 'ಚೆ'ಗೆ ಆ ಟೋಪಿ ಗಡ್ಡ ಹೇಗೋ ಹಾಗೆ ಸಿಗಾರ್ ಸಹಾ ತನ್ನ ಮುದ್ರೆ ಒತ್ತಿತ್ತು. ಆತ ಸಿಗಾರ್ ಸೇದುವ ಫೋಟೋಗಳಿಗೆಂದೇ ಯುವಕರು ಕ್ಯೂಬಾ ಬೀದಿಗಳಲ್ಲಿ ಬೇಟೆಗೆ ಹೊರಡುತ್ತಿದ್ದರು.

ಕ್ಯಾಸ್ಟ್ರೋ, ಕ್ಯಾಸ್ಟ್ರೋ, ಕ್ಯಾಸ್ಟ್ರೋ - ಎಲ್ಲೆಡೆಯೂ ಒಂದೇ ಬೊಬ್ಬೆ. ಕ್ಯಾಸ್ಟ್ರೋ ಎಂಬ ಈ ಹೋರಾಟಗಾರರ ಹೋರಾಟಗಾರನನ್ನು ಮುಗಿಸಲು ಅಮೆರಿಕ ಸಂಚಿನ ಮೇಲೆ ಸಂಚು ಹೂಡಿತು. ಆದರೆ ಅಮೆರಿಕಾ ಚಾಪೆ ಕೆಳಗೆ ತೂರಿದರೆ ಕ್ಯಾಸ್ಟ್ರೋ ರಂಗೋಲಿಯ ಕೆಳಗೆ. ಅದಕ್ಕೇ ಅಲ್ಲವೇ ಕ್ಯಾಸ್ಟ್ರೋ ಸಾವಿನ ಬಾಯಿಂದ ಮತ್ತೆ ಮತ್ತೆ ಪಾರಾಗಿದ್ದಕ್ಕೆ ಒಲಂಪಿಕ್ಸ್ ಮೆಡಲ್ ಕೇಳಿದ್ದು! ಕೊನೆಗೂ ಅಮೆರಿಕಾಗೆ ಒಂದು ದಾರಿ ಹೊಳೆಯಿತು. ಆತನ ಸಿಗಾರ್‌ನಲ್ಲಿ ಮದ್ದು ತುಂಬಿ ಅದನ್ನು ಬಾಯಿಗಿಟ್ಟ ತಕ್ಷಣ 'ಢಂ' ಎನ್ನುವಂತೆ ಮಾಡಬೇಕು. ನಂತರದ ಕಥೆ ಏನಾಯಿತು ? ಕ್ಯಾಸ್ಟ್ರೋ ಭಾಷಣ ನಿನ್ನೆಯೂ ಪತ್ರಿಕೆಯಲ್ಲಿ ವರದಿಯಾಗಿತ್ತಲ್ಲಾ!

ಇದೆಲ್ಲಾ ಆಗಿ ದಶಕಗಳು ಕಳೆದಿವೆ. ಕ್ಯಾಸ್ಟ್ರೋ ಸಿಗಾರ್ ಸೇದುವುದು ಬಿಟ್ಟಿದ್ದಾರೆ. ಡಾಕ್ಟರ್‌ಗಳು ತಾಕೀತು ಮಾಡಿದ್ದಾರೆ. ಕ್ಯಾಸ್ಟ್ರೋ ಐದು ಸಿಗಾರ್ ಸೇರಿಸಿ ಒಂದೇ ಸಿಗಾರ್ ಮಾಡಿಸಲೂ ಹೋಗಲಿಲ್ಲವೇನೋ. ಆದರೆ ಸಿಗಾರ್‌ನ ಮಾತು ಬಂದಾಗ ಅವರು ಇನ್ನೂ ಯುವಕ.

*(ಇಗನೇ ಫುಟುಕ್ಕೆ)*

# ಸಂಭವಾಮಿ ಯುಗೇ ಯುಗೇ

ಜಿ. ಟಿ. ನಾರಾಯಣರಾವ್

ಪಂಡಿತ ತಾರಾನಾಥರು (೧೮೯೧-೧೯೪೨) ೧೯೩೧ರಲ್ಲಿ ಪ್ರಕಾಶಿಸಿದ ''ಧರ್ಮಸಂಭವ'' ಎಂಬ ಕೃತಿಯ ಐದನೆಯ ಆವೃತ್ತಿಯನ್ನು ಡಿ.ವಿ.ಕೆ. ಮೂರ್ತಿಯವರು (ಕೃಷ್ಣಮೂರ್ತಿಪುರ, ಮೈಸೂರು- ೫೭೦ ೦೦೪) ಪ್ರಕಟಿಸಿದ್ದಾರೆ (೨೦೦೧). ಪುಟಗಳು ೧೭೦, ಬೆಲೆ : ರೂ. ೨೫

ಸ್ವತಃ ಪ್ರಖರ ಚಿಂತನಶೀಲ ಮಾನವತಾವಾದಿ ಲೇಖಕರಾಗಿರುವ ಡಿವಿಕೆ, ಈ ಪುಸ್ತಕಕ್ಕೆ ಬರೆದಿರುವ ಬೆನ್ನುಡಿ ಹಿಂದೆಂದಿಗಿಂತಲೂ ಇಂದು ಅಧಿಕ ಸಂಗತವಾಗಿದೆ : ''ಮತಧರ್ಮದ ಕಟ್ಟುಪಾಡುಗಳಲ್ಲಿ ಮಾನವತಾ ಆಶಯ ಪರಕೀಯಗೊಂಡು ಸಾಮಾಜಿಕ ಪ್ರಗತಿಗೆ ಅದೆಷ್ಟು ಕಂಟಕವಾಗುತ್ತದೆಂಬುದನ್ನು ತಾರಾನಾಥರು ಎಳೆ ಎಳೆಯಾಗಿ ಈ ಕೃತಿಯಲ್ಲಿ ಎತ್ತಿ ತೋರಿಸಿದ್ದಾರೆ.''

ಪ್ರಸ್ತುತ ಪುಸ್ತಕವನ್ನು ಓದಿ ಮುಗಿಸಿದಾಗ ಮನದಲ್ಲಿ ಮಿಡಿದ ಭಾವನೆಗಳ ಸಾರಾಂಶವನ್ನು ಮೊದಲು ನೋಡೋಣ.

* * *

ಇತರ ಪ್ರಾಣಿಗಳಿಗೆ ಇರದ ನಾಲ್ಕು ಸೌಕರ್ಯಗಳು ಮಾನವನಿಗೆ ಜನ್ಮತಃ ಪ್ರಾಪ್ತವಾಗಿವೆ : ಸ್ಮರಣೆ, ಯೋಚನೆ, ಮಾತು, ಕೃತಿ. ಇವುಗಳ ಸಂಯುಕ್ತ ಫಲವಾಗಿ ಮೂರು ಸಂಕೀರ್ಣ ಪ್ರಭಾವಗಳು ಆತನನ್ನು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಸುತ್ತುವರಿದಿವೆ : ಸಮಾಜ, ಧರ್ಮ, ವಿಜ್ಞಾನ ಇವು ಮಾನವಜನ್ಯವಾದವು. ನಿಸರ್ಗದತ್ತವಾದವಲ್ಲ.

ವ್ಯಕ್ತಿ-ವ್ಯಕ್ತಿ ಅಂತರಕ್ರಿಯೆಯ ಫಲ ಸಮಾಜ. ಇದರ ಮೂರ್ತ ಅಥವಾ ಪ್ರಾತಿನಿಧಿಕ ರೂಪ ರಾಜ. ವ್ಯಕ್ತಿ - ಅಜ್ಞಾತ ಅಂತರಕ್ರಿಯೆಯ ಉತ್ಪನ್ನ ಧರ್ಮ. ಪ್ರವಾದಿ ಅಥವಾ ಗುರು ಇದರ ಪ್ರತಿನಿಧಿ. ವ್ಯಕ್ತಿ-ನಿಸರ್ಗ ಅಂತರಕ್ರಿಯೆಯ ಸಾರ ವಿಜ್ಞಾನ. ವಿಜ್ಞಾನಿ ಅಥವಾ ತಂತ್ರವಿದ ಇದರ ಪ್ರತ್ಯಕ್ಷ ರೂಪ.

ಸಮಾಜ, ಅಂದರೆ ರಾಜ ಅಥವಾ ಸಂವಿಧಾನ ನಿಯುಕ್ತ ಸರ್ಕಾರ, ವ್ಯಕ್ತಿಗೆ ಅಸ್ಮಿತೆ ಮತ್ತು ಭದ್ರತೆ ಕೊಡುತ್ತದೆ. ಧರ್ಮ, ಅಂದರೆ ಪ್ರವಾದಿ ಅಥವಾ ಧಾರ್ಮಿಕ ಗ್ರಂಥ, ಆತನ ಎದುರು ಆಶಯ ಮತ್ತು ಆದರ್ಶಗಳನ್ನು ಎತ್ತಿಹಿಡಿಯುತ್ತದೆ. ವಿಜ್ಞಾನವಾದರೋ, ತಂತ್ರವಿದ್ಯೆಯ ಮೂಲಕ, ಆಹಾರವನ್ನು ಪೂರೈಸುತ್ತದೆ. ಸೌಕರ್ಯಗಳನ್ನು ಒದಗಿಸುತ್ತದೆ.

ಮೊದಲಿನ ಎರಡು ಪ್ರಭಾವಗಳು ಜ್ಞಾತೃನಿಷ್ಠವಾದವು. ಅಂದರೆ ನಿಸರ್ಗದಲ್ಲಿ ಈ ಮಾನವ ನಿರ್ಮಿತ ವ್ಯವಸ್ಥೆಗಳಿಗೆ ಅರ್ಥವಿಲ್ಲ. ರಾಜಾಜ್ಞೆ ಸಂವಿಧಾನಗಳಾಗಲೀ ಪ್ರವಾದಿ ವಾಣಿ ಧಾರ್ಮಿಕ ಗ್ರಂಥಗಳಾಗಲೀ ನಿಸರ್ಗದಲ್ಲಿ ಸಿಂಧುವಲ್ಲ ಎಂಬುದು ಸುಸ್ಪಷ್ಟ. ವಿಜ್ಞಾನ ಹೀಗಲ್ಲ : ಇದು ಪೂರ್ತಿ ಜ್ಞೇಯ ನಿಷ್ಠ. ವಿಜ್ಞಾನಿ ಎಂಥ ಪ್ರತಿಭಾಮೇರುವೇ ಆಗಿರಲಿ, ವಿಜ್ಞಾನದ ಸಿದ್ಧಾಂತಗಳು ಎಷ್ಟು ಪ್ರಾಚೀನವಾದವೇ ಆಗಿರಲಿ, ನಿಸರ್ಗದ ಮರುಕಹೀನ ನಿಕಷದಲ್ಲಿ ಉತ್ತೀರ್ಣವಾಗದವು ಚರಿತ್ರೆಯ ಕಸದ ಬುಟ್ಟಿಗೆ ಸೇರಿಹೋಗುತ್ತವೆ. ಆದ್ದರಿಂದ ವ್ಯಕ್ತಿಯು ಎರಡು ಜ್ಞಾತೃನಿಷ್ಠ ಮತ್ತು ಒಂದು ಜ್ಞೇಯನಿಷ್ಠ ಪ್ರಭಾವಗಳು ನೇಯ್ದಿರುವ ಸಂಕೀರ್ಣ ಜಾಲದಿಂದ ಬಂಧಿತ ಎಂದು ಭಾವಿಸಬಹುದು.

ನಾಗರಿಕತೆ ಅನಾವರಣಗೊಂಡು ಬಂದಿರುವ ಪರಿಯನ್ನು ಚಿಕಿತ್ಸಕವಾಗಿ ಪರಿಶೀಲಿಸುವಾಗ ಅದರಲ್ಲೊಂದು ಪ್ರರೂಪ ಕಂಡುಬರುತ್ತದೆ : ರಾಜ ಮತ್ತು ಗುರು (ಅಂದರೆ ಲೌಕಿಕ ಮತ್ತು ಧಾರ್ಮಿಕ ನಾಯಕರು) ಒಟ್ಟಾಗಿ ಅಧಿಕಾರದಲ್ಲಿದ್ದು ವಿಜ್ಞಾನಿಯನ್ನು ತಮ್ಮ ಉದ್ದೇಶದ ಈಡೇರಿಕೆಗಾಗಿ ನಿಯೋಜಿಸಿರುವುದು. ಭಾರತವನ್ನು ಧರ್ಮ ನಿರಪೇಕ್ಷ ರಾಷ್ಟ್ರವೆಂದು ಘೋಷಿಸಿದ್ದರೂ ಅದರ ಇಂದಿನ ಪರಿಸ್ಥಿತಿ ಇದೇ ಪ್ರರೂಪಕ್ಕೆ ಅಳವಡುವುದನ್ನು ಕಾಣುತ್ತೇವೆ.




*ಪುಟ : ೧೭೦* *ಬೆಲೆ ರೂ. ೨೫*

ರಾಜ-ಗುರು ಸಂಯುಕ್ತ ಅಧಿಕಾರವು ಧರ್ಮದ ಮೂಲ ಆಶಯಕ್ಕೆ (ದಯವೇ ಧರ್ಮದ ಮೂಲವಯ್ಯಾ; ಧರ್ಮವೇ ಜಯವೆಂಬ ದಿವ್ಯ ಮಂತ್ರ, ಮರ್ಮವನರಿತು ಮಾಡಲಿಬೇಕು ತಂತ್ರ) ಅನುಗುಣವಾಗಿರುವ ತನಕ ಜನಜೀವನದಲ್ಲಿ ರಾಮತ್ವ (ರಾಜ) ಮತ್ತು ವಸಿಷ್ಠತ್ವ (ಗುರು) ಅರಳುತ್ತವೆ; ಮತ್ತು ವಿಜ್ಞಾನ ಜೀವನ ಪೋಷಕವಾಗಿ ನಳನಳಿಸುತ್ತದೆ. ಹೀಗಲ್ಲದೇ ಅದು (ಸಂಯುಕ್ತ ಅಧಿಕಾರ) ಧರ್ಮದ ಆಶಯಕ್ಕೆ ವಿರುದ್ಧವಾಗಿ ವರ್ತಿಸುತ್ತಿರುವಾಗ (ಕಡ್ಡಾಯವೇ ಧರ್ಮ ವಿಸ್ತರಣೆಯ ಮಾರ್ಗವಯ್ಯಾ; ಗುರಿಯನ್ನೆದುವುದೊಂದೇ ಮಂತ್ರ, ದಾರಿಯನನು ಗುಣವಾಗಿ ಕಡಿಯುವುದು ತಂತ್ರ) ದುರ್ಯೋಧನತ್ವ ಮತ್ತು ಶಕುನಿತ್ವ ಕೆರಳುತ್ತವೆ; ಮತ್ತು ವಿಜ್ಞಾನ ಜೀವನಶೋಷಕವಾಗಿ ತಾಂಡವವಾಡುತ್ತಿರುವುದು.

**ಅರ್ಥ** : ರಾಜತ್ವ - ಗುರುತ್ವ - ವಿಜ್ಞಾನಿತ್ವ ಎಂಬ ಪ್ರಭಾವತ್ರಯ ಪರಸ್ಪರ ಪೂರಕ ಪೋಷಕವಾಗಿರುವಾಗ ದೇಶದಲ್ಲಿ ಸುಖಶಾಂತಿಗಳು ನಲಿಯುತ್ತಿರುವುವು; ಈ ಸಮರಸತೆ ಕೆಟ್ಟುಹೋದಾಗ ದೇಶ ಅಸಂಖ್ಯ ಅಶಾಂತಿಗಳ ಬೀಡಾಗುತ್ತದೆ. ವರ್ತಮಾನ ಭಾರತದಲ್ಲಿ ಎರಡನೆಯ ಸ್ಥಿತಿ ಸರ್ವತ್ರ ಪ್ರಕಟವಾಗುತ್ತಿರುವುದರ ಕಾರಣವೇ ಇದು: ಈ ಸಂಬಂಧ ಮಾರಕ ಶೋಷಕವಾಗಿರುವುದು. ಅಧಿಕಾರಿಗಳಿಂದ ತೊಡಗಿ, ಧಾರ್ಮಿಕ ನಾಯಕರ ಮೂಲಕ, ವಿಜ್ಞಾನಿಗಳ ಸಾಹಚರ್ಯ ಸಹಿತ ಇಂದು ದೇಶವನ್ನು ಬಾಧಿಸುತ್ತಿರುವುದು ಸ್ವಾರ್ಥ ಲಾಲಸೆ, ಭೋಗಪ್ರಿಯತೆ ಮತ್ತು ಯಶಃಪ್ರಾಪ್ತಿಗೆ ಅನೈತಿಕ ಮಾರ್ಗಾನುಸರಣೆ.

ನಾಡಿಗೆ ಸ್ವಾತಂತ್ರ್ಯ ಬಂದಾಗ ನೆಹ್ರು ಹೇಳಿದರು, ''ನಮ್ಮ ಜನರ ಸರಾಸರಿ ವರಮಾನವನ್ನು ವರ್ಧಿಸುವ ದಿಶೆಯಲ್ಲಿ ಯೋಜನೆಗಳನ್ನು ರೂಪಿಸಿ ನಿರ್ವಹಿಸಬೇಕು.'' ರಾಜಾಜಿ ಬೇರೆಯದೇ ದಾಟಿ ಹಾಡಿದರು, ''ನಮ್ಮ ಪ್ರಜೆಗಳ ಸರಾಸರಿ ಶೀಲವನ್ನು ಸಂವರ್ಧಿಸುವತ್ತ ನಾವು ಕ್ರಿಯಾಶೀಲರಾಗಬೇಕು.'' ಅಂಕೆ ಸಂಖ್ಯೆಗಳ ಡೊಂಕು ಗಣನೆ ಪ್ರಕಾರ ಇಂದು ಬಿಡಿ ವ್ಯಕ್ತಿಯ ಸರಾಸರಿ ಆದಾಯ ಏರಿದೆ. ಶೀಲ ?

ಐನ್‌ಸ್ಟೈನರ ಪ್ರಸಿದ್ಧ ಸೂಕ್ತಿಯೊಂದಿದೆ : ''ಧರ್ಮರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಧರ್ಮ ಕುರುಡು.'' ಇಂದು ಭಾರತದಲ್ಲಿ ವಿಜ್ಞಾನ ಹಳಿದಪ್ಪಿರುವುದು ಋಜುಧರ್ಮಕ್ಕೆ ದುಗ್ಗಾಣಿ ಕಿಮ್ಮತ್ತೂ ಇಲ್ಲದಿರುವುದರಿಂದ; ಅಂತೆಯೇ ಧರ್ಮವು ಅಂಧತ್ವಕ್ಕೆ ಕೆಡೆದಿರುವುದು ವಿಜ್ಞಾನ ಪ್ರಜ್ಞೆ ಸರ್ವತ್ರ ಪಸರಿಸಿಲ್ಲವಾದ್ದರಿಂದ. ಇಂಥ ಅರಾಜಕತೆಯು ಸ್ವಾರ್ಥ ರಾಜಕಾರಣಿಗಳಿಗೆ ಫಲವತ್ತಾದ ಹೊಲವಾಗಿರುವುದು ತೀರ ಸಹಜ.

* * *

ಆದರ್ಶ (ಧರ್ಮ) ಕುರುಡಾದಾಗ, ಮಾರ್ಗ (ವಿಜ್ಞಾನ) ಕುಂಟಾದಾಗ ನಡಿಗೆ (ಸಮಾಜ) ಏನಾಗಬೇಕು ? ತಾರಾನಾಥರು ಅತ್ಯಂತ ಕಳಕಳಿಯಿಂದ ಸಮಾರೋಪಿಸಿದ್ದಾರೆ (ಪುಟ ೧೭೦) : ''ನಿಜವಾದ ಧರ್ಮವು ಕ್ಷುದ್ರ ಸ್ವಾರ್ಥದ ದುರ್ಲಭ ರಕ್ಷೆಯಲ್ಲ; ಆಕಾಶದ ದೇವರನ್ನು ಬೇಡುವ ಷಂಡ ಭಿಕ್ಷೆಯಲ್ಲ; ಅಂತಃಶಕ್ತಿ ಪ್ರಪಂಚಗಳ ಉಪೇಕ್ಷೆಯಲ್ಲ; ಇವೆಲ್ಲವುಗಳ ವಿಕಾಸಾತ್ಮಕ ಶಿಕ್ಷೆಯದು; ಲೋಕ ಸಂಗ್ರಹದ ಸರ್ವಾಂಗ ಸುಂದರ ದೀಕ್ಷೆಯದು.''

ಧರ್ಮದ ಅಥವಾ ಯಾವುದೇ ಪಂಥದ ಹೆಸರಿನಲ್ಲಿ ಬೇರೂರಿರುವ ಅಂಧಶ್ರದ್ಧೆ ಸಹಜವಾಗಿ ತಾರಾನಾಥರ ಆಕ್ರೋಶಕ್ಕೆ ಗ್ರಾಸವಾಗುತ್ತದೆ (ಪುಟ ೩೫): ''ಸೃಷ್ಟಿಯ ಮೂಲವಾವುದು, ಗತಿಯಾವುದು, ಗಮ್ಯವಾವುದು ಮುಂತಾದ ವಿಷಯಗಳನ್ನೆಲ್ಲ ದೇವರೇ ವಿವಿಧ ರೀತಿಗಳಿಂದ ಜನರಿಗೆ ತೋರಿಸಿಕೊಡುತ್ತಿದ್ದನೆಂಬ

ನಂಬಿಕೆಯೇ ಎಲ್ಲ ಮತಗಳಿಗೂ ಆಧಾರವಾಗಿದೆಯೆಂದು ಮೇಲೆ ತೋರಿಸಿದೆಯಷ್ಟೆ. ದೇವರು ಒಬ್ಬನೇ ಎಂದು ಎಲ್ಲವೂ ನಂಬುತ್ತವೆ. ಹೀಗಿರುವಾಗ ಆತನು ಈ ಅನೇಕ ವಿಷಯಗಳನ್ನು ಕುರಿತು ಪ್ರಕಟಿಸಿದ ಜ್ಞಾನವೂ ಒಂದೇ ಆಗಿರಬೇಕಷ್ಟೆ? ಭಾಷಾ ವ್ಯತ್ಯಾಸವಿರಬಹುದು, ಹೇಳುವ ರೀತಿಯಲ್ಲಿ ಭೇದವಿರಬಹುದು; ಆದರೆ ಜ್ಞಾನತತ್ತ್ವವೂ ಹಾಗೆ ವ್ಯತ್ಯಾಸವಿರಲಿಕ್ಕಾದೀತೋ? ಕೊಟ್ಟವನೊಬ್ಬನೇ ! ಮೇಲೆ ಆತ ಸರ್ವಜ್ಞನು; ಹೀಗಿದ್ದುಕೊಂಡೂ ಪರಸ್ಪರ ವಿರುದ್ಧವಾಗಿ ಹೇಳಿಯಾನೋ ? ಇಲ್ಲವೆಂದು ಬುದ್ಧಿಯು ಹೇಳುತ್ತದೆ. ಆದರೆ ನಿಜವಾಗಿಯೂ ನೋಡಿದರೆ ಎಷ್ಟೋ ಭೇದಗಳಿವೆ. ಆ ಭೇದಮಯ ಸೂತ್ರಗಳನ್ನೇ ಜ್ಞಾನ ಮೂಲ ಜೀವಸೂತ್ರಗಳೆಂದು ಭಾವಿಸಿದ ಜನರು ತಾವು ದೇವರಿಂದ 'ಆರಿಸಲ್ಪಟ್ಟ ಜನಾಂಗ'ದವರು ಎಂದು ಹಿಗ್ಗಿ ತಮ್ಮನ್ನು ಇತರರಿಂದ ಪ್ರತ್ಯೇಕಿಸಿಕೊಳ್ಳುತ್ತಾರೆ...... ಅನೈಸರ್ಗಿಕ ಜೀವನದಲ್ಲಿ ಬಹು ದುಷ್ಟ ಪರಿಣಾಮಗಳು ಅಡಕವಾಗಿವೆ. ಐಕ್ಯಕ್ಕೆ ಬೇಕಾದದ್ದು ಜ್ಞಾನಯುಕ್ತ ಬುಧ ಜನ ಸಮ್ಮತವೇ. ಅಂತಹದಕ್ಕೆ ಬುದ್ಧಿಯ ಸಹಾಯವೇ ಪ್ರಧಾನವಾಗಿರಬೇಕು. ಅಲ್ಲದೇ ಭ್ರಮೆ ಕಲ್ಪನೆಗಳಿಂದ ಉಂಟಾದ ಭೇದಗಳನ್ನುಂಟುಮಾಡುವ, ಕುರುಡು ನಂಬಿಕೆಯನ್ನೇ ಅವಲಂಬಿಸಿಕೊಂಡಿರುವ, ಗ್ರಂಥೋಕ್ತಿಗಳಲ್ಲ ! ಅಂಧಶ್ರದ್ಧೆಯು ಭ್ರಮೆಗೆ ಗೊಬ್ಬರ ! ಜ್ಞಾನ ಪ್ರಗತಿಗಳ ವೈರಿ, ಜಗಳಗಳಿಗೆ ಮೂಲ. ಮಾನವನ ಮಾನವ್ಯವು ಬೆಳೆಯಬೇಕಾದರೆ, ಬುದ್ಧಿಯು ಶುದ್ಧವಾಗಿ ಬೆಳೆಯಬೇಕು.''

ಆಕ್ರೋಶ ಈ ಪುಸ್ತಕದ ನಿಜ ದನಿ. ಕಾರಣವಿದೆ. ಸಂಘ ಜೀವಿಯಾದ ಮಾನವ ಸಮಾಜದಿಂದ ತನಗೆ ಒದಗುವ ರಕ್ಷಣೆ ಹಾಗೂ ಅಸ್ಮಿತೆಗಳಿಗೆ ಪ್ರತಿಯಾಗಿ ತೆರಬೇಕಾಗುವ ಶುಲ್ಕವೆಂದರೆ ತನ್ನ ವರ್ತನೆಯಲ್ಲಿ ಸಂಯಮ, ಸ್ವಾಚ್ಛಂದ್ಯ ನಿಯಂತ್ರಣ. ಸಮಷ್ಟಿ ಹಿತಕ್ಕೆ ಧಕ್ಕೆ ಬಾರದಂತೆ ವ್ಯಷ್ಟಿ ಹಿತ ಇಲ್ಲಿಯ ಆಧಾರ ಶ್ರುತಿ. ಇದು ಯಾವುದರಿಂದ ಸಾಧ್ಯವಾಗುತ್ತದೆ ? ಧರ್ಮದ ನಿರ್ಣಾಯಕ ಪಾತ್ರ ಬರುವುದು ಇಲ್ಲಿಯೇ. ''ಅತಿ ಪೂರ್ವದಲ್ಲಿ ಧರ್ಮವು ನೈಸರ್ಗಿಕವಲ್ಲ ; ದೇವರು ಹೇಳಿಕೊಟ್ಟದ್ದಲ್ಲ ; ವ್ಯಕ್ತಿ ಸಂಘಗಳು ಪರಸ್ಪರ ಹಿತಕ್ಕಾಗಿ ನೇಮಿಸಿದ ಉಪಾಯಗಳು; ಅವು ಜೀವನ ಸೂತ್ರಗಳು ಮಾತ್ರವೇ.'' ಈ ಸೂತ್ರಗಳೇ ಇಂದು ಮಾನವನನ್ನು ಬಂಧಿಸಿರುವುದೊಂದು ವಿಪರ್ಯಾಸ !

ನಿಗ್ರಹಾನುಗ್ರಹ ಸಾಮರ್ಥ್ಯವಿದ್ದು ಜನರ ಜೀವನವನ್ನು ಸದಾ ಪ್ರಭಾವಿಸುವ ಮಾನವ ರೂಪದ ದೇವರನ್ನು (ಭಗವಂತ ತನ್ನ ರೂಪದಲ್ಲೇ ಮಾನವನನ್ನು ಎರಕ ಹೊಯ್ದಿದ್ದಾನೆ ಎಂಬುದು ಅನೇಕ ಧರ್ಮಗಳ ನಂಬಿಕೆ) ತಾರಾನಾಥರು ಆಮೂಲಾಗ್ರ ತರಿದೊಗೆಯುತ್ತಾರೆ (ಪುಟ ೫೩): ''ಪ್ರಾಚೀನ ಧರ್ಮವು ಮಾನವನ ಭೀತಿ ಅಹಂಕಾರ ಇವುಗಳ ಸಂತತಿ. ಪ್ರಕೃತಿಯು ಯಾವಾಗ್ಗಲೂ ಅನುಕೂಲವೇ ಆಗಿರುವ ಶಕ್ತಿಯಲ್ಲ. ಅದಕ್ಕೊಮ್ಮೊಮ್ಮೆ ಭಯಂಕರ ರುದ್ರಾವೇಶ ಬಂದು ಸೃಷ್ಟಿಯನ್ನು ಒಂದೇ ಉಸಿರಿನಿಂದ ಹಾರಿಸುವುದೂ ಉಂಟು. ಆಗಿನ ಭೀಕರ ಉತ್ಪಾತ ಉಪದ್ರವಗಳು ಜೀವರಾಶಿಗಳಿಗೆ ಸಹಿಸಲಸಾಧ್ಯ. ಸದ್ದಿಲ್ಲದೆ ಬಂದ ಆ ಸಂಕಟಗಳಿಗೆ ಬಲಿಯಾಗಲೇ ಬೇಕಾಗುತ್ತದೆ. ಪ್ರಾಚೀನ ಮನುಷ್ಯನಿಗೆ ಅವನ್ನು ನಿರ್ಬಂಧಿಸುವ ಶಕ್ತಿಯು ಇದ್ದಿಲ್ಲವಾದರೂ, ಆತನ ಮನಸ್ಸೇನೋ ಸುಮ್ಮನಿರದೇಹೋದುದು ಸಹಜವೇ. ಅವನು ಆ ಪ್ರಕೃತಿಯ ಭೀಕರ ಶಕ್ತಿಗಳಿಗೆ ನಾಮಕರಣವನ್ನು ಮಾಡಿ ದೇವದೇವತೆಗಳನ್ನು ನಿರ್ಮಿಸಿದನು. ಆ ತನ್ನ ಊಹೆಯಿಂದ ಉದ್ಭವಿಸಿದ ದೇವತೆಗಳಿಗೆ ಶಾಂತಿ ಸಮಾಧಾನಗಳನ್ನು ಕಲ್ಪಿಸಿದನು.''

ನಿನ್ನ ಮನದಾತಂಕವೇ ಮೈದಳೆದು ದೇವ
ರೆನ್ನುವ ವಿಚಿತ್ರ ಜನಿಸಿತು ಸ್ವಾರ್ಥಮೂಲವಿದು
ನಿನ್ನುನ್ನತಿಯ ಸಾಧಿಸದ, ಪರರ ಪತನವನು
ಮನ್ನಿಸುವ ಪರಮ ಶೋಷಕನೀತ ಅತ್ರಿ ಸೂನು

ಇಂಥ ಮಾನವಕಲ್ಪಿತ ವಸ್ತುವೇ ದೇವರು ! ಧರ್ಮದ ಆಕರವೀತ. ಈ ಕಲ್ಪನೆಯ ಹಿನ್ನೆಲೆಯಲ್ಲಿ ಭಯ, ಶಂಕೆ, ಆಕಾಂಕ್ಷೆ, ಏಕಾಂತತೆ, ಅಸಹಾಯಕತೆ, ನಿಶ್ಶಕ್ತಿ ಮತ್ತು ಭಾವ ಎಂಬ ಸಪ್ತ ರಾಗಗಳು ಸ್ಪಂದಿಸುತ್ತಿರುವುವು. ''ಅಂಥ ದೇವರು ಭಯ, ಅಹಂಕಾರಗಳಿರುವವರೆಗೆ ಜನ ಸಮುದಾಯವನ್ನು ಬಿಟ್ಟುಹೋದಾನೇ ?''

* * *

ತಾರಾನಾಥರ ಮನೋರೂಪಿಕೆ ಅತ್ಯಂತ ಸೃಜನಶೀಲವಾದದ್ದು. ಮಾನವಕಾರುಣ್ಯಭರಿತವಾದದ್ದು, ತೀಕ್ಷ್ಣ ವಿವೇಚನೆ ಶಕ್ತಿಯುತವಾದದ್ದು. ಇಷ್ಟಾದರೂ ಬಿಡಿಗಳಲ್ಲಿ ಖಚಿತವಾಗಿರುವ ಈ ಪುಸ್ತಕ ಇಡಿಯಲ್ಲಿ ಒಂದು ಚಿತ್ರಣ ನೀಡದಿರುವುದರ ಕಾರಣಗಳು ಎರಡು :

ಪ್ರಸ್ತಾವನೆಯಲ್ಲಿ ಅವರು ಬರೆದಿದ್ದಾರೆ : ''ಪುಸ್ತಕದ ಉದ್ದೇಶವು ಪ್ರಬೋಧಕವಲ್ಲ, ಪ್ರಚೋದಕ ಮಾತ್ರ.'' ಹೌದು, ಪುಟಪುಟದಲ್ಲಿ ವಾಚಕನ ಚಿಂತನೆಗೆ ಸಮೃದ್ಧ ಪ್ರಚೋದನೆ ಒದಗುತ್ತದೆ.

ಎರಡನೆಯದು – ವಸ್ತು ವಿನ್ಯಾಸದ ದೃಷ್ಟಿಯಿಂದ ಈ ಕೃತಿಯನ್ನು ಗ್ರಂಥ ಸಂಪಾದನೆಗೆ ಒಳಪಡಿಸುವುದು ಅಪೇಕ್ಷಣೀಯ. ಆಗ, ಭಾವನೆಗಳ ಪುನರಾವರ್ತನೆಯೂ ಭಾಷೆಯಲ್ಲಿನ ಶೈಥಿಲ್ಯವೂ ನಿವಾರಣೆಯಾಗಿ ಇದೊಂದು ಸರ್ವಾಂಗಸುಂದರ ಆಕರ ಗ್ರಂಥವಾಗದಿರದು.

**ಜಿ. ಟಿ. ನಾರಾಯಣರಾವ್**
೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತಿಪುರ, ಮೈಸೂರು ೫೭೦ ೦೦೯

---

*೪೯ನೇ (ಪುಟದಿಂದ)*

ಜಗತ್ತಿನ ಅತ್ಯುತ್ತಮ ಸಿಗಾರ್ ಬ್ರ್ಯಾಂಡ್ ಎಂದೇ ಹೆಸರಾದ 'ಕೊಹಿಬಾ'ದ ೩೦ನೇ ವಾರ್ಷಿಕೋತ್ಸವದಲ್ಲಿ ಕ್ಯಾಸ್ಟ್ರೋ ಸಿಗಾರ್ ಸೇದುವುದು ಬಿಡಬಹುದು, ಆದರೆ ಸಿಗಾರ್ ಬಗ್ಗೆ ಕನಸು ಕಾಣುವುದನ್ನು ಮಾತ್ರ ಬಿಟ್ಟಿಲ್ಲ ಎಂದರು. SMOKING IN DREAMS IS NOT INJURIOUS TO HEALTH ಅಲ್ಲವೇ ?

ಸಿಗಾರ್ ವಿಷಯ ಬಂದಾಗ ಜಗತ್ತಿನ ಯಾವುದೇ ದೇಶವೂ ಅಮೆರಿಕಾದ ನಿಷೇಧದ ಬೆದರಿಕೆಗೆ ಬಗ್ಗಿಲ್ಲ. ಹಿಂಬಾಗಿಲು ಎಲ್ಲಾ ಮನೆಗೂ, ಅಂತೆಯೇ ದೇಶಗಳಿಗೂ ಇದೆ. ಕ್ಯೂಬನ್ ಸಿಗಾರ್ ತುಟಿಗಳಿಂದ ತುಟಿಗೆ ವಲಸೆ ಹೊಗುತ್ತಲೇ ಇದೆ. ಕ್ಯೂಬನ್ ಸಿಗಾರ್ ವಿಷಯ ಬಂದರೆ ಸಿಗಾರ್‌ನ ಒಂದು ತುದಿಯಲ್ಲಿ ಕೆಂಡ ಮತ್ತೊಂದು ತುದಿಯಲ್ಲಿ ಮೂರ್ಖ ಎಂಬ ಮಾತು ಆಡಿದರೆ ಜಗತ್ತಿನಲ್ಲಿ ಎಷ್ಟು ಮೂರ್ಖರು ಸಿಗುತ್ತಾರೆ ! ಅಬ್ರಾಹಂ ಲಿಂಕನ್, ನೆಪೋಲಿಯನ್ ಬೋನಪಾರ್ಟೆ, ಅರ್ನೆಸ್ಟ್ ಹೆಮ್ಮಿಂಗ್‌ವೇ.... ಮತ್ತು ದೆಹಲಿಯ ಆ ಕೇರಳದ ಕುರುಚಲು ಗಡ್ಡದವ.

ಕ್ಯೂಬಾ ಸಿಗಾರ್‌ನ ಡಿಮ್ಯಾಂಡ್ ಕಂಡೇ ಸಾಕಷ್ಟು ಜನ ಇದರ ನಕಲಿಗಾಗಿ ಪ್ರಯತ್ನಿಸಿದ್ದಾರೆ. ಕ್ಯೂಬಾದ ಸಿಗಾರ್‌ಗಳ ಹೆಸರಲ್ಲೇ ನಕಲೀ ಡಬ್ಬಿಗಳನ್ನು ಬಿಟ್ಟಿದ್ದಾರೆ ಹಾಗೂ ತಾತ್ಪರ್ಯ ಹೇಳಬೇಕೆಂದರೆ ಕೈಸುಟ್ಟುಕೊಂಡಿದ್ದಾರೆ. ನಕಲಿಗಳ ಬಗ್ಗೆ ಕ್ಯೂಬಾದ ಯಾವುದೇ ಸಿಗಾರ್‌ನ ಕಂಪನಿಗೂ ಎಳ್ಳಷ್ಟೂ ಹೆದರಿಕೆ ಇಲ್ಲ. ಏಕೆಂದರೆ ಸಿಗಾರ್ ಹೊತ್ತಿಸಿದ ಮರುಕ್ಷಣವೇ ಅದು ನೆಲಕ್ಕೆ ಬಿದ್ದರೆ ಅದು ನಕಲಿ ಎಂದೇ ಅರ್ಥ. ಕ್ಯೂಬಾದ ಸಿಗಾರ್‌ಗಳಲ್ಲಿ ಹೊಗೆಸೊಪ್ಪು ಮಾತ್ರ ಇದೆ ಎಂದು ಹೇಳಿದವರು ಯಾರು ? ಹೋರಾಟಕ್ಕೆ ಕೋವಿ ಹಿಡಿದ ಆ ಕೈಗಳೇ ಈ ಸೊಪ್ಪನ್ನೂ ಹದ ಮಾಡಿವೆ. ಕ್ಯೂಬಾದ ಮಣ್ಣಿನಲ್ಲಿ ಈ ಸೊಪ್ಪು ಬೆಳೆದಿದೆ. ಪ್ರತಿಯೊಬ್ಬನ ತುಟಿಯ ಮೇಲೂ ಈ ಸಿಗಾರ್ ಇದ್ದರೆ ಅದು ಅಮೆರಿಕಾದ ವಿರುದ್ಧ ಮುಷ್ಟಿ ಎತ್ತಲು ಇನ್ನಷ್ಟು ಕಸುವು ನೀಡುತ್ತದೆ. ಇದು ಅಸಲಿ ಸಮಾಚಾರ. ಹಾಗಾಗಿ ನಕಲಿ ಸಿಗಾರ್ ನಕಲಿಯೇ.

ಕಣ್ಣನ್‌ದೇವನ್ ಚಹಾ ನೀಲಗಿರಿಯ ಮಡಿಲಿನಿಂದಲೇ ಬರಬೇಕು. 'ವಜ್ರದಂತಿ ವಜ್ರದಂತಿ ವೀಕೋ ವಜ್ರದಂತಿ' ನಿಸರ್ಗದ ಖಜಾನೆಯ ಬಾಗಿಲು ತೆರೆದೇ ಬರಬೇಕು. ಹಾಗೇ ಸಿಗಾರ್ ಕ್ಯೂಬಾದ ಮಡಿಲಿನಿಂದಲೇ ಬರಬೇಕು.

ಭಾರತದಲ್ಲಿ ಇಳಿದಾಗ ನಾನು ಎದುರಿಸಲಾಗದ ಒಂದು ಜೊತೆ ಕಣ್ಣುಗಳಿದ್ದವು. ಆ ಕೇರಳದ ಹುಡುಗನಿಗೆ ಇನ್ನಿಲ್ಲದಂತೆ ಹೇಳಿದೆ. ನೆನಪಿಗಾಗಿ ನಾನು ಏನಾದರೂ ಕೊಡಲೇಬೇಕು. ನನ್ನ ವಾಕ್‌ಮನ್ ಇಟ್ಟುಕೋ. ಹಸಿದವನಿಗೆ ರೊಟ್ಟಿಯೇ ಸೌಂದರ್ಯದ ವಸ್ತು ಎಂದಿದ್ದರಲ್ಲ ಎಕ್ಕುಂಡಿ. ಸಪ್ತಸಾಗರ ದಾಟಿದರೂ, ಸಪ್ತ ಸಮುದ್ರ ಈಜಿ ಮಂತ್ರದ ಗಿಣಿ ತಂದರೂ ಯಾವನಿಗೆ ಬೇಕಿತ್ತು. ಕೇಳಿದ 'ಕನಿಷ್ಠ ಒಂದಾದರೂ' ಸಿಗಾರ್ ಇಲ್ಲದ ಮೇಲೆ.

ತಕ್ಷಣವೇ ಜಿತೇಂದ್ರ ಚೌಧರಿ ಬಳಿ ಓಡಿದೆ. ತ್ರಿಪುರಾ ವಿಮಾನ ಹತ್ತುವ ಮೊದಲು, ಸಿಗಾರ್ ಸೂಟ್‌ಕೇಸ್ ಸೇರುವ ಮೊದಲು. ದೆಹಲಿಯ ರಸ್ತೆಗಳಲ್ಲಿ ಈಜುವುದು ಸುಲಭದ ಕೆಲಸವೇ ? ಆದರೂ ಕಾಡಿ ಬೇಡಿ ನನಗಾಗಿ ಎಂದು ಆ ಒಂದೇ ಒಂದು ಸಿಗಾರ್ ಗಿಟ್ಟಿಸಿದೆ. ಮತ್ತೆ ಅದೇ ಟೇಪ್ ರಿವೈಂಡ್ ಮಾಡಿದಂತೆ ಓಡೋಡಿ ಆತನ ಬಳಿ ಬಂದೆ.

ಆತ ಇನ್ನೇನು ಕೈಹಿಡಿಯಲಿರುವ ಹುಡುಗಿಯೊಂದಿಗೆ ಕುಳಿತಿದ್ದ. ಜಗತ್ತು ಜಾಲಾಡಿ ತಂದ 'ಆ ಒಂದನ್ನು' ಆತನ ಕೈಗಿತ್ತೆ. ಆ 'ಮೂರ್ಖ'ನ ಕಣ್ಣಲ್ಲಿ ಮಳೆ, ಮಿಂಚು, ನಕ್ಷತ್ರಗಳು.

□□□

ಎಚ್ ಎಮ್ ಟಿ
ಬಹುಮಾನಿತ ಲೇಖನ




# ಖಜುರಾಹೋದಿಂದ ಕೇದಾರದವರೆಗೆ

## ಯಾತ್ರೆಯೊಂದರ ಅನುಭವ

**ಕೆ. ಎಸ್. ಪಾರ್ಥಸಾರಥಿ**

''ಖಜುರಾಹೋ'' ಖರ್ಜೂರ ಜಾತಿಯ ವನದ ಮಧ್ಯೆ ಇತ್ತಂತೆ - ಈಗೇನೋ ಅಂಥ ವನ ಕಾಣಲಿಲ್ಲ. ಊರಿನಲ್ಲಿ ಇಳಿದಂತೆ ಬಂದ ಪ್ರವಾಸಿಗನನ್ನು ಎಲ್ಲ ಕಡೆಯಂತೆ - ಹೌದು, ಯೂರೋಪಿನಲ್ಲೂ ಹೀಗೆಯೇ- ನೊಣಗಳಂತೆ ಮುತ್ತಿಕೊಳ್ಳುವ ಅರೆಕೊರೆ ತಿಳಿವಳಿಕೆಯ ''ಮಾರ್ಗದರ್ಶಿ''ಗಳಿಂದ ಬಿಡಿಸಿಕೊಂಡರೆ ಪುಣ್ಯ. ಪ್ರವಾಸಿ ಇಲಾಖೆಯವನೇ ಅಧಿಕೃತ ಮಾರ್ಗದರ್ಶಿಗಳ ಬೆಲೆ ದುಬಾರಿಯಾಗಿರುವುದನ್ನು ಹೇಳಿ, ಅನಧಿಕೃತ ನೊಣಗಳತ್ತ ದೂಡುವ ದಳ್ಳಾಳಿ ಕೆಲಸವನ್ನು ಎಲ್ಲ ಕಡೆಯಂತೆ ಇಲ್ಲೂ ಮಾಡುತ್ತಾನೆ. ಈ ಸರ್ಕಾರಿ ಮಾರ್ಗದರ್ಶಿ ಒಂದಿಷ್ಟು ಚರಿತ್ರೆ, ಪ್ರಾಕ್ತನ ಸಂಶೋಧನೆಯ ವಿಷಯ ಹೇಳಿಯಾನು. ಅಂತೂ ಇವರ ಸೇವೆ ದಕ್ಕುವುದು ವಿದೇಶಿ ಪ್ರವಾಸಿಗರಿಗೆ. ಸ್ವದೇಶಿಗಳಿಗೆ ದಕ್ಕುವುದು ಅರೆಕೊರೆ ತಿಳಿವಳಿಕೆಯೆ !

ಇದರ ಮಧ್ಯೆಯೂ ಒಬ್ಬ ವೃದ್ಧನನ್ನು ''ಖಜುರಾಹೋ'' ಪದಕ್ಕೆ ಏನಾದರೂ ಅರ್ಥವಿದೆಯೆ ಎಂದಾಗ ಅವನು ಹೇಳಿದ್ದು ಸ್ವಾರಸ್ಯವಾಗಿತ್ತು :

'ಖೋಜ್' ಮತ್ತು 'ರಾಹ್' ಶಬ್ದಗಳ ಮಿಶ್ರಣ ಇದು. ''ಮಾರ್ಗವನ್ನು ಹುಡುಕಿಕೋ'' ಎಂಬ ಅರ್ಥವಿರಬಹುದೇ ? ಈ ದೇವಾಲಯದಲ್ಲಿ ಕಲಾಕೃತಿಗಳ ಮೇಲೆ ತುಂಬಿರುವ ವಿವಿಧ ರತಿಕ್ರೀಡಾ ಭಂಗಿಯ ಶಿಲ್ಪ ವಿನ್ಯಾಸ ಅಲ್ಲಲ್ಲೇ ಸಾವಿನ, ತಪಸ್ಸಿನ, ಯೋಗದ, ಪೂಜೆಯ, ಗೀಜೆಯ, ಚಿತ್ರಗಳ ನಡುವೆ ಪ್ರತಿಯೊಂದು ವೀಕ್ಷಕನೂ ತನ್ನ ತನ್ನ ಸಾಂಸ್ಕೃತಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಏನನ್ನೋ ಹುಡುಕಿಕೊಳ್ಳುವುದು - ಒಂದು ಒಟ್ಟಾರೆ ಅನುಭವ ಗ್ರಹಿಕೆ - ಸ್ವಂತದ್ದು. ಜೈನ ಬೌದ್ಧ ಶೈವ ವೈಷ್ಣವ ಲಕ್ಷ್ಮಿ ಪಾರ್ವತಿ ಶಾರದೆಯರಿಗೂ ಎಲ್ಲ ದೈವಗಳಿಗೂ ಒಂದೇ ಬಂಧ - ರತಿ ಕ್ರೀಡೆಯ ಕಟ್ಟಡದ ಸೆರೆ. ಇಂದೂ ನಮಗೆ ಅನುಭವಕ್ಕೆ ಬರದ, ತಿಳಿಯದ, ಹೊಸ ಹೊಸ ಪೋಸುಗಳೂ ಇವೆ ! ಪ್ರಾಣಿಗಳ ಜೊತೆಯೂ ಮನುಷ್ಯನ ರತಿಕ್ರೀಡೆಯ ಚಿತ್ರಗಳು !

ಒಮ್ಮೆ ನನ್ನ ಬಾಟ್ನಿ ಬಯಾಲಜಿ ಗುರುಗಳು - ಬಹಳ ಒಳ್ಳೆಯ ವಿದ್ವಾಂಸರು - ನನ್ನ ಹಳ್ಳಿಯ ಪ್ರೌಢಶಾಲಾ ತರಗತಿಯಲ್ಲಿ ಪಾಠಮಾಡುತ್ತಾ, ವಂಶವಾಹಿನಿಯ ಬಗ್ಗೆ ಅಮೋಘ ಉಪನ್ಯಾಸ ನೀಡಿದ್ದರು. ಅನೇಕ ಲೈಂಗಿಕ ಸಂಬಂಧಗಳ ಪ್ರಶ್ನೆ ಚರ್ಚಿತವಾದಾಗ (ಆಗ ಇನ್ನೂ ಏಡ್ಸ್ ಪದ ಗೊತ್ತಿರಲಿಲ್ಲ) ನನ್ನ ಮುಗ್ಧತೆಯೋ - ಮೌಢ್ಯವೋ - ನಾಯಿಗೂ - ಮನುಷ್ಯನಿಗೂ ಲೈಂಗಿಕ ಸಂಬಂಧವಾದರೆ ಶಿಶು ಜನನವಾಗುತ್ತದೆಯೇ ಎಂದು ಕೇಳಿಬಿಟ್ಟೆ. ಅವರು ನನ್ನನ್ನು ಗೇಲಿ ಮಾಡಿ ವಿಷಯ ಮೊಟಕು ಮಾಡಿಬಿಟ್ಟರು. ಆದರೆ ಈ ಖಜುರಾಹೋದಲ್ಲಿ ಇಂಥ ಚಿತ್ರಗಳನ್ನು ಹಾಗೂ ಇಂದಿನ ವಂಶವಾಹಿನಿ ಶಾಸ್ತ್ರದಲ್ಲಿನ ಚರ್ಚಿತ ವಿಷಯಗಳನ್ನು ಗಮನಿಸಿದಾಗ ನನ್ನ ಪ್ರಶ್ನೆ ಅತಿಪ್ರಸಂಗವಾಗಿರಲಿಲ್ಲ ಎನಿಸುತ್ತದೆ - ರತಿಕ್ರೀಡೆಯ ವಿಷಯದಲ್ಲೂ ಕ್ರಾಸ್ ಬ್ರೀಡ್ ನ್ಯಾಯದಲ್ಲೂ !

ಪೋರ್ಚುಗಲ್ಲಿನ ಮಧ್ಯವಯಸ್ಸಿನ ದಂಪತಿಗಳು ನಿರ್ಭಿಡೆಯಿಂದ ಚಿತ್ರಗಳನ್ನು ನೋಡಿ ಮುಂದೆ ಕೆಲವು ರತಿಭಂಗಿಯನ್ನು ಮುದ್ರಿಸಿದ್ದ ಟೀ-ಷರ್ಟ್‌ನ್ನು ಮಹಿಳೆ ಕೊಂಡುಕೊಳ್ಳುವುದು ಗಮನಕ್ಕೆ ಬಂತು. ಇದು ಯಾರಿಗೆ ಎಂದು ಕೇಳಿದೆ. ನ್ಯೂಯಾರ್ಕ್‌ನಲ್ಲಿರುವ ನನ್ನ ಮಗನಿಗೆ ಎಂದಳು. ಅವನಿಗಿನ್ನೂ ಮದುವೆಯಾಗಿಲ್ಲವಂತೆ. ಪರವಾಗಿಲ್ಲವೆ ? ನನ್ನ ಮಗಳಿಗೂ ಒಂದು ಕೊಳ್ಳಲೆ ಎಂದು ಕೇಳಿದೆ. ಈ ಉಡುಪು ಈ ಚಿತ್ರ ಅಲ್ಲಿ ಸಲ್ಲುತ್ತದೆ. ನಿಮ್ಮಲ್ಲಿ ಹೇಗೋ ಏನೋ. ಆದರೂ ಇಂಥ ಸುಂದರ ಶಿಲ್ಪ ಪದ್ಧತಿಗೆ ವಾರಸುದಾರರು ನೀವು ಹಾಕಿಕೊಂಡರೆ ತಪ್ಪೇನು ಎಂದಳು. ಆದರೂ ನನ್ನ ಮಗಳಿಗೆ ತಂದುಕೊಡುವ ಧೈರ್ಯ ಮಾಡಲಿಲ್ಲ. ಅವಳೇ ಬಂದು ನೋಡಲಿ, ಬೇಕಾದರೆ ತೆಗೆದುಕೊಳ್ಳಲಿ, ನಾನು ಅಡ್ಡಿಯಾಗದಷ್ಟು ಮಾತ್ರ ಮುಂದುವರಿದಿದ್ದೇನೆ ಅಂದೆ.

ಈ ಶಿಲ್ಪಗಳನ್ನು ಯಾವ ಹಿನ್ನೆಲೆ - ತಯಾರಿ - ಪೂರ್ವಾಗ್ರಹವೂ ಇಲ್ಲದೆ ಬಿಚ್ಚು ಮನಸ್ಸಿನಿಂದ ಮೊದಲಿಗೆ ನೋಡುವುದು ಸರಿಯಾದ ಕ್ರಮವೆನಿಸುತ್ತದೆ. ಮೊಟ್ಟ ಮೊದಲು ಸ್ವಂತ ಗ್ರಹಿಕೆಯಾದ ಮೇಲೆ ಇತಿಹಾಸವನ್ನು ಓದಿ, ಕಾಮಶಾಸ್ತ್ರ ತಿಳಿದು... ಪುನಃ ನೋಡಬಹುದು. ಸಾರ್ವಕಾಲಿಕವೆನಿಸುವ ಇವನ್ನು ತಿಳಿಯಲು ಸಾಧಾರಣ ಮನುಷ್ಯನಿಗೆ ಅವುಗಳ ಇಸವಿ ರಾಜನ ಹೆಸರು ಯಾವುದೂ ಬೇಕಾಗಿಲ್ಲ. ಇವನ್ನು ಈಗಿನ ಇಂದಿನ ಅರ್ಥದಲ್ಲಿ ಗ್ರಹಿಸುವುದೇ ಹೆಚ್ಚು ಅರ್ಥವತ್ತಾದ್ದು. ಇಂದಿಗೂ ಪ್ರಸ್ತುತವಾದುದರಿಂದಲೇ ಅವು ಉಳಿದಿರಬೇಕು.

ಈ ಶಿಲ್ಪ ಪ್ರತಿಭೆ ಕಾಣಿಸಿಕೊಳ್ಳುವ ಕಾಲಕ್ಕೆ ಆಗಲೇ ದ್ವೈತ ಅದ್ವೈತ ಮತ ಧರ್ಮಗಳಲ್ಲಿ ಕಾಣಿಸಿಕೊಂಡು, ಬುದ್ಧನ ಮೇಲೆ ಸೇಡು ತೀರಿಸಿಕೊಂಡಾಗಿದ್ದ ಮಧ್ಯಯುಗ ಮೀರಿದ್ದ ಕಾಲದ ಈ ದೇವಸ್ಥಾನ (?)ಗಳ ರಚನೆ ಚೋದ್ಯ - ಕುತೂಹಲಕಾರಕ. ಏನಾದರೂ ಅಡಗದ ನೀಗದ ದಾಹ ! ಇದರ ಕರ್ತೃಗಳ ಅಂದಿನ ಧರ್ಮತತ್ವಗಳ ಜೀವವಿಮುಖತೆಗೆ ಒಂದು ಸವಾಲನ್ನು ಎಸೆದಂತೆ, ಗೇಲಿ ಮಾಡಿದಂತೆ.

ಇಲ್ಲಿಂದ ನೇಪಾಳಕ್ಕೆ ಹೋಗಿ. ಖಟ್ಮಂಡುವಿನ ಎಲ್ಲಾ ದೇವಸ್ಥಾನಗಳಲ್ಲೂ ಪಠಾಣ್ ದರ್ಬಾರ್ ಭಕ್ತಪುರದಲ್ಲೂ ಪಶುಪತಿನಾಥನ ಸುತ್ತಲೂ 'ಪೋಲಿ' ಎನಿಸುವ ಶಿಲ್ಪಲಾಸ್ಯಗಳ ಸುರಿಮಳೆ. ಇವು ಮರದಲ್ಲಿ ನಿರ್ಮಿಸಲ್ಪಟ್ಟವು ಅಥವಾ ಅಷ್ಟೇನೂ ಹಸನಲ್ಲದ ಕಲ್ಲಿನ ಕಚ್ಚಾ ಕೃತಿಗಳು. ರಾಜ, ಮಂತ್ರಿ, ಸೇನಾಪತಿ, ಪುರೋಹಿತರುಗಳ ಮನೆಗಳು ಒಂದರ ಪಕ್ಕ ಒಂದು ಶ್ರೇಣಿ ಶ್ರೇಣಿಯಾಗಿ ಆದರೆ ಕಟ್ಟಡದ ಪ್ರಮಾಣ ಅವನವನ ಮಜಲಿಗೆ ಅಧಿಕಾರಕ್ಕೆ ತಕ್ಕಂತೆ ಚಿಕ್ಕದಾಗುತ್ತಾ ಹೋಗುತ್ತದೆ. ಎಲ್ಲ ಕಟ್ಟಡಗಳ ಮೇಲೂ ಅದದೇ ಚಿತ್ರ-ಗುಣಮಟ್ಟ ಕ್ಷಯಿಸುತ್ತಾ ಹೋಗುತ್ತದೆ. ಅದದೇ ಚಿತ್ರಗಳನ್ನು ಬಿಡಿಸಿ ಬಿಡಿಸಿ ಶಿಲ್ಪಿಗೆ ಬೇಸರ ಬಂದಂತೆ. ಬುದ್ಧಪೂರ್ವದ ನೇಪಾಳಿ ಶಿಲ್ಪಗಳಿಂದ, ರತಿ ಚಿತ್ರಗಳ ಮೋಹ ಇಂದಿನದಲ್ಲ, ಬಹಳ ಹಿಂದಿನದು ಎಂಬ ಗ್ರಹಿಕೆ ರಾಚಿ ಒಡಿಯುತ್ತದೆ. ಬುದ್ಧನ ನಿರ್ವಾಣದ ಬಗ್ಗೆ – ಬೆತ್ತಲೆಯಾದುದರ ಬಗ್ಗೆ – ಭ್ರಮನಿರಸನವಾಗಿಸುವ ಬಗ್ಗೆ ಒತ್ತಡ ಕೊಟ್ಟುದರ ಹಿನ್ನೆಲೆ ಇದೇ ಇರಬಹುದೇನೋ !

'ಖಜುರಾಹೋ' ತೀರದ ಬಯಕೆಯ ನೇಪಾಳದ ಸಮ್ಮೋಹ ಮತ್ತೊಮ್ಮೆ ತಲೆ ಎತ್ತಿದ್ದರ ಕುರುಹಿರಬಹುದು. ಆದರೆ ಇದಾದ ಮೇಲೆ ಕಾಮಕೇಳಿ, ಸೊಕ್ಕು ಮುರಿದು ಸಪ್ಪೆಯಾದಂತೆ ನಮ್ಮ ದೇಶದ ಇತಿಹಾಸ ಸಾಧಾರಣವಾಗುತ್ತದೆ. ದಕ್ಷಿಣದ ದೇವಾಲಯಗಳಲ್ಲಿ ಎಲ್ಲಾದರೂ ಒಂದು ಮೂಲೆಯಲ್ಲಿ ಒಂದು ಮಿಥುನ ಚಿತ್ರವನ್ನು ಶಾಸ್ತ್ರವೆಂಬಂತೆ ರಚಿಸುವುದರಲ್ಲಿ ಪರ್ಯವಸಾನವಾಗುತ್ತದೆ, ಜೀವನದ ಹುಮ್ಮಸ್ಸು. ಈ ಸಾಧನೆಯ (?) ಕೀರ್ತಿಗೆ ಬರೇ ಪರಕೀಯರ ಆಕ್ರಮಣ ಕಾರಣವೆನ್ನುವುದು ಸುಳ್ಳು. ಇಲ್ಲಿಯ ಧರ್ಮದ ಹೆಸರು ಹೊತ್ತ ಪುರೋಹಿತಶಾಹಿ ಆಳುವ ವರ್ಗದವರ ಡಾಂಭಿಕ ಕಪಟವೇ ಕಾರಣವಾಗಿ ಹುಮ್ಮಸ್ಸು ಅಡಗಿ, ಚೇತನ ಉಡುಗಿ, ಪರಕೀಯರು ಸುಲಭವಾಗಿ ಸೋಲಿಸಬಹುದಾದ ಜೀವಚ್ಛವವಾಗಿ ಹೋದರೇನೋ ಜನತೆ.

ಕೇದಾರಕ್ಕೋ, ಬದರಿಗೋ ಹೋದಾಗ, ಹೋಗುವ ಪ್ರಕ್ರಿಯೆಯೇ ಮನಮೋಹಕ. ಮನೋಲ್ಲಾಸದಿಂದ ಅಂತ್ಯದಲ್ಲಿ ಏನನ್ನೋ ನಿರೀಕ್ಷಿಸುತ್ತಾ ಅಲ್ಲಿ ತಲಪಿದ ಮೇಲೆ ಸಿಗುವ ಸ್ಥಳ, ಮಂದಿರ, ಜನ, ಎಲ್ಲಾ ಅದರಲ್ಲೂ ದಕ್ಷಿಣದವರಿಗೆ ತೀರಾ ನಿರಾಶಾದಾಯಕ.

ಇದೇನು ದೇವಸ್ಥಾನವೇ, ಇದು ದೇವರೇ, ಇದು ನಮ್ಮ ಪೂರ್ವಿಕರ ಸೆಲೆ-ನೆಲೆಯೇ ! ಇಷ್ಟು ಪ್ರಕೃತಿ ಶುಭ್ರ ಸೌಂದರ್ಯದ ಸ್ಥಳದಲ್ಲಿ ಈ ಕೊಳಕು ಛಿ ! ಛಿ ! ಹೌದು ! ಈ ತಿಳಿವಳಿಕೆಗಾಗಿಯೇ ಈ ಯಾತ್ರೆಯನ್ನು ಪ್ರತಿಯೊಬ್ಬರೂ ಕೈಗೊಳ್ಳುವುದು ಅಗತ್ಯ. ಹಾದಿಗುಂಟ, ಆ ಸುಂದರ ಪ್ರಕೃತಿಯನ್ನು ಕಣ್ತುಂಬ ನೋಡಿ, ಆನಂದಿಸಿ, ಮನಸ್ಸು ವಿಶಾಲ ಮಾಡಿಕೊಳ್ಳುವುದು. ಆ ಉನ್ನತ ಶಿಖರಗಳ, ಜಲಪಾತಗಳ, ನದಿಗಳ ಮಧ್ಯೆ ನಮ್ರತೆ, ವಿನಯದ ಅರ್ಥ ಕಂಡುಕೊಳ್ಳುವುದು. ಇದರೊಂದಿಗೆ ನಮ್ಮ ದೇಶದ ಜನ ಧರ್ಮದ ಹೆಸರಿನಲ್ಲಿ ಎಷ್ಟು ಕೊಳಕರೂ ಪಾಖಂಡಿಗಳೂ ಆಗಿಬಿಟ್ಟದ್ದೇವೆ ಎಂಬ ತಿಳಿವಳಿಕೆಯನ್ನು ಪಡೆದುಕೊಂಡುಬರುವುದು. ಈ ಎರಡೂ ಲಾಭಗಳೇ. ನದಿ ಕಾನನ ಗುಹೆ ಪರ್ವತ ಶಿಖರಗಳ ಹೆಸರುಗಳು ಪುರಾಣಗಳಲ್ಲಿ ಬರುವ ವ್ಯಕ್ತಿ ಸ್ಥಳಗಳ ಹೆಸರುಗಳಾಗಿ, ಪುರಾಣ ಪುರಾಣವೋ, ಅದರಲ್ಲೆಷ್ಟು ಇತಿಹಾಸವೋ ಎಂದು ಬೆರಗಾಗುವ ಅನುಭವವೂ ಚಂದ. ಖಜುರಾಹೋ ಕಟ್ಟಡಗಳ ಗೋಪುರಗಳೆಲ್ಲಾ ಜೈನ ಬುದ್ಧ ದೇವಾಲಯಗಳಂತಿವೆಯಲ್ಲಾ ? ಕೋನಾರ್ಕದಲ್ಲಿ ಭುವನೇಶ್ವರ ಲಿಂಗರಾಜ ಎಲ್ಲಾ ಕಡೆಯೂ ಜೈನರದ್ದೋ ಬೌದ್ಧರದ್ದೋ ಮೂಲದೇವಸ್ಥಾನ ಹಿಂದೂ ಕೈಸೇರಿ, ಮೂಲ ಮೂರ್ತಿ ಮಾತ್ರ ಬದಲಾಗಿರಬಹುದೆಂಬ ಗುಮಾನಿಯಂತೆ ಇಲ್ಲೂ ಏನಾದರೂ ? ಗುಮಾನಿಯೇನು ? 'ಧರ್ಮ'ಯುದ್ಧಗಳ ಕಥೆಯೇ ಹಾಗೆ. ಜಗತ್ತಿನ ಎಲ್ಲ ಕಡೆಯೂ ಅಷ್ಟೆ. ತಮಿಳುನಾಡಿನ ಶೈವ-ವೈಷ್ಣವರ ದೇವಾಲಯಗಳು ಪುನಃ ಪುನಃ ಹಸ್ತಾಂತರವಾಗಿರುವುದು ಚಾರಿತ್ರಿಕ ವಿಷಯವೇ. ಕಾಶಿಯಷ್ಟೇ ಪುರಾತನವೆನಿಸುವಷ್ಟು ಕಾಂಚಿಯಲ್ಲೂ ಹಾಗೆಯೇ. ಮಧುರೆಯ ಸಮೀಪ ಅಳಹರ್ ಮಲೆಯ ಸುಂದರರಾಜ ಪೆರುಮಾಳ್ ವೈಷ್ಣವನಾದರೆ, ಅದರ ದಿಡ್ಡಿ ಬಾಗಿಲು ಈಗಲೂ ಮುಚ್ಚಿದೆ. ಅದರ ಹೊರಗೆ ಶೈವ ಪೂಜಾರಿ ಕುಳಿತು ಧೂಪ ಹಾಕುತ್ತಿರುತ್ತಾನೆ. ಮೊದಲಿದ್ದಿರಬಹುದಾದ ಶಿವನಿಗೂ, ಹಳೆಯ ಬೆಂಕಿ ಆರದಂತೆಯೂ, ದೇವಾಲಯ ದೊಳಕ್ಕೆ ಬಳಸಿಕೊಂಡು ಹೋಗಬೇಕು.

ನೇಪಾಳದ ಪಶುಪತಿನಾಥ ಭಕ್ತಪುರಕ್ಕೆ ಹೋಗಿ. ಅರೆ ! ಇಲ್ಲಿಯ ಗೋಪುರಗಳೂ ಜೈನ ಬೌದ್ಧರಂತೆಯೇ ಇವೆಯಲ್ಲ! ಕೆಲವು ಜಪಾನೀ ಚೀನಿ ಮಾದರಿಯೂ, ಹಿಂದೂ ದೇವರಿಗೆ ! ಆದರೆ ಮುಕ್ಕಾಲು ವಾಸಿ ಇವು ಮರದವು ಹಾಗೂ ಚಾರಿತ್ರಿಕವಾಗಿ ಇವು ಬಹಳ ಹಳೆಯವು. ಕೆಲವು ಬುದ್ಧ ಪೂರ್ವದ್ದೂ ಸಹ. ಬುದ್ಧನ ಪ್ರಾಬಲ್ಯ ತಾಳದೆ ಬಹುಶಃ ನೇಪಾಳದ ದಕ್ಷಿಣದ ಹಿಂದೂಗಳು ಓಡಿಹೋಗಿ ಅಥವಾ ಬುದ್ಧನ ಪ್ರಾಬಲ್ಯಕ್ಕೆ ಸಿಕ್ಕಿಕೊಳ್ಳದೆ, ಉಳಿದ, ಹಳೆಯ-ವೈದಿಕ-ಬಹುದೇವತಾ ವೃಕ್ಷಪೂಜೆ ಶಿಲಾಪೂಜೆಯ ಹಂತದ ಹಿಂದೂ ಕಾಲವೇನೇ. ಅಲ್ಲೇ ಓಡಾಡುತ್ತಿದ್ದ ಸ್ಥಳೀಯ ವಯೋವೃದ್ಧರೊಬ್ಬರನ್ನು ಇದ್ಯಾಕೆ ಸ್ವಾಮಿ ಹೀಗೆ ? ಬುದ್ಧ ಜೈನ ಗೋಪುರ ಉಳಿಸಿಕೊಂಡಿದ್ದೀರಿ ಚೀನಿ ಜಪಾನಿಯರನ್ನು ಅನುಕರಿಸಿದ್ದೀರಿ ? ಎಂದು ಪ್ರಶ್ನಿಸಿದರೆ ಉತ್ತರ ಬಂತು. ಈ ಗೋಪುರಶೈಲಿ ಮೂಲ ಹಿಂದೂಗಳದ್ದೇ. ಉತ್ತರ ಭಾರತದ ಅತಿ ಹಳೆಯ ಸಂಪ್ರದಾಯವದು. ನಮ್ಮ ನಡುವೆಯೇ ಹುಟ್ಟಿದ ಜೈನ ಬೌದ್ಧರು, ಮುಂದೆ ಚೀನಿಯರು ಈ ಶೈಲಿಯನ್ನು ಉಳಿಸಿ, ಅನ್ವಯಿಸಿಕೊಂಡು ಬೆಳೆಸಿದರು. ಚೀನಿಯರಿಂದ ಜಪಾನಿಗೂ ಪೂರ್ವ ಏಷ್ಯಾಗೂ ಹೋಯಿತು. ಆದ್ದರಿಂದ ಕೇವಲ ಗೋಪುರ ನೋಡಿ ಹಿಂದುಗಳು ಕಿತ್ತುಕೊಂಡ ಬೌದ್ಧರ ದೇವಸ್ಥಾನವೆಂಬ ತಿಳಿವಿಗೆ ಬರಬಾರದು. ಚಾರಿತ್ರಿಕ ಸಮಯ ಹಿನ್ನೆಲೆಯನ್ನು ಗಮನಿಸಿ ತೀರ್ಮಾನಿಸಬೇಕು.

ಕೇದಾರದ ದೇವರು ಕೇವಲ ಒಂದು ಬಂಡೆಯ ಅರೆ - ರೂಪರಹಿತ. ಸಮತಟ್ಟವಲ್ಲದ್ದು, ಚಪ್ಪಡಿ. ಹೀಗೆಂದರೆ ನಾನು ಭಕ್ತಿಯಿಲ್ಲದವ ಅಪಮಾನ ಮಾಡುತ್ತಿದ್ದೇನೆ ಎಂದು ಭಾವಿಸಬಾರದು. ನಾನು ಯಾತ್ರೆಗೇ ಹೋಗಿದ್ದೇನೆಂಬುದು ನೆನಪಿರಲಿ. ಸಹಸ್ರಾರು ವರುಷಗಳಿಂದ ನಮ್ಮ ಜನರಿಂದ ಪೂಜಿಸಲ್ಪಟ್ಟಿರುವುದೇ ಸಾಕು ನಾಸ್ತಿಕನಿಗೂ ಇದರ ಬಗ್ಗೆ ಗೌರವ ತರಲು. ಈ ಶ್ರದ್ಧೆಯ ಭಕ್ತಿಯ ಐತಿಹಾಸಿಕ ಅನೂಚಾನ ನಂಬಿಕೆಯ ವಾಸ್ತವಿಕ ಸೆಲೆಯೇನು ಎಂದು ಕೆದಕುವುದು ಇದರ ಉದ್ದೇಶವಷ್ಟೆ.

ಈ ದೇವರ ಬಳಿ ನಿಂತು ಕಣ್ಣು ಮುಚ್ಚುವಷ್ಟರಲ್ಲೇ, ನಮ್ಮ ಹುಳ್ಳು ಮನಸ್ಸಿನ ಅಂತರಂಗದ ಪ್ರಶ್ನೆಯನ್ನು ಕೇಳಿಸಿಕೊಂಡಂತೆ, ಪಕ್ಕದಲ್ಲಿರುವ ಪಂಡ ನೀವು ಕೇಳದಿದ್ದರೂ ಕಿವಿಯಲ್ಲಿ ಉಸುರುತ್ತಾನೆ. 'ಇದು ಖಟ್ಮಂಡುವಿನಲ್ಲಿರುವ ಪಶುಪತಿನಾಥನ ಬೆನ್ನು ! ಇಲ್ಲಿ ಲಿಂಗವಿಲ್ಲ !' ಒಂದೇ ಹಿಮಾಲಯದ ಬಂಡೆಗಳಲ್ಲನ್ನು ಅದರ ಮೂರು ಸಾವಿರ ಮೈಲಿ ಉದ್ದಕ್ಕೂ ತಲೆ, ಬೆನ್ನು ಕಾಲಾಗಿ ಮೂರ್ತಿ ಕಲ್ಪಿಸಿಕೊಂಡರೆ ಏನು ಭವ್ಯಕಲ್ಪನೆ !



*ಹಿಮಾಲಯದಲ್ಲಿ ಹೆಜ್ಜೆ ಹಾಕುವಾಗ......*

ಅದಂತಿರಲಿ, ಬದರಿಯಲ್ಲೂ ಇಷ್ಟೇ. ಸಮತಟ್ಟವಲ್ಲದ ಚಪ್ಪಡಿ. ಅದರ ಮೇಲೆ ಬದರಿನಾಥನ ಮೂರ್ತಿ ಸೃಷ್ಟಿಸುವ ಪ್ರಯತ್ನ ಏನೇ ಇರಲಿ, ಸರ್ಕಾರದ ಪ್ರವಾಸೀ ಮಾಹಿತಿ ಪತ್ರವೊಂದರಲ್ಲಿ ಹೇಳಿರುವಂತೆ ಸುಮಾರು ಕ್ರಿ.ಶ. ೧೫೫೦ರವರೆಗೆ ಬದರಿಯಲ್ಲಿದ್ದದ್ದೂ ಬುದ್ಧನ ಪ್ರತಿಮೆಯೇ. ಶಂಕರ ಆ ಪ್ರತಿಮೆಯನ್ನೇ ವಿಷ್ಣುವಿನ ಪ್ರತಿಮೆಯಾಗಿಸಿಬಿಟ್ಟರು. ಬುದ್ಧನನ್ನು ವಿಷ್ಣುವಿನ ಹತ್ತನೆಯ ಅವತಾರವೆಂದು ಸಾರಿ, ಆ ಧರ್ಮದ ವೈದಿಕ ಧರ್ಮದ ವಿರೋಧದ ಬುಡಕ್ಕೇ ಏಟು ಬಿತ್ತು. ೧೫೫೦ರ ಮೇಲೆ ಇಂದಿನ ಬದರೀ ವಿಶಾಲ್ ಆಗಮನ. ಗಯೆಯ ವಿಷ್ಣುಪಾದ ಸ್ಥಳವೂ ಅಷ್ಟೇ ಸಮತಟ್ಟವಲ್ಲದ ಚಪ್ಪಡಿ. ಅಲ್ಲಿಂದ ೧೦ ಕಿ.ಮೀ. ಸಮೀಪ ಬುದ್ಧಗಯೆ. ಅಲ್ಲಿ ಬೋಧಿವೃಕ್ಷವಿದೆ. ಆದರೆ ಅಲ್ಲಿನ ಬುದ್ಧ ಪ್ರತಿಮೆಗಳು ಈಚಿನವು.

ಒಂದು ಅನಿಸಿಕೆಯಿಂದ ಈ ಮೂರು ಸ್ಥಳದಲ್ಲಿದ್ದ ಬುದ್ಧನ ಪ್ರತಿಮೆಯನ್ನು ಕೊಚ್ಚಿಹಾಕಲಾಯಿತು. ಉಳಿದ ಬಂಡೆಯ ತಳವೇ ಹಿಂದೂ ಧರ್ಮದ ವಿಕ್ರಮದ ಲಾಂಛನಗಳಾದುವು. ಶಂಕರರ ಕಾಲದಲ್ಲೂ ಬುದ್ಧನ ಪ್ರತಿಮೆಯನ್ನು, ಅದರ ಇರುವಿಕೆಯನ್ನು ಸಹಿಸಲಾಯಿತು. ಅಥವಾ ಅವರ ಅದ್ವೈತಕ್ಕೆ ಈ ಪ್ರತಿಮೆಯ ಅಸ್ತಿತ್ವದಿಂದ ಬಾಧಕವಿರಲಿಲ್ಲ, ಅಥವಾ ಅದನ್ನೂ ಉಳಿಸಿಕೊಳ್ಳುವುದರಿಂದ ಜನ ಮನವನ್ನು ಬದಲಾಯಿಸಿ ಸೆಳೆದುಕೊಳ್ಳುವುದರಲ್ಲಿ ಪ್ರಯೋಜನವಿತ್ತು. ಕಾಲಾನು ಕಾಲದಲ್ಲಿ ಇದನ್ನೂ ತೆಗೆಯುವ ಧೈರ್ಯ ಬಂದಿರಬಹುದು. ಚರಿತ್ರೆಯ ಈ ಸಂಗತಿಯಿಂದ ಉದ್ವಿಗ್ನತೆಯೋ, ನಾಚಿಕೆಯೋ, ಅಹಂಕಾರವೋ ಬರಬೇಕಾಗಿಲ್ಲ. ವಿರೋಧಿಸುವುದು, ಗೆಲ್ಲುವುದು, ಮುಂತಾದುವು ಐತಿಹಾಸಿಕ ವಾಸ್ತವತೆಗಳು. ಹಿಂದೂ ಜನಾಂಗ ತನ್ನ ಭೌಗೋಳಿಕ ಉತ್ತರದ ಮಿತಿಯನ್ನು ಗುರುತಿಸಿಕೊಳ್ಳುವ ಅವಕಾಶವಿರುವ ಸ್ಥಳಗಳು ಕೇದಾರ, ಬದರಿ, ನೇಪಾಳದ ಪಶುಪತಿನಾಥ, ಮುಕ್ತಿನಾಥ (ಸಾಲಿಗ್ರಾಮ ಸಿಗುವ ಜಾಗ) ಎಂದೆನಿಸುತ್ತದೆ. ಮುಸ್ಲಿಮರು ಮೆಕ್ಕಾಗೆ ಹೋದಂತೆ, ಕ್ರಿಶ್ಚಿಯನ್ನರು ಜೆರೂಸೆಲೆಮ್‌ಗೆ ಹೋದಂತೆ, ಎಲ್ಲ ಜಾತಿಯ ಹಿಂದೂ ಈ ಸ್ಥಳಕ್ಕೆ ಯಾತ್ರೆ ಹೋಗುವ ಕನಸು ಕಾಣುವುದು ಅವುಗಳಷ್ಟೆ ಭಾವುಕ ವಿಷಯಗಳು. ದುರದೃಷ್ಟವೆಂದರೆ ಬೇರೆಡೆಯಂತೆ ಇಲ್ಲೂ ಪಂಚಮರನ್ನು ಗಮನಿಸಿಲ್ಲವೆನಿಸುತ್ತದೆ. ಗಯೆಯ ಶ್ರಾದ್ಧ ಪ್ರಕ್ರಿಯೆಯಲ್ಲೂ ಎಲ್ಲಾ ನಾಲ್ಕು ವರ್ಣಗಳಿಗೂ ಅವಕಾಶವಿದೆ, ಪಂಚಮರನ್ನು ಬಿಟ್ಟು. ಪಂಡನೊಬ್ಬನನ್ನು ಕೀಟಲೆ ಮಾಡಿದೆ: ನಿನ್ನ ಬಳಿ ಬಂದು ಪಿಂಡ ಹಾಕಿಸಿಕೊಳ್ಳುವವನು ದೂರದ ಊರಿನ ಪಂಚಮನಾದರೆ ನಿನಗೆ ತಿಳಿಯುವುದೇ ಇಲ್ಲವಲ್ಲ ಅಂತ. ನನ್ನ ಪಂಡತನಕ್ಕೆ ಅದರಿಂದ ಯಾವ ಬಾಧಕವೂ ಇಲ್ಲ ಎಂದ ಆ ಭಂಡ ! ಇಂದಿನ ಸಾಮಾಜಿಕ ಪ್ರಜ್ಞೆಯ ಪರಿಸ್ಥಿತಿಯಲ್ಲಿ ಈ ಪಕ್ಷ - ಪಿಂಡದ ಬಾಧೆಯ ಮಟ್ಟಿಗೆ, ಪಂಚಮರ ಸ್ಥಿತಿಯೇ ಹಾಯ್ ಎನಿಸುವುದಿಲ್ಲವೇ ? ನಮ್ಮ ನೆರೆ ರಾಷ್ಟ್ರವಾದ ನೇಪಾಳದ ಪಶುಪತಿನಾಥ ಮುಕ್ತಿನಾಥರನ್ನು ನಮ್ಮ ಧಾರ್ಮಿಕ ನೆಲೆಯ ಸ್ರೋತವಾಗಿ ಹೇಳುವಾಗ, ಆ ರಾಷ್ಟ್ರದ ಬಗೆಗಿನ ನಮ್ಮ ಸಾಮ್ರಾಜ್ಯಶಾಹಿ ಮನೋಭಾವವನ್ನು ಪ್ರಕಟಿಸಿದೆವು ಎನ್ನಬಾರದು. ಐತಿಹಾಸಿಕವಾಗಿ ಈ ಭರತಖಂಡ,

ಇಂದಿನ ಪಾಕಿಸ್ತಾನ, ಕಾಶ್ಮೀರ, ಬಂಗ್ಲಾದೇಶ, ಸಿಂಹಳವೂ ಸೇರಿ, ಛಪ್ಪನ್ನಾರು ರಾಜರಿಂದ ಕೂಡಿದ್ದಾಗಲೂ, ಧಾರ್ಮಿಕವಾಗಿ ಜನ, ಅವರು ಜೈನರೇ ಇರಲಿ, ಬೌದ್ಧರೇ ಇರಲಿ, ಹಿಂದುಗಳೇ ಆಗಲಿ, ಯಾತ್ರೆಗಳನ್ನು ಕೈಗೊಳ್ಳಲು ದಕ್ಷಿಣದಿಂದ ಉತ್ತರಕ್ಕೆ ಉತ್ತರದಿಂದ ದಕ್ಷಿಣಕ್ಕೆ ಅನಿರ್ಬಂಧಿತವಾಗಿ ಚಲಿಸುತ್ತಿದ್ದರು. ರಾಜ್ಯರಾಜ್ಯಗಳ ನಡುವೆ ಈ ಯಾತ್ರೆಯ ಕೆಲಸಕ್ಕೆ ಪಾಸ್‌ಪೋರ್ಟ್ ಪರವಾನಗಿಯ ಅಗತ್ಯವಿರಲಿಲ್ಲ. ಸಾಂಸ್ಕೃತಿಕ ಧಾರ್ಮಿಕ ಅಗತ್ಯ ಬಯಕೆಯನ್ನು ಈ ರೀತಿ ಪರಿಹರಿಸಿ ಕೊಂಡಿದ್ದರಿಂದ, ಬಹುಶಃ ರಾಜಕೀಯವಾಗಿ ಏಕಛತ್ರನಾಗಲು ಜನತೆಯ ಮಟ್ಟದಲ್ಲಿ ಯಾವ ಒತ್ತೂ ಇದ್ದಿಲ್ಲದಿರಬಹುದು. ರಾಜ್ಯ ರಾಜ್ಯಗಳ ನಡುವಿನ ವ್ಯವಹಾರ, ಕಾಳಗ-ಕಲಾಪ ಕೇವಲ ಆಳುವ ವರ್ಗದವರ ಮಟ್ಟದಲ್ಲಿ ಆಟಿಕೆಯಾಗಿ ಜನತೆಯನ್ನು ಅದು ತಟ್ಟಲೇ ಇಲ್ಲವೇನೋ. ಮುಂದೆ ಕೆಲವು ರಾಜರು ತಲೆಗಂದಾಯ ಯಾತ್ರಿ ಕರಗಳನ್ನು ಹೇರಿ ಸಾಧಾರಣ ಜನರು ಧಾರ್ಮಿಕ ಸಾಂಸ್ಕೃತಿಕ ಅಗತ್ಯಗಳಿಗಾಗಿ ಮುಕ್ತವಾಗಿ ಚಲಿಸಲು ಅಡ್ಡಿಯುಂಟಾದಾಗ ಜನತಾ ಮಟ್ಟದಲ್ಲಿ ರಾಜಕೀಯ ಪ್ರಜ್ಞೆ ಉದಿಸಿರಬೇಕು. ಮಹತ್ವಾಕಾಂಕ್ಷೆಯ ಅಕ್ಬರ್ ಈ ಇಂಥ ಕಂದಾಯಗಳನ್ನು ತೆಗೆದು ಹಾಕಿದ್ದಕ್ಕೂ ಅರ್ಥ ಬರುವುದು ಹೀಗಂದುಕೊಂಡಾಗ ಅನಿಸುತ್ತದೆ.

ಕಡೆಯದಾಗಿ ಈ ಯಾತ್ರೆಗಳ ಇಂದಿನ ಅಗತ್ಯದ ಬಗ್ಗೆ ಒಂದೆರಡು ಮಾತು. ಹಿಂದೆ ಕಾಶಿಯಾತ್ರೆ ಹೊರಟರೆಂದರೆ ಅಳುತ್ತಿದ್ದರಂತೆ. ಅವರು ಹಿಂದಿರುಗಿ ಬರುವುದಿಲ್ಲ ಎಂಬ ಹೆದರಿಕೆಯಿಂದ. ಅವರಿಗೆ ಬಹಳ ವಯಸ್ಸಾಗಿರುತ್ತಿತ್ತು, ತಮ್ಮ ಕೌಟುಂಬಿಕ ಜವಾಬ್ದಾರಿಗಳನ್ನೆಲ್ಲಾ ಮುಗಿಸಿರುತ್ತಿದ್ದರು. ಧಾರ್ಮಿಕ ಬಯಕೆಗಾಗಿಯೇ ಹೋಗುತ್ತಿದ್ದರು. ಪ್ರಯಾಣದ ಕಷ್ಟ, ಇಳಿ ವಯಸ್ಸಿನಿಂದಾಗಿ, ಹಿಂದಿರುಗಿ ಬರುವುದು ಅಪರೂಪ. ಹಾಗೇನಾದರೂ ಹಿಂದಿರುಗಿ ಬಂದರೆ ಸಮಾರಾಧನೆ, ಎಲ್ಲರಿಗೂ ಗಂಗೆಯ ಆಪೋಶನ, ಸಂತೋಷ. ಹಿಂದಿರುಗದಿದ್ದರೆ ನಷ್ಟವೇನೂ ಇಲ್ಲ! ಆದರೆ ಮತ್ತೊಂದು ಜಗೆ ದೇಶಾಟನೆಯೂ ಪರಿಪಾಠದಲ್ಲಿತ್ತು. ಅದು ಗುರುಕುಲದ ವಿದ್ಯೆ ಆದಮೇಲೆ, ದೇಶಾಟನೆಯ ಅನುಭವ ಪಡೆಯಬೇಕು. ಸಂಪಾದಿಸಿ, ಗುರುದಕ್ಷಿಣೆ ಕೊಟ್ಟಮೇಲೆಯೇ ಗೃಹಸ್ಥನಾಗಬಹುದಿತ್ತು. ಜ್ಞಾನದ ಅಜೀರ್ಣದಿಂದ ವೈರಾಗ್ಯ ಬಂದ ಯುವಕ ಕಾಶೀಯಾತ್ರೆಗೆ ಹೊರಡುವುದು ಜಗನ್ವಿಮುಖತೆಯ ಕುರುಹಾಗಿ, ಮದುವೆಯ ಶಾಸ್ತ್ರದಲ್ಲಿ ತಮಾಷೆಯ ''ಕಾಶೀಯಾತ್ರೆ''ಯಾಗಿಯೂ ಕಾಣಿಸಿಕೊಳ್ಳುತ್ತದೆ. ಆದರೆ ಇಂದು ಪ್ರಯಾಣದ ಅನುಕೂಲ ಬಹಳ ಸುಲಭವಿದೆ. ಈ ಕಾಲದಲ್ಲಿ ಈ ಯಾತ್ರೆ ಮಾಡಬೇಕೇ ? ಯಾವಾಗ ಮಾಡಬೇಕು. ಮಾಡುವುದರಿಂದ ಆಗುವ ತಿಳಿವಳಿಕೆಯ ಲಾಭದ ಬಗ್ಗೆ ಈ ಮೊದಲೇ ಚರ್ಚೆಯಾಗಿದೆ. ಆದರೆ ಈ ಯಾತ್ರೆಯನ್ನು ಭಾರತದ ಎಲ್ಲ ಜಾತಿಯ ಎಲ್ಲ ಯುವಕರು (ಮುದುಕರಲ್ಲ) ಕೈಗೊಳ್ಳಬೇಕೆಂದು ಖಂಡಿತವಾಗಿ ಹೇಳಬಲ್ಲೆ. ಇದರಿಂದ ಅವರ ಜೀವಿತದ ಮುಂದಿನ ದಿನಗಳಲ್ಲಿ ಇವರು ಧರ್ಮ ಸಂಸ್ಕೃತಿಯ ಬಗ್ಗೆ ಸ್ವಲ್ಪವಾದರೂ ಜವಾಬ್ದಾರಿಯಿಂದ ನಡೆದುಕೊಳ್ಳುತ್ತಾರೆ. ರಾಷ್ಟ್ರದ ಐಕ್ಯತೆ ಘನತೆಯ ಬಗ್ಗೆ ನಂಬಿಕೆಯನ್ನು ಪಡೆದುಕೊಳ್ಳಬಲ್ಲರು. ಈ ನಾಡಿನಲ್ಲಿ ಶುದ್ಧಪಡಿಸಿಕೊಳ್ಳಬೇಕಾದ ಪಾಖಂಡಿತನ, ಕೊಚ್ಚೆ ಕೊಳಕು ಎಷ್ಟಿದೆ ಎಂದು ಗ್ರಹಿಸಿ, ರೊಚ್ಚಿಗೆ ಏಳಬಹುದು. ಒಂದಿಷ್ಟಾದರೂ ಕಾರ್ಯನಿರತರಾದಾರು. ಅಯೋಧ್ಯೆಗೆ ತಿರುವನಂತಪುರದಿಂದ ಇಟ್ಟಿಗೆ ಹೊರುವ ಮೂರ್ಖತನ ಮಾಡಲಾರರು ಎಂದೆನಿಸುತ್ತದೆ. ಅದೇ ಸಮಯದಲ್ಲಿ ರಾಷ್ಟ್ರದ ಸಾಂಸ್ಕೃತಿಕ ಐಕ್ಯತೆಯನ್ನು ಅನುಭವಿಸಿ, ಗ್ರಹಿಸಬಹುದು. ಬರೇ ಮುದುಕರು ಹೋಗುವುದರಿಂದ ಇದಾವ ಪ್ರಯೋಜನವೂ ಆಗುವುದಿಲ್ಲ. ಅವರಿಗೆ ವೃಥಾ ಶ್ರಮವೆನಿಸುತ್ತದೆ.

**ಕೆ. ಎಸ್. ಪಾರ್ಥಸಾರಥಿ**
ಇ-೧೦, ವೈರ್‌ಲೆಸ್ ಮಾನಿಟರಿಂಗ್, ಸ್ಟೇಷನ್ ಕಾಂಪೌಂಡ್
ಜಯನಗರ, ಬೆಂಗಳೂರು - ೫೬೦ ೦೪೧








ಕರ್ನಾಟಕದಲ್ಲಿ ಸುಸ್ಥಿರ ಆಂದೋಲನ ಹುಟ್ಟುಹಾಕಲು ತನ್ನದೇ ನಿಲುವು ದೃಷ್ಟಿಕೋನಗಳಿಂದ ಕರ್ನಾಟಕದ ಮೂಲೆಗಳಲ್ಲಿರುವ ಕೃಷಿಕರಲ್ಲಿ ಹೊಸ ಚೈತನ್ಯ ಮೂಡಿಸಲು ಸಫಲವಾಗಿರುವ

**ಸಿರಿಸಮೃದ್ಧಿ**

ಮಾಸಿಕ ಕೃಷಿ ಪತ್ರಿಕೆ

ಗ್ರಾಮೀಣಾಭಿವೃದ್ಧಿಯಲ್ಲಿ ಅಭೂತಪೂರ್ವ ಪ್ರಯೋಗಗಳನ್ನು ಕೈಗೊಂಡಿರುವ ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪ್ರಕಟಿತ ಪತ್ರಿಕೆ

**ಚಂದಾ ವಿವರ**

| | | | | | |
|---|---|---|---|---|---|
| ವಾರ್ಷಿಕ | ರೂ. | 100 | ಪಂಚವಾರ್ಷಿಕ | ರೂ. | 450 |
| ತ್ರೈವಾರ್ಷಿಕ | ರೂ. | 275 | ಆಜೀವ | ರೂ. | 1000 |

ಆಜೀವ ಸದಸ್ಯರಿಗೆ 'ನಾಡ ಹಸುಗಳಿಂದ ಮಿಶ್ರತಳಿ ಸಂವರ್ಧನೆ' ಎಂಬ ಪುಸ್ತಕವನ್ನು ಉಚಿತವಾಗಿ ಕಳುಹಿಸಲಾಗುವುದು

ನಿಮ್ಮ ಚಂದಾ ಹಣವನ್ನು ಡಿ.ಡಿ. / ಎಂ.ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಿ



**ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆ**

ಅಂಚೆ ಪೆಟ್ಟಿಗೆ ಸಂ. 3, ಶಾರದಾ ನಗರ, ತಿಪಟೂರು - 572 202, ತುಮಕೂರು ಜಿಲ್ಲೆ
ದೂರವಾಣಿ : 08134-50659, ಫ್ಯಾಕ್ಸ್ : 08134-51337, e-mail : baif@bgl.vsnl.net.in







# ದೇಶವನ್ನು ಅಮೆರಿಕದ ದಾಸ್ಯಕ್ಕೆ ದೂಡುತ್ತಿರುವ ವಾಜಪೇಯಿ ಸರಕಾರ

ಸ್ವತಂತ್ರ ಭಾರತದ ವಿದೇಶಾಂಗ ನೀತಿಗೆ ಒಂದು ಕಾಲದಲ್ಲಿ ಗೌರವಾದರಗಳಿದ್ದುವು. ಪ್ರಮುಖ ಅಂತರರಾಷ್ಟ್ರೀಯ ಪ್ರಶ್ನೆಗಳನ್ನು ಕುರಿತು ಭಾರತ ತಳೆಯುತ್ತಿದ್ದ ತತ್ವಬದ್ಧ ನಿಲುವುಗಳಿಗೆ ಪ್ರಪಂಚದಾದ್ಯಂತ ವ್ಯಾಪಕವಾದ ಮನ್ನಣೆ ಇತ್ತು. ಏಷ್ಯ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕದ ಅಭಿವೃದ್ಧಿಶೀಲ ರಾಷ್ಟ್ರಗಳು ಭಾರತದ ನಿಲುವಿಗೆ ಬೆಂಬಲ ಕೊಡುತ್ತಿದ್ದುವು. ಭಾರತದ ಮಾರ್ಗದರ್ಶನಕ್ಕಾಗಿ ಎದುರು ನೋಡುತ್ತಿದ್ದುವು. ಪಾಶ್ಚಾತ್ಯ ದೇಶಗಳು ಭಾರತದ ನೀತಿಯನ್ನು ಒಪ್ಪದಿದ್ದರೂ ಅದನ್ನು ಗಂಭೀರವಾಗಿ ಪರಿಗಣಿಸುತ್ತಿದ್ದುವು. ಅಮೆರಿಕ ಭಾರತದ ಅಲಿಪ್ತನೀತಿಯನ್ನು ಅನೀತಿ ಎಂದು ಜರಿಯುತ್ತಿತ್ತು, ಅಸಹನೆಯಿಂದ ನೋಡುತ್ತಿತ್ತು. ಅಣ್ವಸ್ತ್ರ ವಿರೋಧ, ನಿರಾಯುಧೀಕರಣ ಮತ್ತು ಶಾಂತಿನೀತಿಗೆ ದೃಢವಾಗಿ ಬದ್ಧವಾಗಿದ್ದ ಭಾರತ ವಿಶ್ವಸಂಸ್ಥೆಯ ಒಳಗೂ ಹೊರಗೂ ಅದಕ್ಕಾಗಿ ಸೆಣಸುತ್ತಿತ್ತು. ಸ್ವಾತಂತ್ರ್ಯಾನಂತರ ಸುಮಾರು ಐವತ್ತು ವರ್ಷಗಳ ಕಾಲ ಅನುಸರಿಸಿಕೊಂಡು ಬರುತ್ತಿದ್ದ ವಿದೇಶೀ ನೀತಿಗೆ ಪಕ್ಷಭೇದವಿಲ್ಲದೆ ಸಾರ್ವತ್ರಿಕ ಸಮ್ಮತಿಯಿತ್ತು, ಜನಬೆಂಬಲವಿತ್ತು. ಕೆಲವು ಪ್ರಶ್ನೆಗಳ ಬಗ್ಗೆ ಅಂದಿನ ಸರಕಾರ ಹೊಯ್ದಾಟದ, ಅಸ್ಪಷ್ಟ ಧೋರಣೆ ತಳೆದಿತ್ತಾದರೂ ಒಟ್ಟಾರೆಯಾಗಿ ಅದು ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿಹಿಡಿಯುವುದಾಗಿತ್ತು. ಆದರೆ ಅವೆಲ್ಲ ಇಂದು ಧೂಳೀಪಟವಾಗಿದೆ. ಅಧಿಕಾರಕ್ಕೆ ಬಂದಿರುವ ಭಾಜಪ ನೇತೃತ್ವದ ವಾಜಪೇಯಿ ಅಂಡ್ ಕಂಪೆನಿ ಸರಕಾರ ಎರಡೇ ವರ್ಷಗಳಲ್ಲಿ ವಿದೇಶೀ ನೀತಿಯನ್ನು ತಿರುಗುಮುರುಗು ಮಾಡಿದೆ. ಹಂತಹಂತವಾಗಿ ದೇಶದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಅಮೆರಿಕನ್ ಸಾಮ್ರಾಜ್ಯಶಾಹಿಯ ಅಡಿದಾವರೆಗೆ ಒಪ್ಪಿಸುತ್ತಿದೆ. ಅದ್ವಾನಿ-ಮುರಳಿ ಮನೋಹರ ಜೋಶಿ ಜೋಡಿ ದೇಶವನ್ನು ಕೇಸರೀಕರಣಗೊಳಿಸಲು ಹೊರಟಿದ್ದರೆ, ವಾಜಪೇಯಿ-ಜಸ್ವಂತ್ ಸಿಂಗ್ ಜೋಡಿ ದೇಶವನ್ನು ಅಮೆರಿಕದ ತೆಕ್ಕೆಗೆ ದೂಡುತ್ತಿದೆ. ಉದಾರೀಕರಣ, ಜಾಗತೀಕರಣ, ಖಾಸಗೀಕರಣಗಳ ಹೆಸರಿನಲ್ಲಿ ಯಶವಂತ ಸಿನ್ಹಾ ದೇಶದ ಆರ್ಥಿಕವನ್ನು ಅಮೆರಿಕದ ಬಹುರಾಷ್ಟ್ರೀಯ ಕಾರ್ಪೊರೇಷನ್ನುಗಳಿಗೆ ಹರಾಜು ಹಾಕುತ್ತಿದ್ದಾರೆ. ಒಟ್ಟಿನಲ್ಲಿ ಭಾಜಪ ನೇತೃತ್ವದ ಸರಕಾರ ಭಾರತವನ್ನು ಅಧೀನಕ್ಕೊಳಪಡಿಸುತ್ತಿದೆ, ತನ್ಮೂಲಕ ಅಮೆರಿಕದೊಂದಿಗೆ 'ಮೈತ್ರಿ' ವರ್ಧಿಸಿ ತನ್ನ ಬಹುದಿನಗಳ ಅಪೇಕ್ಷೆಯನ್ನು ಈಡೇರಿಸಿಕೊಳ್ಳುತ್ತಿದೆ.

ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಮಹದಾಕಾಂಕ್ಷೆಯಿಂದ ತನ್ನ ಸ್ವಪ್ರತಿಷ್ಠೆಗಾಗಿ ಭಾಜಪ ಸರಕಾರ ಪರಮಾಣು ಅಸ್ತ್ರಪ್ರಯೋಗ ನಡೆಸಿ ಭಾರತದ ಅಣ್ವಸ್ತ್ರ ವಿರೋಧಿ ನೀತಿಗೆ ತಿಲಾಂಜಲಿ ಇತ್ತಿತ್ತು. ಆ ನಂತರದ ದಿನಗಳಲ್ಲಿ ಅಮೆರಿಕಾದ ಮನವೊಲಿಸಿಕೊಳ್ಳಲು ವಿದೇಶೀ ನೀತಿಯ ಎಲ್ಲ ತತ್ವಗಳನ್ನೂ ಒಂದೊಂದಾಗಿ ಕೈಬಿಡಲಾಯಿತು. ವಿದೇಶಾಂಗ ಸಚಿವ ಸ್ಥಾನ ವಹಿಸಿಕೊಂಡಿರುವ ಪ್ರಧಾನಿ ವಾಜಪೇಯಿ ಬಲಗೈ ಭಂಟ ಜಸ್ವಂತ ಸಿಂಗ್ ವಾಷಿಂಗ್‌ಟನ್ನಿಗೆ ಹೆಚ್ಚು ಅತಿ ಬಾರಿ ಭೇಟಿ ನೀಡಿದ ದಾಖಲೆ ಸ್ಥಾಪಿಸಿದ್ದಾರೆ. ಬಹುಶಃ ಬೇರಾವ ಭಾರತದ ವಿದೇಶಾಂಗ ಸಚಿವರೂ ಅವರಷ್ಟು ದಿನಗಳನ್ನು ವಾಷಿಂಗ್ಟನ್‌ನಲ್ಲಿ ಕಳೆದಿಲ್ಲ. ಹಾಗಾಗಿ ಅವರು ಭಾರತದ ವಿದೇಶೀ ನೀತಿಯನ್ನು ನಿರ್ದೇಶಿಸುತ್ತಿರುವುದು ವಾಷಿಂಗ್‌ಟನ್‌ನಿಂದಲೋ ನವದೆಹಲಿಯಿಂದಲೋ ಎನ್ನುವ ಗುಮಾನಿ ಇದ್ದೇ ಇದೆ. ಅಮೆರಿಕದ ಮನವೊಲಿಸಿಕೊಂಡು ಅವರು ಹೇಳಿದಂತೆ ಕುಣಿಯುವ ಏಕೈಕ ಗುರಿ ಜಸ್ವಂತ್ ಸಿಂಗ್ ಅವರದು. ಅದಕ್ಕೆ ಕಲಶವಿಟ್ಟಂತೆ ಸ್ವಲ್ಪವೂ ನಾಚಿಕೆಯಿಲ್ಲದೆ, ಹಿಂಜರಿಕೆಯಿಲ್ಲದೆ ಅವರು ಈಗ ಅಮೆರಿಕದ ತಾರಾಸಮರ ಸಿದ್ಧತೆ ಎಂದೇ ಹೆಸರಾಗಿರುವ ರಾಷ್ಟ್ರೀಯ ಕ್ಷಿಪಣಿ ರಕ್ಷಣಾ ಯೋಜನೆಗೆ ಬೆಂಬಲ ನೀಡಿದ್ದಾರೆ. ಕಳೆದ ವರ್ಷ ಜೂನ್ ತಿಂಗಳಲ್ಲಿ ಇದೇ ಜಸ್ವಂತ್ ಸಿಂಗ್ ಈ ಯೋಜನೆಯನ್ನು ವಿರೋಧಿಸಿ, ಅದು ಅಪಾಯಕಾರಿ ಎಂದು ಕರೆದಿದ್ದರು. ಈಗ ಅದಕ್ಕೆ ವಿರುದ್ಧವಾದ ನಿಲುವನ್ನು ತಳೆದಿದ್ದಾರೆ. ಇಡೀ ಜಗತ್ತಿನಲ್ಲಿ ಅಮೆರಿಕದ ಹೊಸ ಯೋಜನೆ ಭಯ ಆತಂಕಗಳನ್ನು ಹುಟ್ಟಿಸಿರುವಾಗ ಭಾರತ ಮಾತ್ರ ಅದನ್ನು ಬೆಂಬಲಿಸಿರುವುದು ನಾಚಿಕೆಗೇಡು.

ಅಮೆರಿಕದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಪ್ರಾರಂಭದಲ್ಲೇ ಜಾರ್ಜ್ ಬುಷ್ ಕ್ಷಿಪಣಿ ರಕ್ಷಣಾ ಯೋಜನೆ ಕಾರ್ಯಗತ ಮಾಡುವುದಕ್ಕೆ ಆದ್ಯತೆ ನೀಡುವುದಾಗಿ ಘೋಷಿಸಿದರು. ಅದಕ್ಕೆ ತೀವ್ರವಾದ ವಿರೋಧ ಅಮೆರಿಕದಲ್ಲೂ, ಹೊರಗೂ ವ್ಯಕ್ತವಾಗಿತ್ತು. ಈಗ ಅವರು ಈ ಯೋಜನೆಯನ್ನು ಕೈಗೂಡಿಸಲು ಕ್ರಮ ಕೈಗೊಳ್ಳಲು ಹೊರಟಿದ್ದಾರೆ. ಅಮೆರಿಕದ ಈ ಕ್ಷಿಪಣಿ ರಕ್ಷಣಾ ಯೋಜನೆ ಇನ್ನೊಂದು ಶಸ್ತ್ರಾಸ್ತ್ರ ಪೈಪೋಟಿ ಪ್ರಾರಂಭಿಸುವುದರ ಜೊತೆಗೆ ಪ್ರಪಂಚದಲ್ಲಿ ಮತ್ತೆ ಶೀತಲಸಮರದ ವಾತಾವರಣ ಕಲ್ಪಿಸಲಿದೆ. ಈ ಯೋಜನೆ ಇದುವರೆಗೆ ಆಗಿರುವ ಎಲ್ಲ ಶಸ್ತ್ರಾಸ್ತ್ರ ಕಡಿತದ ಒಪ್ಪಂದಗಳನ್ನು ಮೂಲೆಗುಂಪಾಗಿಸುವುದು. ೧೯೭೨ರ ಎಬಿಎಂ ಕೌಲನ್ನು, ಸಾಲ್ಟ್ ೧ ಮತ್ತು ೨ ಕೌಲನ್ನು ಈ ಯೋಜನೆ ಮುರಿಯುತ್ತದೆ. ಈ ಅಪಾಯವನ್ನು ಅರಿತುಕೊಂಡೇ ಪ್ರಪಂಚದ ಎಲ್ಲ ರಾಷ್ಟ್ರಗಳೂ ಆತಂಕಗೊಂಡಿರುವುದು. ರಷ್ಯಾ, ಚೀಣಾಗಳಷ್ಟೇ ಅಲ್ಲದೆ ಯೂರೋಪಿನ ಎಲ್ಲ ರಾಷ್ಟ್ರಗಳೂ ಅಮೆರಿಕದ ಈ ಕ್ರಮವನ್ನು ಕುರಿತು ಕಳವಳಗೊಂಡಿವೆ. ಅಮೆರಿಕದ ನೆಚ್ಚಿನ ಭಂಟ ಎನಿಸಿಕೊಂಡಿರುವ ಬ್ರಿಟನ್ ಮತ್ತು ಕೆನಡಾಗಳು ಕೂಡಾ ಬುಷ್ ನೀತಿಗೆ ಬೆಂಬಲ ನೀಡಲು ಹಿಂದುಮುಂದು ನೋಡುತ್ತಿವೆ. ಹಾಗಿರುವಾಗ ವಾಜಪೇಯಿ ಸರಕಾರ ಅಮೆರಿಕವನ್ನು ತೃಪ್ತಿಗೊಳಿಸುವುದಕ್ಕಾಗಿ ಆತುರಾತುರವಾಗಿ ಬೆಂಬಲ ನೀಡಿರುವುದು ನಿಜಕ್ಕೂ ಖಂಡನೀಯ, ನಾಚಿಕೆಗೇಡಿನ ಕ್ರಮ. ಪ್ರತಿಯೊಬ್ಬ ಭಾರತೀಯನೂ ವಾಜಪೇಯಿ-ಜಸ್ವಂತ್ ಸಿಂಗ್‌ರ ಅಮೆರಿಕಾಗೆ ಶರಣಾಗುವ ನೀತಿಯಿಂದ ತಲೆತಗ್ಗಿಸುವಂತಾಗಿದೆ. ಮೊದಲಿನಿಂದಲೂ ಔಪಚಾರಿಕವಾಗಿ ದೇಶದ ಅಲಿಪ್ತ ನೀತಿಗೆ ಬೆಂಬಲ ಕೊಡುತ್ತಿದ್ದರೂ ಭಾಜಪ ಅಮೆರಿಕಾದ ಮೈತ್ರಿಗಾಗಿ ಹಾತೊರೆಯುತ್ತಿತ್ತು. ಈಗ ಅಧಿಕಾರಕ್ಕೆ ಬಂದಮೇಲೆ ಅಮೆರಿಕಾದ ಪಾದಪೂಜೆಗೆ ಹೊರಟಿದೆ. ವಿದೇಶಾಂಗ ನೀತಿಯ ಕ್ಷೇತ್ರದಲ್ಲಿ ವಾಜಪೇಯಿ ಸರಕಾರದ ಏಕೈಕ ಸಾಧನೆ ಅಮೆರಿಕದ ಅಪೇಕ್ಷೆಗನುಸಾರವಾಗಿ ತಾಳ ಹಾಕುವುದಾಗಿದೆ. ಪರಮಾಣು ಅಸ್ತ್ರಪ್ರಯೋಗ ನಡೆಸಿ ಮಹತ್ಸಾಧನೆ ಮಾಡಿದೆವೆಂದು ಹೇಳಿಕೊಂಡ ಭಾಜಪ ಸರಕಾರ ಅಣ್ವಸ್ತ್ರಗಳ ನಿರ್ಮೂಲನ ಪ್ರತಿಪಾದಿಸುವುದಕ್ಕೆ ನೈತಿಕ ಹಕ್ಕನ್ನು ಕಳೆದುಕೊಂಡಿತು. ಈಗ ಅಧ್ಯಕ್ಷ ಬುಷ್ ತಾರಾಸಮರನೀತಿಗೆ ಬೆಂಬಲ ನೀಡಿ ಅದು ತಾನು ಅಮೆರಿಕದ ನಿಷ್ಠಾವಂತ ಭಂಟ ಎಂದು ಸಾರಿಕೊಂಡಿದೆ. ಸ್ವಲ್ಪವೂ ನಾಚಿಕೆಯಿಲ್ಲದೆ ದೇಶದ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಮಾರಿಕೊಳ್ಳುತ್ತಿರುವ ಈ ಸರಕಾರ ಮುಂದುವರಿಯಬೇಕೇ ಎಂಬುದೀಗ ನಮ್ಮ ಮುಂದಿರುವ ಪ್ರಶ್ನೆ. ಅದು ಮುಂದುವರಿಯುವುದರಿಂದ ಅಪಾಯವೇ ಹೆಚ್ಚು.

**ಮತ್ತೆ ಜಗತ್ತನ್ನು ಅಪಾಯಕ್ಕೊಡ್ಡುತ್ತಿರುವ ಜಾರ್ಜ್ ಬುಷ್**

ಅಮೆರಿಕಾದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿರುವ ಜಾರ್ಜ್ ಬುಷ್ ಮತ್ತೊಮ್ಮೆ ಪ್ರಪಂಚವನ್ನು ಅಪಾಯಕ್ಕೊಡ್ಡುವ, ಶೀತಯುದ್ಧದ ಸ್ಥಿತಿಗೆ, ಶಸ್ತ್ರಾಸ್ತ್ರ ಪೈಪೋಟಿಗೆ ಎಡೆಕೊಡುವ ನೀತಿಯನ್ನನುಸರಿಸುತ್ತಿದ್ದಾರೆ. ಚೀಣಾದೊಂದಿಗೆ ಬೇಕೆಂತಲೇ ಸಂಬಂಧಗಳು ಬಿಗಡಾಯಿಸುವಂಥ ಕ್ರಮಗಳನ್ನು ತೆಗೆದುಕೊಳ್ಳುತ್ತಿದ್ದಾರೆ. ಇತ್ತೀಚೆಗಷ್ಟೆ ನಡೆದ ಅಮೆರಿಕದ ಗೂಢಚರ್ಯೆ ವಿಮಾನ ಪ್ರಕರಣ ಇನ್ನೂ ಪೂರ್ಣವಾಗಿ ಮುಗಿದಿಲ್ಲ. ಚೀಣಾದವರು ವಶಪಡಿಸಿಕೊಂಡಿರುವ ಗೂಢಚರ್ಯೆ ವಿಮಾನವನ್ನು ಹಿಂದಿರುಗಿಸುವ ಪ್ರಶ್ನೆ ಇನ್ನೂ ಇತ್ಯರ್ಥವಾಗಿಲ್ಲ. ಅಷ್ಟರಲ್ಲೇ ಅಮೆರಿಕ ನ್ಯಾಯವಾಗಿ ಚೀಣಾದ ಭಾಗವಾಗಿದ್ದು ಅದಕ್ಕೇ ಸೇರಬೇಕಾಗಿರುವ ಟೈವಾನ್‌ಅನ್ನು ಎತ್ತಿಕಟ್ಟತೊಡಗಿದೆ. ಟೈವಾನ್ ದ್ವೀಪದ (ಹಿಂದಿನ ಫಾರ್ಮೋಸಾ ದ್ವೀಪ) ರಕ್ಷಣೆಗೆ ಅಮೆರಿಕದ ಸೇನೆಯನ್ನು ಬಳಸುವುದೂ ಸಾಧ್ಯ ಎಂದು ಅಧ್ಯಕ್ಷ ಬುಷ್ ಇತ್ತೀಚೆಗೆ ಘೋಷಿಸಿದ್ದಾರೆ. ಚೀಣಾ ಏನಾದರೂ

ಸೀಯಾರ್ಕೆ

ಟೈವಾನ್‌ಅನ್ನು ವಶಪಡಿಸಿಕೊಳ್ಳಲು ಕ್ರಮ ಕೈಗೊಂಡಲ್ಲಿ ಅಮೆರಿಕ ಯುದ್ಧಕ್ಕೆ ಸಿದ್ಧ ಎಂಬುದೇ ಅದರ ಅರ್ಥ. ಅಮೆರಿಕ ಹಲವಾರು ವರ್ಷಗಳಿಂದಲೂ ಈ ಬೆದರಿಕೆಗಳನ್ನು ಹಾಕುತ್ತಿದ್ದರೂ, ಈಗ ಅದು ಬೇರೇ ಅರ್ಥವನ್ನು ಪಡೆದುಕೊಂಡಿದೆ. ಬುಷ್‌ರ ಈ ಹೇಳಿಕೆ ಅಮೆರಿಕದ ನಾಗರಿಕರನ್ನೂ ಒಳಗೊಂಡಂತೆ, ಜಗತ್ತಿನಾದ್ಯಂತ ಎಲ್ಲರನ್ನೂ ದಿಗ್ಭ್ರಮೆಗೊಳಿಸಿದೆ. ಚೀಣಾ ಬುಷ್‌ರ ಹೇಳಿಕೆಗೆ ಈಗಾಗಲೇ ತೀವ್ರವಾಗಿ ಪ್ರತಿಕ್ರಿಯಿಸಿದೆ, ಪ್ರತಿಭಟಿಸಿದೆ. ಇಪ್ಪತ್ತು ವರ್ಷಗಳ ಕಾಲ ಟೈವಾನ್‌ಅನ್ನೇ ನಿಜವಾದ ಚೀನಾ ಎಂದು ಹೇಳಿಕೊಂಡು ವಿಶ್ವಸಂಸ್ಥೆಯಲ್ಲಿ ಚೀಣೀ ಜನತಾ ಗಣರಾಜ್ಯಕ್ಕೆ ಪ್ರಾತಿನಿಧ್ಯ ದೊರಕದಂತೆ ತಡೆದಿದ್ದುದನ್ನು ಯಾರೂ ಮರೆತಿಲ್ಲ. ಅವಕಾಶವಾದಿತನದ ಧೋರಣೆಯಿಂದ ಚೀನಾದೊಂದಿಗೆ ಸಂಬಂಧಗಳನ್ನು ಬೆಳೆಸಿಕೊಂಡು ಅಮೆರಿಕ ಟೈವಾನ್‌ಅನ್ನು ತನ್ನ ರಕ್ಷಣೆಯಲ್ಲೇ ಕಾಪಾಡಿಕೊಂಡು ಬಂದಿದೆ. ಅಮೆರಿಕ ಒಂದೇ ಚೀಣಾವನ್ನು ಮಾನ್ಯ ಮಾಡಿದ್ದರೂ, ಟೈವಾನ್‌ಅನ್ನು ಚೀನಾಗೆ ಬ್ಲಾಕ್‌ಮೇಲ್ ಮಾಡಲು ಬಳಸಿಕೊಳ್ಳುತ್ತಿದೆ. ಅಮೆರಿಕದ ಬೆಂಬಲ ವಿಲ್ಲದೇ ಹೋದರೆ ಟೈವಾನ್ ಒಂದೇ ದಿನದಲ್ಲಿ ಚೀಣಾದ ಭಾಗವಾಗುತ್ತದೆ. ಮತ್ತೊಂದು ಯುದ್ಧದ ಅಪಾಯವನ್ನು ತಡೆಯುವ ಕಾತುರದಿಂದಾಗಿಯೇ ಟೈವಾನ್ ಪ್ರಶ್ನೆ ಇನ್ನೂ ಜೀವಂತವಾಗಿದೆ. ಇಲ್ಲಿ ಉಸಿರು ಕಟ್ಟಿಕೊಂಡು ಚೀಣಾವನ್ನು ಬೆದರಿಸಲು ಅಮೆರಿಕ ಟೈವಾನ್‌ಅನ್ನು ಕಾಪಾಡಿಕೊಂಡು ಬಂದಿದೆ. ಚೀಣಾದ ತಾಳ್ಮೆಗೂ ಒಂದು ಮಿತಿಯಿದೆ.

ಟೈವಾನ್ ಸಮಸ್ಯೆ ಉದ್ಭವಿಸಿದ್ದೇ ಚೀಣೀ ಜನತಾ ಗಣರಾಜ್ಯದ ಉದಯದೊಂದಿಗೆ. ಎರಡನೇ ಮಹಾ ಯುದ್ಧದ ಕಾಲದಲ್ಲಿ ರಾಷ್ಟ್ರೀಯವಾದಿ ಎನಿಸಿಕೊಂಡಿದ್ದ ಚಿಯಾಂಗ್ ಕೈ ಶೇಕ್‌ನ ಕೂಮಿಂಗ್‌ಟಾಂಗ್ ಪಕ್ಷದೊಂದಿಗೆ ಚೀಣಾ ಕಮ್ಯುನಿಸ್ಟ್ ಪಾರ್ಟಿ ಜಪಾನೀ ಫ್ಯಾಸಿಸ್ಟರ ವಿರುದ್ಧ ಹೋರಾಡುವುದಕ್ಕೆ ಸಹಕರಿಸಿದ್ದಿತು. ಅಮೆರಿಕದ ಬೆಂಬಲದಲ್ಲೇ ಮುಂದೆ ಬಂದಿದ್ದ ಕೂಮಿಂಗ್‌ಟಾಂಗ್ ನಾಯಕ ಚಿಯಾಂಗ್ ಕೈ ಶೇಕ್ ಯುದ್ಧಾನಂತರ ಅಧಿಕಾರ ವಹಿಸಿಕೊಂಡು ಕಮ್ಯುನಿಸ್ಟ್ ಪಕ್ಷದ ಮೇಲೆ ತಿರುಗಿಬಿದ್ದ. ಅಮೆರಿಕದ ಶಸ್ತ್ರಾಸ್ತ್ರ ಸರಬರಾಜು, ಡಾಲರುಗಳ ಪೋಷಣೆ ಏನೇ ಇದ್ದರೂ ಚಿಯಾಂಗ್‌ನ ಕೂಮಿಂಗ್‌ಟಾಂಗ್ ಪಡೆಗಳಿಗೆ ಕಮ್ಯುನಿಸ್ಟ್ ಪಾರ್ಟಿಯ ಜನತಾ ವಿಮೋಚನಾ ಸೇವೆಯನ್ನು ಎದುರಿಸಲಾಗಲಿಲ್ಲ. ಪರಾಜಯಗೊಂಡ ಈ ಅಮೆರಿಕದ ಭಂಟ ಚಿಯಾಂಗ್ ಅಳಿದುಳಿದ ಪರಿವಾರದೊಂದಿಗೆ ಸಂಪತ್ತಿನೊಂದಿಗೆ ಫಾರ್ಮೋಸಾ ದ್ವೀಪಕ್ಕೆ, ಇಂದಿನ ಟೈವಾನ್‌ಗೆ, ಪರಾರಿಯಾದ. ತಾನಿರುವ ಟೈವಾನ್ ದ್ವೀಪವೇ ಚೀಣಾ ಎಂದು ಘೋಷಿಸಿಕೊಂಡ. ಅವನಿಗೆ ಬೆಂಬಲವಾಗಿ ಅಮೆರಿಕ ಸಿದ್ಧವಾಗಿ ನಿಂತಿತು. ಟೈವಾನ್‌ಅನ್ನು ಅಮೆರಿಕ ಕಮ್ಯುನಿಸಮ್‌ನ್ನು ತಡೆಹಿಡಿಯುವ ಸಾಧನವಾಗಿ ಉಪಯೋಗಿಸಿಕೊಳ್ಳುವುದು ಬೇಕಿತ್ತು. ಶೀತಯುದ್ಧದ ಕಾಲದಲ್ಲಿ ಈ ದ್ವೀಪ ಯುದ್ಧದ ಪ್ರಮುಖ ಕಾವು ನೆಲೆಗಳಲ್ಲೊಂದಾಗಿತ್ತು. ಈಗಲೂ ಹಾಗೆಯೇ ಉಳಿದಿದೆ.

ಇಷ್ಟು ದಿನ ಕಾದಿದ್ದ ಚೀಣಾ ನ್ಯಾಯವಾಗಿ ತನಗೆ ಸೇರಬೇಕಿರುವ ಈ ಟೈವಾಅನ್‌ನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರೆ ತಪ್ಪೇನಿಲ್ಲ. ಆದರೆ ಅಮೆರಿಕ ಅದಕ್ಕೆ ಅಡ್ಡಗಾಲು ಹಾಕಿದೆ. ಟೈವಾನಿನಲ್ಲಿ ಅಧಿಕಾರ ದಲ್ಲಿರುವವರು ತಾವು ಒಂದು ಸ್ವತಂತ್ರ ರಾಷ್ಟ್ರವೆಂದು ಘೋಷಿಸಿಕೊಳ್ಳುವ ಸನ್ನಾಹ ನಡೆಸಿದ್ದಾರೆ. ಹಾಗೆ ಘೋಷಿಸಿಕೊಂಡರೆ ಅಮೆರಿಕದಿಂದ ಮಾನ್ಯತೆ ಖಚಿತ. ಹೀಗೆ ಸಮಸ್ಯೆ ಮತ್ತಷ್ಟು ಬಿಗಡಾಯಿಸುವಂತೆ ಮಾಡುವುದು ತಂತ್ರ. ಅಮೆರಿಕದ ಈ ಬಗೆಯ ಇಬ್ಬಗೆ ಧೋರಣೆ ಖಂಡನೀಯ. ಟಿಬೆಟ್, ಹಾಂಕಾಂಗ್‌ಗಳಂತೆಯೇ ಟೈವಾನ್ ಕೂಡಾ ಚೀಣಾದ ಭೂಭಾಗ. ಅಧ್ಯಕ್ಷ ಬುಷ್ ಇದನ್ನರಿತುಕೊಂಡು ಕಿತಾಪತಿ ಮಾಡುವುದನ್ನು ನಿಲ್ಲಿಸಲಿ. ಚೀಣಾಗೆ ನ್ಯಾಯವಾಗಿ ಸೇರಬೇಕಿರುವ ಟೈವಾನ್‌ಗೆ ಅಮೆರಿಕ ಅಡ್ಡಗಾಲು ಹಾಕುತ್ತಿರುವುದು ಖಂಡನೀಯ. ಶಸ್ತ್ರಾಸ್ತ್ರ ಬಲದಿಂದ ಸಾಹಸಕ್ಕೇನಾದರೂ ಅಮೆರಿಕ ಇಳಿದರೆ ಅನಾಹುತ ಖಂಡಿತ. ❑❑❑


**VOHRA PUBLISHERS & DISTRIBUTORS**

36, M. G. Marg (Behind Raj Karan Palace), Civil Lines, ALLAHABAD-211001

Phone : 0532-607468 Fax : 0532-422173 Email : sumitvohra@usa.net

**OUR PUBLICATIONS**

LANGUAGE IMPROVEMENT
Words Often Confused (Use the Right Word) Rs. 75/-
Vohra's Book of Synonyms & Antonyms Rs. 60/-
Idioms & Phrases Rs. 75/-
The World of Proverbs Rs. 35/-
Quotations (World of Wisdom & Beauty) Rs. 95/-
Easy to Remember Quotations & Proverbs Rs. 50/-
ESSAYS & LETTERS
Vohra Primary Essays Rs. 25/-
New Pattern Essays Rs. 35/-
Modern Business Letters Rs. 50/-
C.B.S.E. Brilliant Essays and Letters Rs. 58/-
I.C.S.E. Brilliant Essays and Letters Rs. 58/-
Vohra Pocket Eng - Eng. Dictionary Rs. 20/-

Dictionary of Baby Names Rs. 45/-
CHILDREN'S BOOKS
Mahabharata Rs. 25/-
Ramayana Rs. 25/-
Selected Jataka Tales Rs. 25/-
Vikram Betal Rs. 25/-
Akbar Birbal Rs. 25/-
Sindbad Rs. 25/-
More Vikram Betal Rs. 25/-
Long Long Ago... Rs. 25/-
Tales from Dadi Maa Rs. 25/-
Krishna Leela Rs. 25/-
Inventions and Discoveries Rs. 20/-
Bano Carorepati (Quiz Book) Rs. 75/-

# ದ್ರಾವಿಡರು ತಮಿಳರು ಕನ್ನಡಿಗರಲ್ಲ

ಡಾ|| ರಾ. ಸತ್ಯನಾರಾಯಣ

ಮೊದಲಿಗೆ ಕೆಲವು ಪಂಪ ಪೂರ್ವಕಾಲೀನ ಆಕರಗಳನ್ನು ಗಮನಿಸೋಣ :

೧. ಮಹಾಭಾರತ (ಕ್ರಿ.ಪೂ. ೪ನೆಯ ಶತಮಾನ – ಕ್ರಿ.ಶ. ೪ನೆಯ ಶತಮಾನ, ನಿರ್ಣಯ ಸಾಗರ ಆವೃತ್ತಿ)

i. ಆಂಧ್ರಾಶ್ಚ ಬಹವೋ ರಾಜನ್ ಅಂತರ್ಗಿರ್ಯಾಸ್ತಥೈವ ಚ ॥ (ಭೀಷ್ಮ ಪರ್ವ, ೯.೪೯)

ii. ದ್ರವಿಡಾಃ ಕೇರಲಾಃ ಪ್ರಾಚ್ಯಾ ಭೂಷಿಕಾ ವನವಾಸಿಕಾಃ ॥ (ಅದೇ. ೯.೫೮)

iii. ಕರ್ಣಾಟಕಾ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ । (ಅದೇ. ೯.೫೯)

೨. ಭರತಮುನಿ, ನಾಟ್ಯಶಾಸ್ತ್ರಂ । (ಕ್ರಿ.ಪೂ. ೨ನೆಯ ಶತಮಾನ-ಕ್ರಿ.ಶ. ೨ನೆಯ ಶತಮಾನ)

ನ ಬರ್ಬರ ಕಿರಾತಾಂಧ್ರ ದ್ರಮಿಲಾದ್ಯಾಸು ಜಾತಿಷು ।
ನಾಟ್ಯಪ್ರಯೋಗೇ ಕರ್ತವ್ಯಂ ಪಾಠ್ಯಂ ಭಾಷಾಸಮಾಶ್ರಮಮ್ ॥ (೧೭.೪೬)
ಶಕಾರಾಭೀರಚಂಡಾಲ ಶಬರದ್ರಮಿಲಾಂಧ್ರಜಾಃ ।
ಹೀನಾ ವನೇಚರಣಾಂ ಚ ವಿಭಾಷಾ ನಾಟಕೇ ಸ್ಮೃತಾ ॥ (೧೭.೫೦)
(ವನೇಚರ = ವನವಾಸಿ = ಬನವಾಸಿ = ಕರ್ಣಾಟಕ; ದ್ರಮಿಲ ಶಬ್ದಕ್ಕೆ)

ದ್ರಮಿಡ, ದ್ರವಿಡ ಎಂಬ ಪಾಠಾಂತರಗಳಿವೆ. ಗ್ರಂಥ ಸಂದರ್ಭ: ದಶರೂಪಕಗಳಲ್ಲಿ ಬಳಸಬಹುದಾದ ಮತ್ತು ನಿಷಿದ್ಧವಾದ ವಿಭಾಷೆಗಳ ಉಲ್ಲೇಖ. ವಿಭಾಷೆಗಳು ಭಾಷೆಗಳಿಂದ ಹುಟ್ಟಿವೆ. ಭಾಷೆಗಳು, ದಾಕ್ಷಿಣಾತ್ಯವನ್ನೂ ಒಳಗೊಂಡಂತೆ, ಏಳಿವೆ.)

೩. ಮತಂಗ ಮುನಿ, ಬೃಹದ್ದೇಶೀ (ಕ್ರಿ.ಶ. ೬೫೦-೭೦೦

i. ದ್ರವಿಡ : ಚತುಃ ಸ್ವರಾತ್ ಪ್ರಭೃತಿ (ದೇಶೀ), ನ ಮಾರ್ಗಂ; ಶಬರ ಪುಲಿಂದ ಕಾಂಬೋಜ ಬಂಗಕಿರಾತ ಬಾಹ್ಲೀಕಾಂಧ್ರ ದ್ರಾವಿಡ ವನಾದಿಷು (ಸಾ) ಪ್ರಯುಜ್ಯತೇ ॥ (ಗ್ರಂಥಭಾಗ ೪೪೩)

ii. ಲಾಟ ಕರ್ಣಾಟಗೌಡಾಂಧ್ರ ದ್ರವಿಡಾನಾಂ ಸ್ವಭಾಷಯಾ ।
ಪೃಥಕ್ ಪೃಥಗ್ ಭವಂತ್ಯೇತಾಃ (?-ಲಾಃ) ಮಾರ್ಗಯುಕ್ತಾ ಮನೋಹರಾಃ ॥ (ಅದೇ, ಗ್ರಂಥಭಾಗ ೧೧೬೭)

iii. ಕರ್ಣಾಟೈಲಾ : ಪ್ರಾಸೈರ್ಮನೋಹರೈರ್ದಿವ್ಯೈರಾದಿ ಮಧ್ಯಾಂತ ಗೋಚರೈಃ ।
ಏಲಾ ಕರ್ಣಾಟಿಕಾ ಪ್ರೋಕ್ತಾ ಲಲಿತ ಧ್ವನಿ ಸಂಯುತಾ ॥ (ಅದೇ, ಗ್ರಂಥಭಾಗ ೧೧೬೯)

iv. ಆಂಧ್ರೈಲಾ : ಅನೇಕ ಗಮಕಾಕೀರ್ಣಾಮನೇಕ ಧ್ವನಿಮಿಶ್ರಿತಾಮ್ ।
ಅನೇಕ ರಾಗಸಂಕೀರ್ಣಾಂ ಏಲಾಂ ಆಂಧ್ರೀಂ ವಿದುರ್ಬುಧಾಃ ॥ (ಅದೇ, ಗ್ರಂಥಭಾಗ ೧೧೭೧)

v. ದ್ರಾವಿಡೈಲಾ : ಭಾವಾಭಿನಯತಾಲಾಢ್ಯಾ ವಿಚಿತ್ರಧ್ವನಿರಂಜಿತಾ ।
ಪ್ರಾಸಹೀನಾ ರಸಸ್ಥಾ ಚ ಏಲಾ ದ್ರಾವಿಡದೇಶಜಾ ॥ (ಅದೇ, ಗ್ರಂಥ ಭಾಗ ೧೧೭೨)

vi. ದ್ರಾವಿಡ ವಿಷಯ (ದ್ರಾವಿಡೀ ರಾಗ) : ಗಾಂಧಾರಾಂಶಾ ಧೈವತಾಂತಾ ದ್ರಾವಿಡೀ ಸಂಪ್ರಕೀರ್ತಿತಾ ।
ದ್ವಿ ಶ್ರುತೀನಾಂ ಚ ಗಮನಂ ಷಡ್ಜ ಧೈವತಯೋಸ್ತಥಾ ।
ದ್ರಾವಿಡವಿಷಯೇ ಹ್ಯೇಷಾ ದೇಶಾಖ್ಯಾ ಸುಮನೋಹರಾ ॥ (ಅದೇ, ಗ್ರಂಥಭಾಗ ೯೪೨)

vii. ದ್ರಾವಿಡೀ ರಾಗ (ಅದೇ, ಗ್ರಂಥಭಾಗಗಳು ೭೭೧, ೯೪೨, ೯೭೮) ; ಆಂಧ್ರ (೪೪೩, ೧೧೬೭) ಆಂಧ್ರದೇಶಜ (೧೦೦೦)

ಆಂಧ್ರೀ (೪೧೦, ೪೧೬, ೪೨೦, ೪೨೧, ೪೭೪, ೪೭೬, ೪೮೪, ೪೮೮, ೫೭೨, ೫೭೪, ೭೬೪, ೯೯೨, ೧೦೦೦), ಆಂಧ್ರೀ ಏಲಾ (೧೧೭೧) :

ಕರ್ಣಾಟ (೧೧೬೭), ಕರ್ಣಾಟ ಭಾಷಾ (೧೦೮೦, ೧೦೯೧), ಕರ್ಣಾಟ ಭಾಷಾ ಪದ (೧೦೭೫), ಕರ್ಣಾಟಕಾ ಏಲಾ (೧೧೬೯), ಕರ್ಣಾಟೀ ರಾಗ (೧೦೫೧)

೪. ಕರ್ಣಾಟೈಲಾ, ಆಂಧ್ರೈಲಾ, ದ್ರಾವಿಡೈಲಾ, ಲಾಟೈಲಾಗಳನ್ನೂ ಕರ್ಣಾಟೀ, ಆಂಧ್ರೀ, ದ್ರಾವಿಡೀ ರಾಗಗಳನ್ನೂ ಕೆಳಕಂಡ ಸಂಗೀತ ಶಾಸ್ತ್ರೀಯ ಆಕಾರಗಳೂ ವರ್ಣಿಸಿವೆ :

i. ನಾನ್ಯ ದೇವ, ಸರಸ್ವತೀ ಹೃದಯಾಲಂಕಾರ ಹಾರ (೧೧ನೆಯ ಶತಮಾನ)

ii. ಹರಿಪಾಲದೇವ, ಸಂಗೀತ ಸುಧಾಕರ (೧೧ನೆಯ ಶತಮಾನ)

iii. ಸರ್ವಜ್ಞ ಸೋಮೇಶ್ವರ, ಮಾನಸೋಲ್ಲಾಸ (೧೨ನೆಯ ಶತಮಾನ)

iv. ಜಗದೇಕಮಲ್ಲ, ಸಂಗೀತಚೂಡಾಮಣಿ (೧೨ನೆಯ ಶತಮಾನ)

v. ಶಾರ್ಙ್ಗದೇವ, ಸಂಗೀತರತ್ನಾಕರ (ಸು. ೧೨೫೦)

vi. ಶ್ರೀಕಂಠರಸಕೌಮುದೀ (ಕರ್ಣಾಟಾಂಧ್ರ ದ್ರಾವಿಡ ಸ್ತ್ರೀ ವರ್ಣನೆ) (೧೬ನೆಯ ಶತಮಾನ)

vii. ಗೋವಿಂದ ದೀಕ್ಷಿತ, ಸಂಗೀತಸುಧಾ (ದೇಶ್ಯೈಲಾ ವರ್ಣನೆಗಳು) (೧೭ನೆಯ ಶತಮಾನ)

viii. ವೆಂಕಟಮಖಿ, ಚತುರ್ದಂಡೀಪ್ರಕಾಶಿಕಾ (ದೇಶ್ಯೈಲಾ ವರ್ಣನೆಗಳು) (೧೭ನೆಯ ಶತಮಾನ)

**೫. ಇತರ ಸಂಕೀರ್ಣ ಮತ್ತು ಹೆಚ್ಚಿನ ಆಕರಗಳು** : (ಇವುಗಳನ್ನು ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿಯವರ "ನಮ್ಮ ಕರ್ಣಾಟಕ"ದಿಂದ ಸಂಗ್ರಹಿಸಲಾಗಿದೆ.)

i. ಸ್ಕಾಂದ ಪುರಾಣ (ಉದ್ಧೃತಿ : ಶಬ್ದ ಕಲ್ಪದ್ರುಮ, ೨ ಪು. ೭೬೦) (ಸು. ೭೦೦ - ೧೦೦೦)
ಕರ್ಣಾಟಾಶ್ಚೈವ ತೈಲಂಗಾ ಗೂರ್ಜರಾ ರಾಷ್ಟ್ರವಾಸಿನಃ ।
ಆಂಧ್ರಾಶ್ಚ ದ್ರಾವಿಡಾಃ ಪಂಚ ವಿಂಧ್ಯದಕ್ಷಿಣವಾಸಿನಃ ।

ii. ಪದ್ಮ ಪುರಾಣ (ಉತ್ತರ ಖಂಡ, ೧.೪೮) (ಸು. ೯ನೆಯ ಶತಮಾನಾನಂತರ)
ಉತ್ಪನ್ನ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ।
ಕ್ವಚಿತ್ ಕ್ವಚಿನ್ ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥

iii. ಶೂದ್ರಕ, ಮೃಚ್ಛಕಟಿಕಾ (ಸು. ೪೦೦) :

ಚಂದನಕಃ : ...... ವಯಂ ದಾಕ್ಷಿಣಾತ್ಯಾ ಅವ್ಯಕ್ತ ಭಾಷಿಣಃ । ಖಷ-ಬತ್ತಿ-ಕಡ-ಕಡಟ್ಠೋ ಬಿಲ ಕರ್ಣಾಟ-ಕರ್ಣ-ಪ್ರಾವರಣ-ದ್ರಾವಿಡ-ಚೋಲ-ಚೀನ-ಬರ್ಬರ-ಖೇರ-ಖಾನ-ಮುಖ-ಮಧುಘಾತ ಪ್ರಭೃತೀನಾಂ ಮ್ಲೇಚ್ಛ ಜಾತೀನಾಂ ಅನೇಕ ದೇಶ ಭಾಷಾಭಿಜ್ಞಾ ಯಥೇಷ್ಟಂ ಮಂತ್ರಯಾಮಃ ॥ (ದ್ರಾವಿಡ-ಚೋಲಗಳೆರಡನ್ನೂ ಪ್ರತ್ಯೇಕವಾಗಿ ಹೇಳಿರುವುದನ್ನು ಗಮನಿಸಬೇಕು.)

iv. ಸೋಮದೇವ ಸೂರಿ, ಯಶಸ್ತಿಲಕಚಂಪೂ (ಆಶ್ವಾಸ ೧, ಶ್ಲೋ. ೨೧೦, ೨೧೧) (೮೬೦)

ಕೇರಲ, ಚೋಲ, ಪಲ್ಲವ, ಕುಂತಲ, ಮಲಯ, ವನವಾಸಿ, ಕುರುಜಾಂಗಲ,

*ಏಪ್ರಿಲ್ ೨೦೦೧ರ 'ಹೊಸತು'ವಿನಲ್ಲಿ ಡಾ|| ಹಾ. ವೆಂ. ಶ್ರೀನಿವಾಸಮೂರ್ತಿಯವರ 'ಕನ್ನಡಿಗರು ದ್ರಾವಿಡರೆ !' ಎಂಬ ಸಂಶೋಧನ ಲೇಖನವು ಪ್ರಕಟವಾಗಿದೆ. ದ್ರಾವಿಡರು ತಮಿಳರು, ಕನ್ನಡಿಗರಲ್ಲ, ಏಕೆಂದರೆ ಕನ್ನಡ ಸಾಹಿತ್ಯದ ಹಲವು ಉಲ್ಲೇಖನಗಳಲ್ಲಿ ಕರ್ಣಾ(-ರ್ನಾ)ಟಕ, ಆಂಧ್ರ, ದ್ರ(ದ್ರಾ)ವಿಡ ಶಬ್ದಗಳನ್ನು ಪ್ರತ್ಯೇಕವಾಗಿಯೆ ಬಳಸಿದೆ. ಇನ್ನು ಕೆಲವೆಡೆಗಳಲ್ಲಿ ದ್ರಾವಿಡದ ಬದಲು (ಅದಕ್ಕೆ ಪರ್ಯಾಯವಾಗಿ) ಚೋಳ ಎಂಬ ಮಾತನ್ನು ಬಳಸಿದೆ. ಆದುದರಿಂದ ದ್ರಾವಿಡ, ದ್ರವಿಡ, ದ್ರಮಿಡ, ದ್ರಮಿಳ ಎಂಬ ಶಬ್ದಗಳಿಗೆ ತಮಿಳು ದೇಶ, ತಮಿಳು ಭಾಷೆ ಎಂದು ಅರ್ಥವಾಗುತ್ತದೆ, ಎಂದು ಡಾ|| ಶ್ರೀನಿವಾಸಮೂರ್ತಿಯವರು ನಿರ್ಣಯಿಸಿದ್ದಾರೆ. ಇದರ ಸಮರ್ಥನೆಯಲ್ಲಿ ಅವರು ಬಳಸಿರುವ ಪ್ರಾಚೀನತಮ ಆಕರವು ಕ್ರಿ.ಶ. ಹತ್ತನೆಯ ಶತಮಾನದ ಪಂಪಕವಿಯ ಆದಿಪುರಾಣಂ ಮತ್ತು ವಿಕ್ರಮಾರ್ಜುನ ವಿಜಯಂ.*

*ಈ ನಿರ್ಣಯವನ್ನು ಸಂಸ್ಕೃತ ಸಾಹಿತ್ಯದ ಆಕರಗಳಿಂದಲೂ ಸಂಗೀತ ಶಾಸ್ತ್ರೀಯ ಆಕರಗಳಿಂದಲೂ ಪಡೆಯಬಹುದು ಎಂಬುದನ್ನು ತೋರಿಸುವುದು ಈ ಲೇಖನದ ಉದ್ದೇಶ. ಇದಕ್ಕಾಗಿ ಕರ್ಣಾಟ, ಆಂಧ್ರ, ಲಾಟ, ದ್ರವಿಡ, (ದ್ರಮಿಡ, ದ್ರಮಿಳ, ದ್ರಾವಿಡ) ಎಂಬ ಮಾತುಗಳು ಒಟ್ಟಿಗಿರುವ ಉಲ್ಲೇಖಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ.*

ಕಂಬೋಜ, ವಂಗ ದೇಶಗಳ ಸ್ತ್ರೀಯರನ್ನು ಉಲ್ಲೇಖಿಸಿದೆ.

v. ಅಜ್ಞಾತ ಕರ್ತೃ, ವಿಶಿಷ್ಟರಾಜಪ್ರಶಂಸಾ, ಸುಭಾಷಿತರತ್ನಭಾಂಡಾಗಾರಂ, ಪು. ೧೧೩, ಪದ್ಯ ೩): (?)

ಕರ್ಣಾಟಂ ದೇಹಿ ಕರ್ಣಾಧಿಕ ವಿಧಿ ನಿಹಿತ ತ್ಯಾಗ ಲಾಟಂ ಲಲಾಟಂ ಪ್ರೋತ್ತುಂಗ ದ್ರಾವಿಡಂ ನಾ ಪ್ರಚಲ ಭುಜಬಲ ಪ್ರೌಢಿಮಾಗಾಢರಾಢಮ್ ।

vi. ವರಾಹಮಿಹಿರ, ಬೃಹತ್ ಸಂಹಿತಾ (೧೪.೧೩) (೫೦೫-೫೮೭)
ಕರ್ಣಾಟ ಮಹಾಟವಿ
ಚಿತ್ರಕೂಟ ನಾಸಿಕ್ಯ ಕೊಲ್ಲಗಿರಿ ಚೋಲಾಃ ।

vii. ಭೋಜದೇವ, ಸರಸ್ವತೀಕಂಠಾಭರಣ (೨.೭೯) (೧೦೦೫-೫೪).
ಕಾರ್ಣಾಟೀ ಕೌಂತಲೀ ಕೌಂಕೀ ಕೌಂಕಣೀ ಬಾಣವಾಸಿಕಾ
ದ್ರಾವಿಡೀ ಮಾಥುರೀ ಮಾತ್ಸೀ ಮಾಗಧೀ ತಾಮ್ರಲಿಪ್ತಿಕಾ ।

viii. ವಾತ್ಸ್ಯಾಯನ, ಕಾಮಸೂತ್ರ: ಯಶೋಧರನ ಜಯಮಂಗಲಾ ವ್ಯಾಖ್ಯಾ: (ಸು. ೧೨೫೦)
ನರ್ಮದಾಯಾ ದಕ್ಷಿಣೇನ ದೇಶೋ ದಕ್ಷಿಣಾಪಥಃ । ತತ್ರ ಕರ್ಣಾಟ
ವಿಷಯಾತ್ ಪೂರ್ವೇಣಾಂಧ್ರ ವಿಷಯಃ । (೨.೫. ೨೮ರ ವ್ಯಾಖ್ಯೆ).
ಕರ್ಣಾಟ ವಿಷಯಾದ್ದಕ್ಷಿಣೇನ ದ್ರವಿಡವಿಷಯಃ । (೨.೫.೩೧ರ ವ್ಯಾಖ್ಯೆ)

ix. ಸಮ್ಮೋಹ (ಸು. ೧೪೫೦ಕ್ಕಿಂತ ಹಿಂದೆ) ಸೌರಾಷ್ಟ್ರೋ ದ್ರವಿಡಶ್ಚೈವಂ (ವ) ತ್ರೈಲಿಂಗ ಮಲಯಾದ್ರ(ದ್ರಿ)ಕೌ ।
ಕರ್ಣಾಟಾವಂತ್ಯವೈದರ್ಭಸಪ್ತಾಭೀರ (ರಾಃ) ಸಮಾಲವಾ(ಃ) ।
ಚೋಲಯಾಂ (ಪಾಂ) ಚಾಲಗೌಡಾಶ್ಚ ಮಲಯಾಂಧ (ಧ್ರ)ಶ್ಚ ಸಿಂಹಲಃ ।
ವ್ಯೋಕವಿಡೋ ವ್ಯೋಂತಶ್ಚೈವ (?) ಕಾರ್ಣಾಟೋ ಲಾಟ ಏವ ಚ ॥

x. ಮಾರ್ಕಂಡೇಯ, ಪ್ರಾಕೃತ ಸರ್ವಸ್ವ (ಸು. ೧೪೯೦-೧೫೬೫)
ಕಾಲಿಂಗ್ಯ ಪ್ರಾಚ್ಯ ಕಾರ್ಣಾಟಕಾಂಚ್ಯ(ಂಧ್ರ) ದ್ರಾವಿಡ ಗೌರ್ಜರಾಃ । (ಪಾದ ೧, ಸೂತ್ರ ೨ರ ವೃತ್ತಿ)

xi. ಶಂಭುರಹಸ್ಯ (ಆರ್. ನರಸಿಂಹಾಚಾರ್ಯ, ಹಿಸ್ಟರಿ ಆಫ್ ಕನ್ನಡ ಲಾಂಗ್ವೇಜ್‌ನಲ್ಲಿ ಉದ್ಧೃತಿ)
ನಾಪಭ್ರಂಶದೋಷೋಽಸ್ತಿ ದ್ರಾಮಿಡೀನಾಂ ಗಿರಾಂ ತತಃ ।
ಅನಾರ್ಷಮಾಂಧ್ರ ಕಾರ್ಣಾಟ ಘೌರ್ಜರಾದ್ಯಂ ಹಿ ಭಾಷಿತಮ್ !

**ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗಳು**

xii. ಪಂಪ, ವಿಕ್ರಮಾರ್ಜುನ ವಿಜಯಂ (೯.೯೫ವ) (೯೪೧):
ಮತ್ತಂ ಪ್ರಭದ್ರೈಕ ಬಲಮುಮಂಗ ವಂಗ ಕಳಿಂಗ ಕೊಂಗ ಕೊಂಕಟ ಗೊಲ್ಲ ಕಾಂಭೋಜ ಮಗಧ ಸೌರಾಷ್ಟ್ರ ವರಾಟ ಲಾಟ ಕರ್ಣಾಟಕ ರಹಾಟ ಮಳಯ ಮಾಳವ ನೇಪಾಳ ಪಾರವ ಪಾರಿಯಾತ್ರ ಬರ್ಬರ ಕೋಸಳ ಕಾಶಿ ಕಾಶ್ಮೀರ ಕೌಶಿಕಾಂಧ್ರ, ದ್ರವಿಳ..... ನಾನಾ ದ್ವೀಪ ದೇಶಾಧಿಶ್ವರರುಂ

xiii. ಭೀಮಕವಿ, ಬಸವ ಪುರಾಣಂ (೨.೬.೧೪) (೧೩೬೯)
ಲಾಳ ಮಾಳವ ಸಿಂಧು ಸಿಂಹಳ..... ಕಾಲವಾಂಧ್ರ, ತುರುಷ್ಕ.... ಕುಂತಳ ಕುಕುರಬರ್ಬರ.... ಚೋಳ ಪಾಂಡ್ಯ ತುಳುವ ಮಲಯ ಮಲೆಯಾಳ ಕರ್ಣಾಟ

xiv. ಪೆಮ್ಮಿಸೆಟ್ಟಿ, ಗುರುಭಕ್ತಾಂಡಾರಿ ಚರಿತ್ರೆ, (೧.೩೫) (ಸು. ೧೬೫೦) ಅಂಗ ವಂಗ ಕಳಿಂಗ... ತ್ರಿಲಿಂಗ... ಮಲೆಯಾಳ... ಚೋಳ ಕೊಂಕಣ... ಕೊಂಗು... ಕರ್ಣಾಟಕ...

xv. ಪಾಯಣವರ್ಣಿ, ಜ್ಞಾನಚಂದ್ರ ಚರಿತೆ (೨೧. ೨೧) (ಸು.೧೬೫೯)
ಅಂಗ ಸುವಂಗ.... ನೇಪಾಳ ತೆಲುಗ ತಿಗುಳ ಲಾಟ ಕೊಂಗ ಕುಡಂಗ ಕರ್ನಾಟ (ತಿಗುಳ = ತಮಿಳು; ಕುಡಂಗ = ಕೊಡಗು)

xvi. ತಿರುಮಲಾರ್ಯ, ಚಿಕದೇವರಾಯ ವಂಶಾವಳಿ, ರಾಜನೃಪಚರಿತ, (ಪು. ೧) (೧೭ನೆಯ ಶತಮಾನ).
ಊಸದಾಶಿವರಾಯಂಗೆ ಸೇನಾನಿಯೆನಿಸಿದ ಆಂಧ್ರಕುಲದ ರಾಮರಾಜಂ ನಿಜರಾಜಂಗೆ ದ್ರವಿಡಾಂಧ್ರ ಕರ್ಣಾಟ ರಾಜ್ಯಮಂ ಸಾರ್ಚಿ

xvii. ನಾಗವರ್ಮ, ಛಂದೋಂಬುಧಿ (೧.೫೫ವ) (ಸು. ೯೯೦)
ಮತ್ತಂ ಕರ್ಣಾಟಾಂಧ್ರ, ದ್ರವಿಡ ವರಾಟ ಲಾಟ ಮಾಳವ ಗೌಳ.... ದೇಶಭಾಷೆಗಳೊಳ್ ಪುಟ್ಟುವುವೆಲ್ಲಂ ಸರ್ವವಿಷಯ ಭಾಷಾ ಜಾತಿಗಳಕ್ಕುಂ (ವಿಷಯ = ದೇಶ)

xviii. ನಿಜಗುಣಶಿವಯೋಗಿ, ವಿವೇಕಚಿಂತಾಮಣಿ (೪.೪೦೪) (ಸು. ೧೫೫೦)
ಮತ್ತಮಾ ಭರತ ವರುಷದಲ್ಲಿಯೇ ಅಂಗವಂಗ ಕಳಿಂಗ ತೆಲುಂಗ..... ಚೋಳ ಕೇರಳ ಗೌಳ.... ಮಳಯಾಳ ತುಳುವ ಸೈಂಧವ ಕೊಂಕಣ... ಮಹಾರಾಷ್ಟ್ರ

---

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿಯವರು ತಮ್ಮ **ಕನ್ನಡಿಗರು ದ್ರಾವಿಡರೆ ?** ಎಂಬ ವಿದ್ವತ್ಪೂರ್ಣ ಲೇಖನದಲ್ಲಿ ಸಂಶೋಧನೆಯ ಹೊಸ ಆಯಾಮವೊಂದಕ್ಕೆ ಮಾರ್ಗ ಕೊರೆದಿದ್ದಾರೆ. ಲೇಖಕರು ಕನ್ನಡ ಮತ್ತು ಇತರ ಭಾಷಾ ಸಾಹಿತ್ಯಗಳಿಂದ ಉದಾಹರಣೆಗಳನ್ನು ಎತ್ತಿಕೊಟ್ಟು ಈ ವಿಚಾರಕ್ಕೆ ನಿಖರತೆಯನ್ನು ನೀಡಿದ್ದಾರೆ. ಇದೇ ಅಭಿಪ್ರಾಯವನ್ನು ಸಮರ್ಥಿಸಲು ಸಾಕ್ಷಿಯಾಗಿ ನಿಲ್ಲಬಹುದಾದ ಕೆಲವು ಸಂಸ್ಕೃತ ಸಾಹಿತ್ಯದಿಂದಾಯ್ದ ಉಲ್ಲೇಖಗಳನ್ನು ನೋಡಬಹುದು.

**೧. ಶಾರದಾತನಯ : ಭಾವ ಪ್ರಕಾಶ (ಕ್ರಿ.ಶ. ೧೩ನೆಯ ಶತಮಾನ)**

ದ್ರಮಿಡಾಃ ಕನ್ನಡಾಂಧ್ರಾಶ್ಚ ಹೂಣಹಿಮ್ಮೀರಸಿಂಹಲಾಃ ।
..............................................................
ಏತಾ ಭಾಷಾಶ್ಚ ಸರ್ವತ್ರ ಮ್ಲೇಚ್ಛಭಾಷಾ ಇತಿ ಉದಾಹೃತಾಃ ॥

ಇಲ್ಲಿ ಕ್ರಮವಾಗಿ ದ್ರಮಿಡ (ದ್ರಾವಿಡ), ಕನ್ನಡ, ಆಂಧ್ರ, ಹೂಣ, ಹಿಮ್ಮೀರ ಮತ್ತು ಸಿಂಹಲಾ (ಸಿಂಹಳ) ಎಂದು ಬೇರೆಬೇರೆಯಾಗಿ ಉಕ್ತವಾಗಿದ್ದು ಮೊದಲ ಪದ 'ದ್ರಮಿಡ' ಎಂಬುದರ ಅಭಿಪ್ರಾಯ 'ತಮಿಳು' ಅಥವಾ 'ತಮಿಳ' ಎಂಬುದೇ ಆಗಿದೆ.

**೨. ಶಂಭುರಹಸ್ಯ**

ಮಾಮುದ್ದಿಶ್ಯ ತಪಶ್ಚಕ್ರೇ ಪುರಾಗಸ್ತ್ಯೋ ಮಹಾಮುನಿಃ ।
ಮಯಾ ಪ್ರದತ್ತವಿಜ್ಞಾನೋ ದ್ರಾವಿಡೀಂ ವ್ಯಾಕೃತಿಂ ವ್ಯಧಾತ್ ॥
ನಾಪಭ್ರಂಶದೋಷೋಸ್ತಿ ದ್ರಾಮಿಡೀನಾಂ ಗಿರಾಂ ತತಃ ।
ಅನಾರ್ಷಂ ಆಂಧ್ರಕರ್ಣಾಟಗೌರ್ಜರಾದ್ಯಂ ಹಿ ಭಾಷಿತಂ ॥

ಇಲ್ಲಿಯ ಎರಡು ಮತ್ತು ಮೂರನೆಯ ಚರಣಗಳಲ್ಲಿ ಬಂದಿರುವ 'ದ್ರಾವಿಡಿ' ಮತ್ತು 'ದ್ರಾಮಿಡಿ' ಶಬ್ದಗಳು ವಿಶೇಷವಾಗಿ 'ತಮಿಳ'ನ್ನೇ ಕುರಿತು ಹೇಳುವುದು ಸ್ಪಷ್ಟವಿದೆ. ಮೂರನೆಯ ಚರಣದಲ್ಲಿ ಉಕ್ತಗೊಂಡಿರುವ ಆಂಧ್ರ, ಕರ್ಣಾಟ, ಪದಗಳು ('ಗೌರ್ಜರ' ಎಂಬುದು 'ಗುಜರಾತಿ'ಯನ್ನು ನಿರ್ದೇಶಿಸಬಹುದೇನೋ ) ಕ್ರಮವಾಗಿ ಆಂಧ್ರಪ್ರದೇಶ, (ತೆಲುಗು ?) ಮತ್ತು ಕರ್ನಾಟಕ (ಕನ್ನಡ ?)ಗಳನ್ನು ಬೇರೆಯಾಗಿಯೇ ನಿರ್ದೇಶಿಸಿರುವುದು ಇದಕ್ಕೆ ಪುಷ್ಟಿಯನ್ನು ನೀಡುತ್ತದೆ.

**೩. ಮಹಾಭಾರತ (ಭೀಷ್ಮಪರ್ವ)**

ಅಥಾಪರೇ ಜನಪದಾಃ ದಕ್ಷಿಣಾಃ ಭರತರ್ಷಭ !
ದ್ರವಿಡಾಃ ಕೇರಲಾಃ ಪ್ರಾಚ್ಯಾಃ ಮೂಷಿಕಾಃ ವನವಾಸಿಕಾಃ
ಕರ್ಣಾಟಕಾಃ ಮೂಷಿಕಾಃ ವಿಕಲ್ಪಾ ಮೂಷಕಸ್ತಥಾ ॥

ಇಲ್ಲಿಯೂ ಕೇರಲಾ (ಕೇರಳ), ಕರ್ಣಾಟಕಾ (ಕರ್ನಾಟಕ)ಗಳಂತೆ 'ದ್ರವಿಡ' (ದ್ರಾವಿಡ) ಎಂದರೆ 'ತಮಿಳು' (ತಮಿಳುನಾಡು) ಎಂಬುದರಲ್ಲಿ ಸಂದೇಹವೇ ಉಳಿಯುವುದಿಲ್ಲ.

**೪. ಮನುಸ್ಮೃತಿ**

ಝಲ್ಲೋ ಮಲ್ಲಶ್ಚ ರಾಜನ್ಯಾತ್ ವ್ರಾತ್ಯಾನ್ನಿಚ್ಛಿವಿರೇವ ಚ ।
ನಟಶ್ಚ ಕರಣಶ್ಚೈತ್ರವ ಖಸೋ ದ್ರವಿಡ ಏವ ಚ ॥''

'ಮನುವು ತನ್ನ ಕಾಲದ ವ್ರಾತ್ಯ ಕ್ಷತ್ರಿಯರ ಪಂಗಡಗಳನ್ನು ವಿವರಿಸುವಾಗ ಈ ಮೇಲಿನಂತೆ ಹೇಳುತ್ತಾನೆ, ಕರ್ನಾಟಕ ಕುರಿತು ''ನಟಶ್ಚ ಕರಣಶ್ಚೈವ'' ಎಂದು ಹೇಳಿ ''ದ್ರವಿಡ'' ಎಂಬುವರನ್ನು ಬೇರೆಯಾಗಿಯೇ ಹೆಸರಿಸುತ್ತಾನೆ. ಇದು ತಮಿಳರನ್ನು ಕುರಿತದ್ದೇ ಎಂಬುದನ್ನು ಬೇರೆ ಹೇಳಬೇಕಿಲ್ಲ.

ಹೀಗೆ 'ದ್ರಾವಿಡ' (ದ್ರಮಿಡ, ದ್ರವಿಡ, ದ್ರಾಮಿಡ) ಎಂಬ ನಾಮಧೇಯವು ಕೇವಲ ತಮಿಳು ಮತ್ತು ತಮಿಳರನ್ನೇ ಕುರಿತು ಸ್ಪಷ್ಟವಾಗಿ ಹೇಳುತ್ತಿದ್ದರೂ ಅದನ್ನು ಗಮನಕ್ಕೆ ತಾರದೆ 'ದ್ರಾವಿಡ' ಎಂಬ ನಿರುಕ್ತವನ್ನು ವಿದ್ವಾಂಸರು (ಇದುವರೆಗೂ) ದಕ್ಷಿಣ ಭಾರತೀಯರೆಲ್ಲರಿಗೂ ಅನ್ವಯಿಸಿ ಹೇಳಿದ್ದು ವಿಚಿತ್ರವಾಗಿದೆ.

ಇದನ್ನು ಶ್ರೀ ರಾ.ಯ. ಧಾರವಾಡಕರರು ತಮ್ಮ ''ಕನ್ನಡ ಭಾಷಾ ಶಾಸ್ತ್ರ'', ಎಂಬ ಗ್ರಂಥದಲ್ಲಿ ವಿವರವಾಗಿ ಚರ್ಚಿಸಿದ್ದಾರೆ. *– ಮಾರುತಿ ದಾಸಣ್ಣವರ (ಮಧ್ಯಪ್ರದೇಶ)*

ಕರ್ನಾಟ.... ಐವತ್ತಾರು ಪ್ರಾಂತಗಳಿರ್ಪುವಾ ದೇಶಂಗಳಲ್ಲಿ....

**ಮರಾಠಿಯಲ್ಲಿ ಉಲ್ಲೇಖಗಳು**

xix. ಮುಕ್ತೇಶ್ವರ, ಭಾರತ (ವನಪರ್ವ, ೧.೩೨)
ಗುರ್ಜರ ಮಹಾರಾಷ್ಟ್ರ ಕರ್ನಾಟಕ। ಆಂಧ್ರ ಚೌಲ ಮಲ್ಯಾಳ ದೇಖ। ಪಂಚದ್ರವಿಡೀ ಅನೇಕ ಧರ್ಮಾಸಂಗೀ ಚಾಲಿಲೇ ॥ (ಪಂಚ ದ್ರವಿಡ ಶಬ್ದದ ಪ್ರಯೋಗವನ್ನು ಗಮನಿಸಬೇಕು.)

xx. ಅದೇ (ಸಭಾಪರ್ವ ೮. ೧೩೧)
ಕರ್ನಾಟಕ ಪಾಂಡ್ಯ ಪ್ರಬಲಾ। ದ್ರವಿಡ ಆಣಿ ಚೋಳಮಂಡಳ। ಆಂಧ್ರ ತಾಳವನ ವಿಶಾಲ। ಕಾಳೀಕ ಉದ್ಭಟ ಉಷ್ಟ್ರಕರ್ಣಿಕ ॥ (ದ್ರವಿಡ ಮತ್ತು ಚೋಳ ಮಂಡಲಗಳೆರಡನ್ನೂ ಉಲ್ಲೇಖಿಸಿರುವುದನ್ನು ಗಮನಿಸಬೇಕು.)

**ತಮಿಳು ಭಾಷೆಯಲ್ಲಿ ಉಲ್ಲೇಖಗಳು**

xxi. ಇಳಂಗೋವಡಿ, ಶಿಲಪ್ಪದಿಕಾರಂ (ವಂಚಿಕ್ಕಾಂಡಂ, ಕಾಟ್ಚಿಕ್ಕಾದೈ ೨೫, ಸಾಲು ೧೫೧-೫೫) (ಸು. ೬೦೦)
ತಿಗೈಮುಗ ವೇಲಿತ್ತಿನ್ ಶೆವಿಯಗಮ್ ಪುಕ್ಕನ
ಕೊಂಗಣರ್ ಕಲಿಂಗರ್ ಕೊಡುಜ್ ಗರುನಾಡರ್
ಪಂಗಳರ್ ಕಂಗರ್ ಪಲ್ವೇಲ್ ಕಟ್ಟಿಯರ್
ವಡವಾರಿಯರೋಡು ವಂಡಮಿಲ್ ಮಯಕ್ಕತ್ತುನ್
ಕಡಮಲೈ ವೇಟ್ಟಮೆನ್ ಕಟ್ಟುಲಂ ಪಿರಿಯಾದು

xxii. ತೊಲ್‌ಕಾಪ್ಪಿಯಂ ವ್ಯಾಕರಣದ ವೃತ್ತಿ (ಶೊಲ್ಲದಿಗಾರಂ, ೪೦೦ನೆಯ ಸೂತ್ರಕ್ಕೆ ತೆಯ್ವಶ್ಶಿಲೈಯಾರ್‌ನ ವೃತ್ತಿ) (೧೨ನೆಯ ಶತಮಾನದ ನಂತರ)
ಪಲಂತೀಬಂ ಕೊಲ್ಲಂ ಕೂಬಗಂ ಶಿಂಗಳಂ ಕನ್ನಾಡಂ ವಡುಗುಂ ಕಲಿಂಗಂ ತೆಲಿಂಗಂ ಕೊಂಗಣಂ ತುಳುವಂ ಕುಡಗಂ ಕುನಗಂ

xxiii. ನನ್ನೂಲ್ ವ್ಯಾಕರಣದ ವೃತ್ತಿ (೨೭೩ನೆಯ ಸೂತ್ರಕ್ಕೆ) (೧೨ನೆಯ ಶತಮಾನಾನಂತರ)
.....ಶಿಂಗಳಂ ಶೋನಗಂ ಶಾವಗಂ ಚೀನಂ ತುಳುವಂ ಕುಡುಗಂ ಕೊಂಗಣಂ ಕನ್ನಡಂ ಕೊಲ್ಲಂ ತೆಲುಂಗಂ ಕಲಿಂಗಂ ವಂಗಂ ಗಂಗಂ ಮಗದಂ ಕಡಾರಂ ಕೌಡಂ ಕುಜಲಂ.

**ತೆಲುಗು ಭಾಷೆಯಲ್ಲಿ ಉಲ್ಲೇಖಗಳು**

xxiv. ತಿಕ್ಕನ ಸೋಮಯಾಜಿ, ನಿರ್ವಚನೋತ್ತರ ರಾಮಾಯಣಮು (೧.೩೯) (೧೨೧೦-೧೨೫೦)
ದ್ರವಿಡೋರ್ವೀಪತಿ ಗರ್ವಮುಂ ದುನಿಮಿ ಶೌರ್ಯಂಬೊಪ್ಪ ಗರ್ಣಾಟದ
ರ್ಪವಿಘಾತಂಬು ನೊನರ್ಚಿ.... ನೆವಿಚಿಂ ಜೋಳಮನ್ನಸಿದ್ಧಿಯನಿ ಪ್ರಾಯೇಟಂ ಬ್ರಗಾಢೋದ್ಧತಿನ್.

**ಶಾಸನಗಳಲ್ಲಿ ಉಲ್ಲೇಖಗಳು**

xxv. ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ ೧೯೨೯
ಖಸ ಕರ್ಣಾಟಾಂಧ್ರವಂಗದ್ರವಿಳ ಮಗಧ ನೇಪಾಳ ಕಾಳಿಂಗ (೧೦೮೧)

xxvi. ಎಪಿಗ್ರಾಫಿಯ ಕರ್ನಾಟಕ ೫. ಅರಸೀಕೆರೆ ೧೩೦ :
ಕರ್ನಾಟ ಲಾಟದ್ರಾವಿಳ ನಾನಾ ದೇಶ ಭಾಷ ವಿಶೇಷ ಲಿಪಿ ನಿಪುಣ ವಿದ್ಯಾಧರರುಂ (೧೨೦೦).

xxvii ಅದೇ, xii ತುಮಕೂರು ೧೪
ವರಾಹಾಟಾದಿ ಕರ್ನಾಟ ದ್ರಾವಿಡಾನ್ ತೌಳವಾನಪಿ (೧೨೩೪)

xxviii ಅದೇ, x ಶಿಡ್ಲಘಟ್ಟ ೨
ಕರ್ನಾಟಕ ತೆಲುಗಾಣ ದ್ರಾವಿಡ (೧೫೭೭)

**೬. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟು** ಸಂಪುಟ ೩, ಪು. ೩೪೭೧

**ತಿಗಳ, ತಿಗುಳ, ತಿಗಳ** : ತಮಿಳು ಮಾತನಾಡುವವನು; ಅರವ; ತಿಗುಳ ದ್ರಾವಿಡನಕ್ಕು (ಮಂಗರಾಜ ನಿಘಂಟು ೧೧೨-೭) ''ತಿಗುಳನೆನೆ ದ್ರವಿಡ'', ತಿಗುಳ ಮಾರಿ: ತಮಿಳರಿಗೆ ಮೃತ್ಯು ದೇವತೆಯಂತಿರುವವನು; ಇಜ್ಜಿವ ಬೆಡಂಗ ಸತ್ಯಾಶ್ರಯನ ಬಿರುದು.

ತಿಗುಳನಾಡು - ತಮಿಳು ದೇಶ; ತಿಗುಳಾಣ್ಯ, ತಿಗಳಾಣ್ಯ- ತಮಿಳು ನಾಡು, ತಿಗುಳು = ತಮಿಳರ ಮಾತು; ತಮಿಳು ಭಾಷೆ. ಎಪಿಗ್ರಾಫಿಯ ಕರ್ನಾಟಕ III, ತಿರುಮಕೂಡಲು ೨೭-೩೪ (೧೨೫೦): ನಾಗರ ಕಂನಡ ತಿಗುಳಾರ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ಗದ್ಯಾಣಂ ಆರು; ತಿಗುಳಿತ್ತಿ = ತಮಿಳರವಳು.

**ದ್ರವಿಡ** : ಅದೇ, ಸಂಪುಟ ೪, ಪು. ೪೧೩೪

೧. ಭಾರತದ ದಕ್ಷಿಣ ಪ್ರದೇಶದ ಪೂರ್ವತೀರದ ಪ್ರದೇಶ, ದ್ರಾವಿಡ ದೇಶ, ತಮಿಳುನಾಡು.

೨. ತಮಿಳುನಾಡು ಜನಾಂಗದ ಅಥವಾ ನಿವಾಸಿಗಳ ಹೆಸರು.

**ದ್ರವಿಡ ಭಾಷೆ** : ತಮಿಳು ಭಾಷೆ.

**ದ್ರವಿಡ ಮಂಟಂ (-ಮಂಟಕಂ) ನ್ಯಾಯ** : ವ್ಯರ್ಥಾಶ್ರಮ

ದ್ರವಿಡ ವೇದ : ತಮಿಳು ದೇಶದ ವೈಷ್ಣವ ಭಕ್ತರು ಶರಣಾಗತಿ ತತ್ತ್ವವನ್ನು ಬೋಧಿಸಲು ರಚಿಸಿದ, ವೇದಾಂತ ತತ್ತ್ವಗಳನ್ನೊಳಗೊಂಡ ಕೃತಿಗಳು; ಆಳ್ವಾರುಗಳ ರಚನೆಗಳು = ದ್ರವಿಡಾಮ್ನಾಯ.

**ದ್ರಾವಿಡ** : ಅದೇ, ಸಂಪುಟ ೪, ಪು. ೪೧೪೧

೧. ದ್ರವಿಡಕ್ಕೆ ಸಂಬಂಧಿಸಿದ; 'ದ್ರಾವಿಡ ಕುಲ', 'ದ್ರಾವಿಡ ಭಾಷೆ.'

೨. ದ್ರಾವಿಡ ದೇಶಕ್ಕೆ ಸೇರಿದವನು.

೩. ದ್ರಾವಿಡ ದೇಶಕ್ಕೆ ಸಂಬಂಧಿಸಿದ ಭಾಷೆ.

೪. ತಮಿಳು ದೇಶ.

೫. ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ತಮಿಳು ನಾಡಿನವನು; ತಿಗುಳ.

೬. ದ್ರಾವಿಡ ಸಂಘಗಳು.

೭. ಭಾರತೀಯ ವಾಸ್ತುಶಿಲ್ಪದ ನಾಗರ, ದ್ರಾವಿಡ ಮತ್ತು ವೇಸರಗಳೆಂಬ ಮೂರು ಪ್ರಭೇದಗಳಲ್ಲಿ ಒಂದು; ದಕ್ಷಿಣ ದೇಶದಲ್ಲಿರುವ ವಾಸ್ತುಶಿಲ್ಪ; = ದ್ರಾವಿಡ ನಮೂನೆ, ದ್ರಾವಿಡ ರೀತಿ = ದ್ರಾವಿಡ ಶೈಲಿ.

**ದ್ರಾವಿಡ ತಪಸ್ಸು** : ಆರ್ಯವರ್ಗಕ್ಕೆ ಸೇರದ, ದುಷ್ಪಕಾರ್ಯಕ್ಕಾಗಿ ಶಕ್ತಿಯನ್ನು ಸಂಪಾದಿಸುವ ತಪಸ್ಸು.

**ದ್ರಾವಿಡ ದೇಶ,** ದ್ರಾವಿಡ ಧರೆ = ತಮಿಳುನಾಡು.

**ದ್ರಾವಿಡ ಪದ್ಧತಿ** : ೧. ದ್ರಾವಿಡ ಜನರಿಗೆ ಸಂಬಂಧಿಸಿದ ಸಂಪ್ರದಾಯ; ೨. (ಛಂದ) ದ್ರವಿಡ ವರ್ಗಕ್ಕೆ ವಿಶಿಷ್ಟವಾದ ರೀತಿ.

**ದ್ರಾವಿಡ ಪ್ರಬಂಧ** = ದ್ರವಿಡ ವೇದ

ಪು. ೪೧೪೨ **ದ್ರಾವಿಡ ಪ್ರಾಣಾಯಾಮ** = ಅನವಶ್ಯಕವಾದ ಶ್ರಮ (ಪ್ರಾಣಾಯಾಮ ಮಾಡುವಾಗ ಮೂಗನ್ನು ಹಿಡಿಯಲು ಬಲಗೈಯನ್ನು ತಲೆಯ ಸುತ್ತ ಬರುವಂತೆ ಚಾಲಿಸುವುದು.)

**ದ್ರಾವಿಡ ಬ್ರಾಹ್ಮಣ** : ೧. ಪಂಚ ದ್ರಾವಿಡ ಭಾಷೆಗಳಲ್ಲಿ ಯಾವುದಾದರೊಂದನ್ನು ತಾಯ್ನುಡಿಯಾಗುಳ್ಳ ಬ್ರಾಹ್ಮಣ.

೨. ತಮಿಳು ಭಾಷೆಯನ್ನು ತಾಯ್ನುಡಿಯಾಗುಳ್ಳ ಬ್ರಾಹ್ಮಣ.

**ದ್ರಾವಿಡ ಭಾಷೆ** : ದಕ್ಷಿಣ ದೇಶದ ದ್ರವಿಡ ವರ್ಗಕ್ಕೆ ಸೇರಿದ ಭಾಷೆಗಳಲ್ಲಿ ಒಂದು; ತಮಿಳು, ಕನ್ನಡ, ಮಲಯಾಳ, ತುಳು, ತೆಲುಗು, ಕೊಡಗು ಇತ್ಯಾದಿ. ದ್ರಾವಿಡ ಭಾಷಾ ವರ್ಗದಲ್ಲಿ ಉಪಭಾಷೆಗಳ ಸಂಖ್ಯೆ ಮೂವತ್ತನ್ನೂ ಮೀರಿದೆ. ಇವುಗಳಲ್ಲಿ ಕೆಲವು ಉತ್ತರ ಭಾರತದಲ್ಲೂ ನೆಲೆನಿಂತಿವೆ. ಉದಾ: ಗೋಂಡೀ, ಬ್ರಾಹೂಈ, ಕಂಡಃ, ಕುವಿ, ಪೆಂಗು, ಕೋಲಾಮಿ, ಪರ್ಜಿ, ಮಲ್ತೋ, ಒಲ್ಲಾರಿ, ಕೊರಗ, ಗದಬ, ಕೊಯ, ಕೊಂಡ, ತೋಡ, ಬಡಗ, ಕೋತ, ಕುರುಖ್, ನಾಯ್ಕಿ.

**ದ್ರಾವಿಡ ಸಂಘ** = ದಕ್ಷಿಣ ದೇಶದಲ್ಲಿ ನೆಲಸಿದ ಜೈನಮುನಿಗಳ ಸಂಘ.

**ದ್ರಾವಿಡ ಸಂಪ್ರದಾಯ** = ದ್ರಾವಿಡ ಪದ್ಧತಿ.

**ದ್ರಾವಿಡ ಸಂಸ್ಕೃತಿ** = ದಕ್ಷಿಣ ದೇಶದ ದ್ರವಿಡ ವರ್ಗಕ್ಕೆ ಸೇರಿದವರ ಸಂಸ್ಕೃತಿ.

**ದ್ರಾವಿಡೀ** = ೧. ದ್ರಾವಿಡ ದೇಶದ ಹೆಂಗಸು.

೨. ಸಂಗೀತದಲ್ಲಿ ಒಂದು ರಾಗದ ಹೆಸರು.

**ದ್ರಾವಿಳ** = ದ್ರಾವಿಡ.

* * *

ದ್ರವಿಡ ವರ್ಗವೆಂದು ಹೆಸರಿಸಲಾಗುತ್ತಿರುವ ಭಾಷೆಗಳ ಕುಟುಂಬವನ್ನು ದಕ್ಷಿಣೀ (ಡೆಕ್ಕನ್, ದಖನೀ) ಎಂದು ಕರೆಯಬಹುದೆ ಎಂದು ಯೋಚಿಸಬಹುದು.

**ದಾ. ಸತ್ಯನಾರಾಯಣ**
''ತ್ರಯೀಲಕ್ಷ್ಮೀ'' ೯ನೇ ಅಡ್ಡ ರಸ್ತೆ, ಜಯನಗರ
ಮೈಸೂರು - ೫೭೦ ೦೧೪

*With Best wishes from*

# THE BOOK PARADISE

(Publishers, Distributors, Importers)

***13/11, Subhash Nagar, Near D. S. D. College, Gurgaon (Haryana)***
***phone : 6322330, 6327543*** ***e-mail : bookparadise@hotmail.com***




Rs. 110




Rs. 110




Rs. 110




Rs. 110




Rs. 40




Rs. 40




Rs. 40




Rs. 40

*Distributors of*

All Kinds of Children's Books, Fiction, Non-fiction, Cooking, Fashion, Furniture, Dictionaries & all other General Books

# ಕನ್ನಡ ಸಾಹಿತ್ಯದ ಮುಂದಿನ ಹೆಜ್ಜೆಗಳು - ಒಂದು ಚಿಂತನ

**ಹೊಸ** ಸಹಸ್ರಮಾನದ ಹೊಸ್ತಿಲಲ್ಲಿರುವ ನಾವು ಕನ್ನಡ ಸಾಹಿತ್ಯದ ಬೆಳವಣಿಗೆಗಳ ಹೆಜ್ಜೆಗಳನ್ನು ಗುರುತಿಸಿಕೊಂಡು ಮುಂದಿನ ದಾರಿಯನ್ನು ಕಂಡುಕೊಳ್ಳಬೇಕಾಗಿದೆ. ಈ ಶತಮಾನ ಭಾರತೀಯರ ದೃಷ್ಟಿಯಲ್ಲಿ ಅತ್ಯಂತ ಮಹತ್ವದ್ದು. ಅನೇಕ ಸ್ಥಿತ್ಯಂತರಗಳನ್ನು ಕಂಡ ಶತಮಾನವಿದು. ಸಾಮ್ರಾಜ್ಯಶಾಹಿಗಳ ಪ್ರವೇಶದಿಂದ ಜರ್ಝರಿತವಾಗಿದ್ದ ಭಾರತೀಯ ಸಾಮಂತರು ಅನೇಕ ರೀತಿಯ ದೌರ್ಜನ್ಯಗಳಿಗೆ ತುತ್ತಾಗಿದ್ದರು. ಜನಸಾಮಾನ್ಯರಂತು ನಿಜವಾದ ಅರ್ಥದಲ್ಲಿ ನರಕದಲ್ಲೇ ವಾಸಮಾಡುತ್ತಿದ್ದರು. ಸ್ವರ್ಗ-ನರಕಗಳ ಕಲ್ಪನೆಯ ಕೂಪದಲ್ಲಿ ನರಳುತ್ತಿದ್ದ ಭಾರತೀಯರು ಇತಿಹಾಸದ ಚಕ್ರಗಳಡಿ ಸಿಕ್ಕಿ ಜಜ್ಜಿಹೋದವರು.

ಬ್ರಿಟಿಷರು ಭಾರತಕ್ಕೆ ಪ್ರವೇಶ ಮಾಡಿದ್ದರಿಂದ ಭಾರತೀಯ ಸಮಾಜದಲ್ಲಿ ಹೊಸ ಲೋಕವೊಂದು ತೆರೆದುಕೊಂಡಿತು. ಪರದೇಶಗಳನ್ನು ಆಳುವ ಬ್ರಿಟಿಷರು ತಮ್ಮ ಮೂಲ ಸ್ವರೂಪಗಳನ್ನು, ತಾವು ಆಕ್ರಮಣ ಮಾಡಿದ ದೇಶಗಳ ನೆಲದಲ್ಲಿ ಬಿಟ್ಟುಬಂದವರು. ಸ್ವಯಂ ಪ್ರಜಾಸತ್ತೆಯ ಪಾಠಗಳನ್ನು ನಂಬಿದ್ದ ಅವರ ಆಕ್ರಮಣಶೀಲತೆ ಭಾರತೀಯರಿಗೆ ಶಾಪದಂತೆ ವರವೂ ಆಗಿ ಪರಿಣಮಿಸಿತು. ಈ ಬೆಳವಣಿಗೆಯ ವಿವಿಧ ಹಂತಗಳನ್ನು ಚರಿತ್ರಕಾರರು ಗುರುತಿಸಿದ್ದಾರೆ.

ಪ್ರತಿಕ್ರಿಯಿಸುತ್ತಲೇ ಬಂದಿದೆ. ಈ ಪ್ರತಿಕ್ರಿಯೆ ನಮಗೆ ಮುಂದಿನ ನೋಟವೊಂದನ್ನು ತಿಳಿಹೇಳಬಹುದು.

ಸ್ವಾತಂತ್ರ್ಯಾನಂತರದ ಸಾಹಿತ್ಯದಲ್ಲಿ ಸಮಕಾಲೀನ ಎನ್ನಬಹುದಾದ ದಲಿತ-ಬಂಡಾಯ ಪರಿಕಲ್ಪನೆಗಳೇನಾದರೂ ಮುಂದಿನ ದಾರಿ ತೋರಬಹುದೆ ? ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ತೀವ್ರವಾದ ಸ್ವದೇಶಿ ರಾಷ್ಟ್ರಪ್ರೇಮದಿಂದ ಹುಟ್ಟಿದ ನವೋದಯ ಚಳುವಳಿ ಮುಂದಿನ ದಿಕ್ಕನ್ನು ನಿರ್ದೇಶಿಸಬಹುದೆ ? ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳಿಂದ ತೀವ್ರವಾಗಿ ಪ್ರಭಾವಿತರಾದ ನವ್ಯಲೇಖಕರು ಹೊಸ ಚಿಂತನೆಗೆ ಕಾರಣರಾಗಬಲ್ಲರೆ ? ಎಂಬೀ ಪ್ರಶ್ನೆಗಳು ಈಗ ಪ್ರಸ್ತುತ.

ಈ ಪ್ರಶ್ನೆಗಳಿಗೆ ಉತ್ತರಿಸಬೇಕಾದರೆ, ಸದ್ಯದ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭವನ್ನು ಅವಲೋಕನ ಮಾಡುವುದು ಅಗತ್ಯವಾಗಿದೆ. ಐವತ್ತು ವರ್ಷಗಳ ಭಾರತದ ಸ್ವತಂತ್ರ ಆಳ್ವಿಕೆಯ ನಂತರ ಇಂದು ಮತ್ತೆ ಸ್ವದೇಶಿ ಕೂಗು ಕೇಳಿಬರುತ್ತಿದೆ. ಹಾಗಾದರೆ ಭಾರತೀಯರು ಆಲೋಚನೆಯಲ್ಲಿ, ಜೀವನದಲ್ಲಿ ವಿದೇಶೀಯರಾಗುತ್ತಿದ್ದಾರೆಯೆ ? ಇಲ್ಲವಾದರೆ ಸ್ವದೇಶಿ ಮಂತ್ರಪಠಣ ಏನು ಹೇಳುತ್ತಿದೆ ? ಸದ್ಯದ ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ಪ್ರಕ್ರಿಯೆಯಲ್ಲಿ ಸೃಜನಶೀಲತೆಯ ಸ್ಥಾನಮಾನಗಳೇನೆಂಬುದನ್ನು ಪುನರ್

ಅನಾಥವಾಗಿ, ಅನಾಮಧೇಯವಾಗಿ ಉಳಿದಿರುವ ಅನೇಕ ಜನಾಂಗಗಳ ಬದುಕನ್ನು ಅನಾವರಣ ಮಾಡುತ್ತಿದೆ. ತಮ್ಮ ಪೂರ್ವಜರ ಬದುಕಿನ ದಾಖಲೆ ಮಾಡುತ್ತಲೇ ಮುಂದಿನ ದಿನಗಳಲ್ಲಿ ನಮ್ಮ ಜವಾಬ್ದಾರಿಯೇನು ಎಂಬುದನ್ನು ಸಮಕಾಲೀನ ಸಾಹಿತ್ಯ ಚರ್ಚಿಸುತ್ತಿದೆ; ದಾಖಲಿಸುತ್ತಿದೆ. ದಲಿತ-ಬಂಡಾಯ ಸಾಹಿತ್ಯ ಎರಡು ದಶಕಗಳ ಹಿಂದಿನ ತೀವ್ರತೆಯನ್ನು ಪ್ರದರ್ಶಿಸುತ್ತಿಲ್ಲವೆಂದು ಹೇಳಲಾಗುತ್ತಿದೆ. ಇದು ನಿಜವಾದ ಸಂಗತಿ. ಯಾವುದೇ ಸಾಹಿತ್ಯ ಚಳುವಳಿ ತನ್ನ ಪ್ರಾರಂಭದಿಂದ ಕೊನೆಯವರೆಗೆ ಒಂದೇ ರೀತಿಯ ಮೌಲ್ಯಗಳನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಒಂದು ವೇಳೆ ಸಮಾನ ಹಿತಾಸಕ್ತಿಗಳನ್ನು ಕಾಯುವ ಕೆಲಸವನ್ನು ಸಾಹಿತ್ಯ ಮಾಡಿದರೆ ಅದು ಜನರ ಹೃದಯಗಳಿಗೆ ಸ್ಪಂದಿಸುವ ಸಾಹಿತ್ಯವಾಗಲಾರದು. ನಿಂತ ನೀರಾಗದೆ, ಜಡಮೌಲ್ಯಗಳ ಪ್ರತಿನಿಧಿಯಾಗದೆ, ವಂದಿಮಾಗಧರ ದನಿಯಾಗದೆ ಇರುವ ಸಾಹಿತ್ಯವೇ ಜೀವಂತವಾದದ್ದು. ಕಾಲಕಾಲಕ್ಕೆ ಬದಲಾಗುವ ಮೌಲ್ಯಗಳಿಗೆ ಪ್ರತಿಸ್ಪಂದನೆ ಮಾಡಿ, ಆ ವಿಚಾರಗಳ ಜೊತೆ ಸಂವಾದ ಮಾಡುವ ಮೂಲಕ ಹೊಸದಾರಿ, ಹೊಸ ಹೊಳಹುಗಳನ್ನು ಕಂಡುಕೊಳ್ಳುವುದೇ ನಿಜವಾದ ಅರ್ಥದಲ್ಲಿ ಸಮಕಾಲೀನ ಸಾಹಿತ್ಯ.

೨೧ನೇ ಶತಮಾನದ ಸಾಹಿತ್ಯದಲ್ಲಿ ಈಗಿರುವುದಕ್ಕಿಂತ ಬಹುದೊಡ್ಡ ಬದಲಾವಣೆಯನ್ನು ಕಾಣಲಾಗದು.

ಕನ್ನಡ ಸಾಹಿತ್ಯದ ಮೊದಲ ತಲೆಮಾರಿನ ನವೋದಯ ಲೇಖಕರಾದ ಕ್ರಾಂತಿಕಾರಿ ಚಿಂತನಶೀಲ ಕುವೆಂಪು ಅವರು ಬ್ರಿಟಿಷರ ಬಗ್ಗೆ ತಳೆಯುವ ಅಭಿಪ್ರಾಯ ಭಾರತೀಯ ಸಮಾಜಕ್ಕಿಡಿದ ಕನ್ನಡಿ. ಬ್ರಿಟಿಷರು ಭಾರತಕ್ಕೆ ಪ್ರವೇಶಿಸದೆ ಇದ್ದರೆ, ಇಂಗ್ಲಿಷ್ ವಿದ್ಯಾಭ್ಯಾಸ ನನಗೆ ಲಭ್ಯವಾಗದಿದ್ದರೆ ನಾನು ಕುಪ್ಪಳಿಯಲ್ಲಿ ಸಗಣಿ ತಟ್ಟುವ ಬಾಲಕನಾಗಿರಬೇಕಾಗಿತ್ತು ಎನ್ನುವುದು, ಸಂಪ್ರದಾಯಸ್ಥ ಪುರೋಹಿತಶಾಹಿ ಸಮಾಜ ವ್ಯವಸ್ಥೆಯ ಹಿಡಿತವನ್ನು ಸ್ಪಷ್ಟವಾಗಿ ತಿಳಿಯಪಡಿಸುತ್ತದೆ. ಇಂತಹ ಪುರೋಹಿತ ಶಾಹಿ, ಊಳಿಗಮಾನ್ಯ ವ್ಯವಸ್ಥೆಯ ಪಳೆಯುಳಿಕೆಯಾಗಿ ೧೯ನೇ ಶತಮಾನದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಉಗಮವನ್ನು ಗುರುತಿಸುತ್ತಾರೆ.

ಅಧ್ಯಯನದ ಅನುಕೂಲಕ್ಕಾಗಿ ಆಧುನಿಕ ಕನ್ನಡ ಸಾಹಿತ್ಯ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ-ಬಂಡಾಯಗಳೆಂದು ಗುರುತಿಸಲ್ಪಟ್ಟರೂ ಇವೆಲ್ಲದರ ಮೂಲ ಸಂವೇದನೆ ಒಂದೇ ಆಗಿದೆ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಮುಖ್ಯ ಲೇಖಕರೂ ಜನರ ಜನಮಾನಸಕ್ಕೆ ಪ್ರತಿಸ್ಪಂದಿಸಿದ್ದಾರೆ. ಅಲ್ಲದೆ ಸಾಮಾಜಿಕ, ಸಾಂಸ್ಕೃತಿಕ ಸಮಸ್ಯೆಗಳ ಜೊತೆಗೆ ತಮ್ಮ ಸಂವೇದನೆಗಳನ್ನು ತಾದಾತ್ಮ್ಯಗೊಳಿಸಿಕೊಂಡಿದ್ದಾರೆ. ಕನ್ನಡ ಸಾಹಿತ್ಯವೆಂದರೆ ಸಾರಾಸಗಟಾಗಿ ಜನಪರ ಸಾಹಿತ್ಯವೆಂದೇನೂ ಕರೆಯಲಾಗದು. ಸಾಧ್ಯವಾದ ಮಟ್ಟಿಗೆ ಆಯಾ ಕಾಲಧರ್ಮಕ್ಕನುಗುಣವಾಗಿ ಜನರ ಆಶೋತ್ತರಗಳಿಗೆ

ಚಿಂತಿಸುವ ಕಾಲ ಇದಾಗಿದೆ. ಜಾಗತೀಕರಣದಿಂದ ವಿಶ್ವಗ್ರಾಮ (Global Village) ಪರಿಕಲ್ಪನೆ ನಮ್ಮ ಜನಜೀವನದ ಮೇಲೆ ಗಾಢವಾದ ಪರಿಣಾಮ ಬೀರಿದೆ. ಈ ಪ್ರಕ್ರಿಯೆ ಸಾಹಿತ್ಯ - ಸಂಸ್ಕೃತಿಗಳ ಮೇಲೂ ಬೀಳುವುದು ಸಹಜವಾದದ್ದು. ಖಾಸಗೀಕರಣ ಬಂಡವಾಳಶಾಹಿ ಪದ್ಧತಿಯ ಮೂಲಧಾತು. ಇದರಿಂದ ಸಮಾಜವಾದದ ಪರಿಕಲ್ಪನೆಗೆ ಧಕ್ಕೆ ಒದಗುತ್ತದೆಯೆ ? ಇಂತಹ ಕ್ರಮವೊಂದು ಬಹುಸಂಖ್ಯಾತ ಬಡ ಭಾರತೀಯರಿಗೆ ಮಾರಕವಾಗುತ್ತದೆಯೆ ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕು. ಜಾಗತೀಕರಣದಿಂದ ಕೆಳವರ್ಗಗಳು ವಿಶ್ವಮಾರುಕಟ್ಟೆಗೆ ತಮ್ಮನ್ನು ತೆರೆದುಕೊಳ್ಳುತ್ತವೆಯೆಂಬ ವಾದವೊಂದಿದೆ. ಇದು ನಿಜವೇ ಆದಲ್ಲಿ, ಯಾವ ಸವಲತ್ತುಗಳನ್ನೂ ಕಳೆದುಕೊಳ್ಳದ ಕೆಳವರ್ಗಗಳು ಸಂಕೋಲೆಗಳನ್ನು ಮಾತ್ರ ಕಳೆದುಕೊಳ್ಳುತ್ತವೆ. ಆದರೆ ತಮ್ಮತನವನ್ನು, ದೇಶೀಯತೆಯನ್ನು ಕಳೆದುಕೊಂಡು ಮಾನಸಿಕವಾಗಿ ಅನಾಥ ಪ್ರಜ್ಞೆಯನ್ನು ಅನುಸರಿಸುವಂತಾದರೆ 'ದೇಶೀಯ' ಎಂದು ನಾವು ಬಡಬಡಿಸುವ ಪ್ರಜ್ಞೆ ಹೇಗೆ ಕೆಲಸ ಮಾಡುತ್ತದೆ ?

ಸಮಕಾಲೀನ ಕನ್ನಡ ಸಾಹಿತ್ಯದ ಮೂಲಗುಣ ನೆಲಮೂಲ ಸಂಸ್ಕೃತಿ. ಇದು ಜಾಗತೀಕರಣದ ನಡುವೆಯೂ

ಡಾ|| ಎಲ್. ಹನುಮಂತಯ್ಯ

ಭಾರತೀಯ ಸಮಾಜದಲ್ಲಿ ಕೂಡ ತೀವ್ರವಾದ, ಗಂಭೀರ ಸ್ವರೂಪದ ಬದಲಾವಣೆಗಳನ್ನೇನೂ ನಿರೀಕ್ಷಿಸಲಾಗದು. ಯಾಕೆಂದರೆ ನೂರಕ್ಕೆ ಐವತ್ತರಷ್ಟು ಅನಕ್ಷರಸ್ಥರಿರುವಾಗ, ಬಡತನದ ರೇಖೆಯಿಂದ ಕೆಳಗೇ ವಾಸಿಸುವವರ ಸಂಖ್ಯೆ ಗಣನೀಯವಾಗಿರುವಾಗ ಬದಲಾವಣೆ ಎಂಬುದು ಮೇಲ್ನೋಟಕ್ಕೆ ಕಾಣುವ ಸಂಗತಿಯಾಗುತ್ತದೆ. ಕೃಷಿ ಪ್ರಧಾನ ರಾಷ್ಟ್ರವಾಗಿ ಸ್ವಯಂ ಸಾಕಾಗುವಷ್ಟು ಕೃಷಿ ಉತ್ಪನ್ನಗಳನ್ನು ನೀಡುತ್ತಿದ್ದ ರೈತ ಸಮುದಾಯ ಕಂಗಾಲಾಗಿರುವಾಗ ಬದಲಾವಣೆ ಜನಪರವಾಗಿ ಇರುತ್ತದೆಂದು ಹೇಳಲಾಗದು. ಇಂತಹ ಬದಲಾವಣೆ ಅಪೇಕ್ಷಣೀಯವೂ ಅಲ್ಲ. ಅದಕ್ಕಾಗಿ ಸೃಜನಶೀಲ ಮನಸ್ಸುಗಳು ಇಂತಹ ಅಪಾಯದ ಮುನ್ಸೂಚನೆಯ ದೀಪಗಳಾಗಿ ಕೆಲಸ ಮಾಡಬಹುದು. ಈ ದೃಷ್ಟಿಯಿಂದ ಭಾರತೀಯ ಭಾಷೆಗಳಲ್ಲಿ ರಚಿತವಾಗುವ ಸಾಹಿತ್ಯ ವೈವಿಧ್ಯಮಯವಾಗಿರುತ್ತದೆ, ಜೊತೆಗೆ, ದೊಡ್ಡ ಸವಾಲುಗಳನ್ನು ಸ್ವೀಕರಿಸುವಂತಾಗಬೇಕು.

೨೧ನೇ ಶತಮಾನದಲ್ಲಿ ಮಾಹಿತಿ ತಂತ್ರಜ್ಞಾನದ ಬಗ್ಗೆ ಬಹುದೊಡ್ಡ ಪ್ರಚಾರ ಕೈಗೊಳ್ಳಲಾಗುತ್ತಿದೆ. ಸಣ್ಣ ಪ್ರಾದೇಶಿಕ ಭಾಷೆಯ ಲೇಖಕನ ವಿಶ್ವಮಾನ್ಯವಾಗುವ ಸವಲತ್ತುಗಳು ಬರುವುದರ ನಿರೀಕ್ಷೆಯಿದೆ. ಪ್ರಾದೇಶಿಕ ಭಾಷೆಯ ಲೇಖಕ ತನ್ನ ಸುತ್ತಮುತ್ತ ನಡೆಯುವ ಬದಲಾವಣೆಗೆ ಸ್ಪಂದಿಸುವಾಗ ಇಲ್ಲಿರುವ ಹಿಂಸೆ ಮತ್ತು ಕ್ರೌರ್ಯಗಳಿಗೆ ಸ್ಪಂದಿಸುವ ಮೊದಲ ಮನಸ್ಸಿನವನಾಗು

ತ್ತಾನೆ. ಇಂತಹ ಹಿಂಸೆ ಮತ್ತು ಕ್ರೌರ್ಯಗಳು ತೀವ್ರ ಬದಲಾವಣೆಯ ಫಲವಾಗಿ ರೂಪುಗೊಳ್ಳುತ್ತವೆಯೆ ಎಂಬ ಆಲೋಚನಾಕ್ರಮವೊಂದು ಬೆಳವಣಿಗೆಯಾಗಬೇಕು.

ಮಾಹಿತಿ ತಂತ್ರಜ್ಞಾನ, ಆಧುನಿಕ ಚಿಂತನೆಗೆ ಭಾರತ ಈಗ ಹೊರತಾಗಿಲ್ಲ. ಆದರೆ ಸವಲತ್ತುಗಳು ವರ್ಗಾಧಾರಿತವಾಗಿರುವುದು ಮೇಲ್ನೋಟಕ್ಕೆ ಕಾಣಿಸುತ್ತಿದೆ. ವರ್ಗಗಳು ಜಾತಿಗಳಾಗಿ ಪರಿವರ್ತನೆಯಾಗುತ್ತಿರುವ ಸತ್ಯವೂ ನಮ್ಮ ಮುಂದಿದೆ. ಆಧುನಿಕತೆ, ಅದರಿಂದಾಗುವ ಬದಲಾವಣೆ ಮೇಲ್ವರ್ಗಕ್ಕೆ ಲಭ್ಯವಾದರೆ ಕೆಳವರ್ಗ, ಜಾತಿಗಳು ಮುಂದಿನ ಶತಮಾನದ ಅಸ್ಪೃಶ್ಯರಾಗುವ ಅಪಾಯವಿದೆ. ಭಾರತದಲ್ಲಿ ಈಗಾಗಲೇ ವ್ಯಾಪಕವಾಗಿರುವ ಅಸ್ಪೃಶ್ಯತೆ, ಜಾತಿಪದ್ಧತಿಗಳು ವಿಶ್ವವ್ಯಾಪಿಯಾಗುವ ಎಲ್ಲ ಸಾಧ್ಯತೆಗಳಿವೆ.

ನಮ್ಮ ದೇಶ ಧಾರ್ಮಿಕವಾಗಿ ಸಮೃದ್ಧವಾದದ್ದು ಎಂದೇ ಪ್ರಸಿದ್ಧಿಯಾದದ್ದು. ಅಂದರೆ ಧರ್ಮವಿಲ್ಲದ ಮನುಷ್ಯನಿಲ್ಲ; ಧರ್ಮ ನಿರಪೇಕ್ಷಿತ ರಾಷ್ಟ್ರವಾಗಿಯೂ, ಧರ್ಮಬಾಹಿರವಾದ ಯಾವ ಕೆಲಸಗಳೂ ನಡೆಯದಂತೆ ನೋಡಿಕೊಳ್ಳಲಾಗುತ್ತಿದೆ. ಧರ್ಮವೆಂಬುದು ಆಂತರಿಕ ಅನುಭವವಾಗದೆ ಬಾಹ್ಯ ಆಡಂಬರವಾಗುತ್ತಿರುವುದು ಬಹುಶಃ ಮುಂದಿನ ದಿನಗಳ ಅಪಾಯವೆಂದು ನನ್ನ ಅನಿಸಿಕೆ. ಧರ್ಮವನ್ನು ರಾಜಕೀಯಗೊಳಿಸದೆ, ಧರ್ಮದ ಜೊತೆ ವೈಯಕ್ತಿಕ ಬದುಕಿನ ಆಸೆ ಆಕಾಂಕ್ಷೆಗಳನ್ನು ತಳುಕು ಹಾಕದೆ ಸಾಮರಸ್ಯದ ಸಾಧನವಾಗಿ ಸಾಹಿತ್ಯ ಕೆಲಸ ಮಾಡಬೇಕು. ಧಾರ್ಮಿಕ ಗುಂಪುಗಳ ನಡುವೆ ದೊಡ್ಡ ಕಂದರಗಳು ನಿರ್ಮಾಣವಾಗುತ್ತಿರುವ ಈ ದಿನಗಳು ಮುಂದೆ ರಕ್ತಸಿಕ್ತವಾಗುವುದಿಲ್ಲವೆ ಎಂಬ ಅನುಮಾನಗಳು ಉಳಿದುಬಿಟ್ಟಿವೆ. ಧರ್ಮ ರಾಜಕಾರಣವನ್ನು ಒರೆಗಚ್ಚುವ ಸಾಹಿತ್ಯ ನಮ್ಮ ಮುಂದಿನ ಹಂಬಲ.

ಸಾಹಿತ್ಯ ಮನಸ್ಸಿನೊಳಗಣ ರಣಾಂಗಣ. ಈ ಅಂಗಳದಲ್ಲಿ ಕತ್ತಿಗಳು ಮುತ್ತನಿಕ್ಕಿ ರಕ್ತ ಒಸರುವ ಹೃದಯಗಳಿಗೆ ಮಾನವೀಯತೆಯ ಸಾಂತ್ವನ ಹೇಳುವ ಕೃತಿಗಳ ಅಗತ್ಯವಿದೆ. ಬಡತನದ ನಡುವೆಯೂ ಹಿಂಸಾತ್ಮಕ ದ್ವೇಷ ಬಿತ್ತುವುದನ್ನು ತಡೆಯುವ ಕೃತಿಗಳು ಬೇಕಾಗುತ್ತವೆ. ಯಾವುದೇ ದೇಶದ ಬಡತನವನ್ನು ತೊಡೆದುಹಾಕುವುದು ಸಾಧ್ಯ. ಆದರೆ ಮನಸ್ಸಿನೊಳಗಿನ ದ್ವೇಷವನ್ನು ಅಳಿಸಿಹಾಕುವುದು ಕಷ್ಟ. ಬಡತನಕ್ಕಿಂತಲೂ ಧರ್ಮದ್ವೇಷವೇ ಪ್ರಧಾನ ಪಾತ್ರ ವಹಿಸುವ ದಿನಗಳು ಮುಂದೆ ಬರಲಿವೆ. ಇದು ಅಪಾಯಕಾರಿ ಸೂಚನೆ.

ಜಾಗತೀಕರಣದಂತಹ ಬದಲಾವಣೆಗಳು ಮನುಷ್ಯನನ್ನು ಹೆಚ್ಚು ಭೌತವಾದಿಯನ್ನಾಗಿಸುವ ಸಾಧ್ಯತೆಗಳೇ ಹೆಚ್ಚು. ಪ್ರಪಂಚದ ಬೇರೆ ಬೇರೆ ದೇಶಗಳ ವಿದ್ಯಮಾನಗಳನ್ನು ಗಮನಿಸಿದರೆ ಭೌತವಾದಿ ಮಾನವ ಮಾನವೀಯತೆಗೆ ದೂರ ಎಂಬುದು ಸ್ಪಷ್ಟವಾಗಿದೆ. ಮೂಲತಃ ಭಾವುಕ ಪ್ರಪಂಚದಲ್ಲಿ ವಾಸಿಸುತ್ತಿರುವ ಭಾರತೀಯರಲ್ಲಿ ರಾಕ್ಷಸೀ ಪ್ರವೃತ್ತಿ ಉದ್ದೀಪನಗೊಳ್ಳುವ ಸಾಧ್ಯತೆಗಳು ಹೆಚ್ಚಿವೆ. ಇದರಿಂದ ಮನುಷ್ಯ ಸಮಾಧಾನದಿಂದ ಬದುಕುವ ಅವಕಾಶಗಳು ಕಡಿಮೆಯಾಗಿ ಹೆಚ್ಚು ಆಸೆಬುರುಕ ಸಂಸ್ಕೃತಿಯ ವಾರಸುದಾರನಾಗುವ ಸಾಧ್ಯತೆಯೇ ಕಾಣುತ್ತಿದೆ. ಅದು ಈಗಾಗಲೇ ನಮ್ಮ ನಗರ ಸಂಸ್ಕೃತಿಯ ತೆರೆಯ ಮರೆಯಲ್ಲಿ ಕಾಣುತ್ತಿದೆ. ಇದನ್ನು ಕೂಡ ಲೇಖಕರು ಗಂಭೀರವಾಗಿ ಯೋಚಿಸಬೇಕಾಗುತ್ತದೆ.

ಸಾಹಿತ್ಯದಲ್ಲಿ ಹಾಸ್ಯ, ರಸ ಪ್ರತಿಪಾದನೆ, ಸಹೃದಯತೆಯೆಂಬ ಮೌಲ್ಯಗಳ ಬದಲಾಗಿ ಹಿಂಸೆ, *thrilling* ಕಠೋರತೆಗಳು ನಮ್ಮ ಜನಜೀವನದ ಮೌಲ್ಯಗಳಾಗುವ ಅಪಾಯವಿರುವುದರಿಂದ ಗ್ರಾಮೀಣ ಜನರ ಜೀವನ ಬರ್ಬರವಾಗುತ್ತದೆ. ಇದು ನಮ್ಮ ಸೃಜನಶೀಲತೆಯ ಮೇಲೂ ತೀವ್ರ ಪರಿಣಾಮ ಬೀರುತ್ತದೆ.

ದಲಿತ-ಬಂಡಾಯದ ಹೆಸರಿನಲ್ಲಿ ಇಂದು ತಮ್ಮ ಸಂಸ್ಕೃತಿಯ ಬಗ್ಗೆ ಮಾತನಾಡುವ ಲೇಖಕರು ಮುಂದೆ, ತಮ್ಮ ಮೇಲಾಗುವ ಹಿಂಸೆಯನ್ನು, ತಮ್ಮಿಂದಾಗುವ ಅಪರಾಧಗಳನ್ನು ಕುರಿತು ಬರೆಯಬೇಕಾಗುತ್ತದೆ. ಮಾನವ ಚರಿತ್ರೆ ಇಂತಹ ಅನೇಕ ವಿಸಂಗತಿಗಳ ಸಂಗಮ ತಾನೆ! ಕಾದು ನೋಡೋಣ. ಮುಂದಿನ ಶತಮಾನದ ಹೃದಯವಂತರಿಗಾಗಿ, ಸಹೃದಯ ಪ್ರೇಕ್ಷಕ ವರ್ಗಕ್ಕಾಗಿ!

**ಎಲ್. ಹನುಮಂತಯ್ಯ**
ನಂ. ೨೮, ೭ನೇ ಮುಖ್ಯರಸ್ತೆ, ೫ನೇ ಕ್ರಾಸ್, ರಾಜಾಜಿನಗರ
ಕೈಗಾರಿಕಾನಗರ, ಬೆಂಗಳೂರು - ೫೬೦೦೧೦

## ಸಾದರ ಸ್ವೀಕಾರ

**ಪ್ರೌಢಶಾಲಾ ವಿಜ್ಞಾನ ಪ್ರಯೋಗಗಳು**
ಡಿ. ಆರ್. ಬಳೂರಗಿ
**ಪುಟ : ೫೨** **ಬೆಲೆ : ರೂ. ೪೫**
**ಓರಿಯಂಟ್ ಲಾಂಗ್‌ಮನ್**, 'ತಪೋವನ', ೪೬/೪೭, ರಾಮರಾವ್ ಲೇ ಔಟ್, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

**ಅಲ್ಲಮನ ವಚನ ಚಂದ್ರಿಕೆ**
ಸಂ. ಡಾ|| ಎಲ್. ಬಸವರಾಜು
**ಪುಟ : ೫೨೦** **ಬೆಲೆ : ರೂ. ೨೫೦**
**ಲೋಹಿಯಾ ಪ್ರಕಾಶನ**, ಗಾಂಧಿನಗರ, ಬಳ್ಳಾರಿ - ೫೮೩ ೧೦೩

**ಭೂಮಿಯೂ ಒಂದು ಆಕಾಶ** (ಕವನ ಸಂಕಲನ)
ಎಚ್. ಎಸ್. ವೆಂಕಟೇಶ ಮೂರ್ತಿ
**ಪುಟ : ೯೬** **ಬೆಲೆ : ರೂ. ೫೦**

**ಮಕ್ಕಳ ಮಂದಾರ** (ಪದ್ಯ ಸಂಕಲನ)
ಸಿ. ಎಂ. ಗೋವಿಂದ ರೆಡ್ಡಿ
**ಪುಟ : ೫೬** **ಬೆಲೆ : ರೂ. ೨೫**
*ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು :*
**ಲಿಪಿ ಪ್ರಕಾಶನ**, ನಂ. ೧ ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಪಾಂಚಾಲಿ** (ಕವನ ಸಂಕಲನ) ಕೆ. ಷರೀಫಾ
**ಪುಟ : ೬೬** **ಬೆಲೆ : ರೂ. ೩೦**
**ನಿಶಾಂತ್ ಪ್ರಕಾಶನ**, ಕೆ. ಷರೀಫಾ, ಎಪಿಎಂಸಿ., ಹರಿಹರ-೫೭೭ ೬೦೧

**ಮಿನಿ ಭಾಮಿನಿಯರ ನಡುವೆ** (ನಗೆ ಮಿಂಚುಗಳು)
ತುರುವೇಕೆರೆ ಪ್ರಸಾದ್
**ಪುಟ : ೧೧೨** **ಬೆಲೆ : ರೂ. ೪೫**

**ಹಕ್ಕಿ ಹೆಜ್ಜೆ** (ಕವನ ಸಂಕಲನ) ರೇಖಾ ಕುಂದಾರು
**ಪುಟ : ೫೨** **ಬೆಲೆ : ರೂ. ೨೫**
*ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು :*
**ನಗಿಸು ಪ್ರಕಾಶನ**, ಗಾಂಧಿನಗರ, ತುರುವೇಕೆರೆ - ೫೭೨ ೨೨೭

**ಸಂಬಂಧನ** (ಕವನ ಸಂಕಲನ)
ಬಸವರಾಜ ಬೂದಿಹಾಳ
**ಪುಟ : ೯೪** **ಬೆಲೆ : ರೂ. ೫೦**
**Hasiru Prakashana,**
32, Bhagavathi Housing colony,
Panchu Bhat-Mania, Kudatari-Sakete,
Goa - 403 709

**ಗಾಂಪ ಮಂಡಲ** (ನಗೆಬರಹಗಳು)
ವಿ. ಎನ್. ಲಕ್ಷ್ಮೀನಾರಾಯಣ
**ಪುಟ : ೪೪** **ಬೆಲೆ : ರೂ. ೨೦**
**ನುಡಿ ಪ್ರಕಾಶನ**, ಮೈಸೂರು

**ಚೌಕಟ್ಟಿನ ಜನ** (ಕವನ ಸಂಕಲನ)
ಡಾ|| ಎಸ್. ಪ್ರಸಾದಸ್ವಾಮಿ
**ಪುಟ : ೮೦** **ಬೆಲೆ : ರೂ. ೩೦**
**ಲಂಕೇಶ್ ಪ್ರಕಾಶನ**,
ನಂ. ೩೨, ಮಹಡಿ ಮನೆ, ಎಂ.ಎಸ್.ಆರ್. ನಗರ, ಮತ್ತೀಕೆರೆ, ಬೆಂಗಳೂರು-೫೪

**ಅಮರನಾಥ ಪ್ರವಾಸ** ಗುರುಮೂರ್ತಿ ಪೆಂಡಕೂರ
**ಪುಟ : ೧೦೨** **ಬೆಲೆ : ರೂ. ೫೦**
**ಯುವಕರ ಸಂಘ**, ರಾಮನಗರ, ಹಗರಿಬೊಮ್ಮನ ಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

**ಪ್ರಿನ್ಸಿಪಲ್ ಪರಶುರಾಂ** (ನಾಟಕ)
ಮೂಲ ಹಿಂದಿ : ಜ. ಜೆ. ಹರಿಜಿತ್
ಅನು : ಪ್ರೊ|| ಪಾರ್ವತಿ ಐತಾಳ್
**ಪುಟ : ೧೫೬** **ಬೆಲೆ : ರೂ. ೬೫**
**ಸಪ್ತಲಾ ಪ್ರಕಾಶನ**, ಬೆಂಗಳೂರು

**ಕನಸು ಅರಳುವ ಆಸೆ** (ಕವನ ಸಂಕಲನ)
ಮಂಡಲಗಿರಿ ಪ್ರಸನ್ನ
**ಪುಟ : ೬೮** **ಬೆಲೆ : ರೂ. ೩೦**
**ಸೌರಭ ಸಾಹಿತ್ಯ ಪ್ರಕಾಶನ**, ನಂ ೭೭, 'ಅಂಬಿಕಾ ನಿಲಯ', ವಿಜಯನಗರ ಕಾಲೋನಿ, ಆಳಂದ ರಸ್ತೆ, ಕಲಬುರ್ಗಿ - ೫೮೫ ೧೦೧

**ನಮ್ಮ ಪ್ರೀತಿ** (ಭಾವಗೀತೆಗಳು) ಬಿ. ಎ. ಸನದಿ
**ಪುಟ : ೫೮** **ಬೆಲೆ : ರೂ. ೩೦**
**Samatha Prakashana,** 1 - 303,
Gokul Heaven, Thakul Complex,
Kandivali (E) MUMBAI - 400 101

ಸೂಫಿ ಕಥೆ

# ನೀರಿನ ಮೇಲೆ ನಡೆದವನು

**ಸೂ**ಫಿ ಪಂಥಗಳಲ್ಲಿ ಅತ್ಯಂತ ಕಟ್ಟುನಿಟ್ಟಿನ ನೇಮಗಳಿಗೆ ಹೆಸರಾದ ಒಂದು ಒಳಪಂಗಡವಿತ್ತು. ತನ್ನ ಪಂಗಡಕ್ಕೆ ಸೇರಿದ ಸಂಪ್ರದಾಯಗಳನ್ನು ಚಾಚೂ ತಪ್ಪದಂತೆ ಅನುಸರಿಸುವ ನಿಷ್ಠಾವಂತನಾದ ಒಬ್ಬ ಸೂಫಿಯು ಅಂತಹ ಒಂದು ಗುಂಪಿನಲ್ಲಿದ್ದನು. ಸಂಪ್ರದಾಯಕ್ಕೆ ವಿರುದ್ಧವಾಗಿ ಏನೊಂದನ್ನೂ ಮಾಡುವ ಮನಸ್ಸು ಅವನದಾಗಿರಲಿಲ್ಲ. ಅಂತಹ ಪ್ರಯತ್ನವನ್ನು ಅವನು ಮಾಡಿದವನೂ ಅಲ್ಲ. ಸಾಮಾನ್ಯರಿಗೆ ಅರ್ಥವಾಗದ ನೀತಿಮೀಮಾಂಸೆ ಮತ್ತು ಜಿಜ್ಞಾಸೆಯೇ ಸೂಫಿ ತತ್ವಜ್ಞಾನ ಎಂಬ ಬಲವಾದ ನಂಬಿಕೆಯು ಆ ಪಂಗಡದ್ದಾಗಿತ್ತು. ಧರ್ಮ ಎಂದರೆ ಏನು ? ಭಾವಪರವಶತೆಯೇ ? ಆಡಂಬರದ ಆಚರಣೆಯೇ ? ಅಥವಾ ಪರಮಸತ್ಯದ ಹುಡುಕಾಟವೇ ? ಅವನ ದೃಷ್ಟಿಯಲ್ಲಿ ಇವೆರಡಕ್ಕೂ ವ್ಯತ್ಯಾಸವೇನೂ ಇರಲಿಲ್ಲ. ಆದರೂ ಈ ಜಿಜ್ಞಾಸೆಯಲ್ಲಿ ತಲ್ಲೀನಗೊಳಿಸಿಕೊಂಡ ಅವನು ಒಂದು ದಿನ ನದಿ ದಂಡೆಯ ಮೇಲೆ ನಡೆದುಹೋಗುತ್ತಿದ್ದನು.

ಇದ್ದಕ್ಕಿದ್ದಂತೆ ದೂರದಲ್ಲಿ ಯಾರೋ ಜೋರಾಗಿ ಕೂಗುತ್ತಿರುವ ಶಬ್ದವು ಅವನ ಕಿವಿಯ ಮೇಲೆ ಅಪ್ಪಳಿಸಿದಂತಾಯಿತು. ಇದರಿಂದ ಅವನ ಜಿಜ್ಞಾಸೆಯ ಪ್ರಣಾಲಿಯು ತುಂಡರಿಸಿದಂತಾಯ್ತು. ಯಾರೋ ಸೂಫಿ ಪ್ರಾರ್ಥನೆಯ ಉದ್ಘೋಷ ಮಾಡುತ್ತಿರುವುದು ಅವನ ಗಮನಕ್ಕೆ ಬಂತು. "ಈ ಪ್ರಯತ್ನವು ವ್ಯರ್ಥ. ಆ ಮನುಷ್ಯನಿಗೆ ಸರಿಯಾಗಿ ಉಚ್ಚಾರಣೆ ಮಾಡುವುದಕ್ಕೆ ಬರೋದಿಲ್ಲ. ಯ ಹು ಅನ್ನೋದನ್ನ ಉ ಯ ಹು ಎಂದು ಉಚ್ಚರಿಸುತ್ತಾನೆ. ಇದು ತಪ್ಪು ತಪ್ಪು" ಎಂದು ಅವನು ತನ್ನಲ್ಲೇ ಹೇಳಿಕೊಂಡ.

ನಾನು ಈ ವಿದ್ಯೆಯನ್ನು ಅತ್ಯಂತ ಪರಿಶ್ರಮದಿಂದ ಕಲಿತಿರುವವನು. ಅವನು ಪ್ರಾರ್ಥನೆಯನ್ನು ತಪ್ಪಾಗಿ ಉಚ್ಚರಿಸುತ್ತಿದ್ದಾನೆ. ಪಾಪ ! ನತದೃಷ್ಟ. ಸರಿಯಾದ ಶಿಕ್ಷಣ ಪಡೆಯುವ ಅವಕಾಶದಿಂದ ವಂಚಿತನಾಗಿರುವನು. ಅವನು ಮಾಡುತ್ತಿರುವ ತಪ್ಪನ್ನು ಮನವರಿಕೆ ಮಾಡಿಕೊಟ್ಟು ಅವನನ್ನು ತಿದ್ದುವುದು ನನ್ನ ಪಾಲಿನ ಕರ್ತವ್ಯವಾಗಿದೆ. ಅವನಿಗೆ ಬೇರಾವ ರೀತಿಯ ಸಹಾಯ ಮಾಡುವುದು ಸಾಧ್ಯವಾಗ ದಿದ್ದರೂ ಅವನು ಉಚ್ಚರಿಸುತ್ತಿರುವ ಶಬ್ದಗಳ ಅಂತರ್ಯ ದಲ್ಲಿ ಅಡಗಿರುವ ಸತ್ವದ ಬಗ್ಗೆ ಅವನಲ್ಲಿ ಅರಿವನ್ನು ಮೂಡಿಸುವ ಕೆಲಸವನ್ನಾದರೂ ಮಾಡಿದಂತಾಗುತ್ತದೆ ಎಂದುಕೊಂಡ.

ಆ ಉದ್ಘೋಷವು ನದೀಪಾತ್ರದ ಮಧ್ಯಭಾಗದ ಯಾವುದೋ ಪುಟ್ಟ ದ್ವೀಪದಿಂದ ಕೇಳಿಬಂದಂತಿತ್ತು. ಮೇಲಿನಂತೆ ಕರ್ತವ್ಯಪರವಶನಾದ ಅವನು ಒಂದು ದೋಣಿಯನ್ನು ಬಾಡಿಗೆಗೆ ಪಡೆದು ಅತ್ತ ಸಾಗಿದ.

ನದಿಯ ನಡುವೆ ಇದ್ದ ದ್ವೀಪದಂತಹ ಜಾಗವೊಂದರಲ್ಲಿ ಲಾಳದ ಕಡ್ಡಿಯ ಸೂರಿನ ಗುಡಿಸಲೊಂದಿತ್ತು. ದರ್ವೇಶಿ-ಸೂಫಿಯ ಉಡುಪು ಧರಿಸಿದ ವ್ಯಕ್ತಿಯೊಬ್ಬ ಕುಳಿತುಕೊಂಡು ಅದೇ ಶಬ್ದಗಳನ್ನು ಮತ್ತೆ ಮತ್ತೆ ಹಾಗೆಯೇ ಉಚ್ಚರಿಸುತ್ತಿದ್ದ. ನಮ್ಮ ಸೂಫಿಯು ಅವನನ್ನು ಸಂಬೋಧಿಸಿ ಹೀಗೆ ನುಡಿದ : "ಗೆಳೆಯನೇ, ನೀನು ಶಬ್ದಗಳನ್ನು ಸರಿಯಾಗಿ ಉಚ್ಚರಿಸುತ್ತಿಲ್ಲ. ನಿನ್ನನ್ನು ತಿದ್ದಬೇಕಾಗಿರುವ ಕರ್ತವ್ಯವು ಆದೇಶದಂತೆ ನನ್ನ ಪಾಲಿಗೆ ಬಂದಿದೆ. ಏಕೆಂದರೆ ಅರಿವು ನೀಡುವವನು ಮತ್ತು ಅರಿವು ಪಡೆಯುವವನು ಇಬ್ಬರೂ ಅದಕ್ಕೆ ಯೋಗ್ಯರಿದ್ದಾಗಲೇ ಇಂತಹ ಸಂಯೋಗವು ಸಾಧ್ಯ. ಆ ಶಬ್ದಗಳನ್ನು ಹೀಗೆ ಉಚ್ಚರಿಸಬೇಕು" ಎಂದು ಸ್ಫುಟವಾಗಿ ಉಚ್ಚರಿಸುವ ಕ್ರಮವನ್ನು ಅವನಿಗೆ ಹೇಳಿಕೊಟ್ಟ. ಆ ದರ್ವೇಶಿ-ಸೂಫಿಯು ವಿನಮ್ರತೆಯಿಂದ ವಂದಿಸಿದ.

ಮೊದಲನೆ ಸೂಫಿಯು ಮರಳಿ ದೋಣಿಯನ್ನು ಹತ್ತಿ ವಾಪಸು ಹೊರಟ. ಒಂದು ಸತ್ಕಾರ್ಯವನ್ನು ನೆರವೇರಿಸಿದ ಸಂತೃಪ್ತಿಯು ಅವನಿಗುಂಟಾಗಿತ್ತು. ಪವಿತ್ರವಾದ ಶಬ್ದಗಳನ್ನು ಸ್ಫುಟವಾಗಿ ಶುದ್ಧವಾಗಿ ಉಚ್ಚರಿಸಬಲ್ಲವನು ನೀರಿನ ಮೇಲೆ ಬೇಕಾದರೂ ನಡೆಯಬಲ್ಲ ಎಂದು ಗ್ರಂಥಗಳಲ್ಲಿ ಹೇಳಿಲ್ಲವೇ ! ಅದೆಂತಹ ಪವಾಡ ! ಅಂತಹ ಪವಾಡವನ್ನು ಅವನ ಜೀವಮಾನದಲ್ಲಿ ಎಂದೂ ಕಂಡಿರಲಿಲ್ಲ. ಆದರೂ ಅಂತಹದ್ದನ್ನು ಸಾಧಿಸಲು ಸದಾ ಪರಿತಪಿಸುತ್ತಿದ್ದ. ಕೆಲ ಹೊತ್ತಿನವರೆಗೆ ಉದ್ಘೋಷದ ಯಾವ ಶಬ್ದವೂ ಆ ಗುಡಿಸಲ ಕಡೆಯಿಂದ ಅವನ ಕಿವಿಯ ಮೇಲೆ ಬೀಳಲಿಲ್ಲ. ಅಂತೂ ತಾನು ಹೇಳಿಕೊಟ್ಟದ್ದು ಅವನ ಮನಸ್ಸಿನಲ್ಲಿ ನಾಟಿದಂತಾಯ್ತು. ಸಂದೇಹವಿಲ್ಲ ಎಂದುಕೊಂಡ.

ಸ್ವಲ್ಪ ಹೊತ್ತಿನ ನಂತರ ಉ ಯ ಎಂಬ ಉದ್ಘೋಷವು ಮತ್ತೆ ಕೇಳಿಬಂತು. ದರ್ವೇಶಿ-ಸೂಫಿಯು ತಡವರಿಸುತ್ತಾ ಈ ಶಬ್ದವನ್ನು ಉಚ್ಚರಿಸುತ್ತಿದ್ದ. ಉಚ್ಚಾರಣೆಯಲ್ಲಿ ಹಿಂದಿನ ದೋಷವೇ ಕಂಡುಬರುತ್ತಿತ್ತು. ಯಾವ ಬದಲಾವಣೆಯೂ ಆಗಿರಲಿಲ್ಲ......

ನಮ್ಮ ಸೂಫಿಯು ಇದನ್ನು ಕುರಿತು ಯೋಚಿಸತೊಡಗಿದ : ಮನುಷ್ಯನ ಮೊಂಡುತನಕ್ಕೆ ಏನು ಹೇಳುವುದು ? ತಪ್ಪು ಎಂದು ತಿಳಿಸಿ ಹೇಳಿದರೂ ತಿದ್ದಿಕೊಳ್ಳದ ಅವನ ವಿಕಾರಬುದ್ಧಿಗೆ ಏನು ಹೇಳಬೇಕು ? ಹೀಗೆ ಯೋಚಿಸುತ್ತಿರುವಂತೆಯೇ ಅತ್ಯಾಶ್ಚರ್ಯಕರ ದೃಶ್ಯವೊಂದು ಅವನ ಕಣ್ಣಿಗೆ ಬಿತ್ತು. ನದಿಯ ನಡುಗಡ್ಡೆಯಿಂದ ಆ ಸೂಫಿ ದರವೇಶಿಯು ಅವನತ್ತ ಬರುತ್ತಿದ್ದ. ನದಿಯ ಮೇಲೆ ನಡೆದುಕೊಂಡು.....

ಸೂಫಿಯು ನಿಬ್ಬೆರಗಾದ. ದೋಣಿಯ ಹುಟ್ಟು ಹಾಕುವುದು ನಿಂತಿತು. ಸೂಫಿ ದರ್ವೇಶಿಯು ನೇರವಾಗಿ ಅವನ ಬಳಿಗೆ ನಡೆದುಕೊಂಡು ಬಂದು : "ಸೋದರನೇ, ತೊಂದರೆ ಕೊಡುತ್ತಿದ್ದೇನೆ. ದಯವಿಟ್ಟು ಕ್ಷಮಿಸು. ನೀನು ಹೇಳಿಕೊಟ್ಟದ್ದನ್ನು ನೆನಪಿನಲ್ಲಿಟ್ಟುಕೊಳ್ಳುವುದು ಬಲು ಕಷ್ಟ. ನೀನು ಹೇಳಿಕೊಟ್ಟದ್ದನ್ನು ನೀನು ತೋರಿಸಿದ ಮಾದರಿಯಲ್ಲೇ ಸ್ಫುಟವಾಗಿ ನಿನ್ನ ಹಾಗೆಯೇ ಉಚ್ಚರಿಸುವುದು ಹೇಗೆ ಹೇಳಿಕೊಡು. ಅದಕ್ಕಾಗಿಯೇ ನಾನು ಈಗ ನಿನ್ನ ಬಳಿಗೆ ಬರಬೇಕಾಯಿತು," ಎಂದು ಹೇಳಿದ.

*(ಅಸ್ಸಾಸಿನ್ ಪಂಥಕ್ಕೆ ಸೇರಿದ ಕತೆ)*

ಕನ್ನಡಕ್ಕೆ : **ಬಿ. ಗಂಗಾಧರ ಮೂರ್ತಿ**
ಎ-೬೦೯, ಕುವೆಂಪು ನಗರ, ಗೌರಿಬಿದನೂರು - ೫೬೧ ೨೦೮

## ಗಾಂಧಿ-ಮಗು





"ತಾತ ತಾತ ! ನನ್ನನೇಕೆ
ಹಾಗೆ ನೋಡುತಿರುವೆ ?"
"ಮುದ್ದು ಮಗುವೆ ನಿನ್ನ ಮುಗ್ಧ
ನಗೆಗೆ ಮಾರುಹೋಗಿಹೆ."
"ತಾತ ತಾತ ! ನಿನ್ನ ವೇಷ
ಏಕೆ ಸರಳವಾಗಿದೆ ?"
"ಪುಟ್ಟ ಮಗುವೆ, ಭರತಮಾತೆ
ಪುತ್ರರೆಲ್ಲ ಬಡವರೇ."
"ತಾತ ತಾತ ! ನೀನು ಏಕೆ
ಚರಕ ಹಿಡಿದು ತಿರುವಿದೆ ?"
"ಸ್ವಾವಲಂಬಿ ದೇಶವಾಗೆ
ಹತ್ತಿನೇಯ್ಗೆ ಮಾಡಿದೆ."
"ಗಾಂಧಿ ತಾತ ! ಗಾಂಧಿ ತಾತ !
ಬಂಧಿಯಾದೆ ಏತಕೆ ?"
"ಮಾತೆಯನ್ನು ಮುಕ್ತಗೊಳಿಸೆ
ಸೆರೆಮನೆಯನು ಸೇರಿದೆ."
"ಬಾಪು ಬಾಪು ನಿನ್ನ ಬಾಳ
ಮಂತ್ರವದನು ತಿಳಿಸೆಯಾ ?"
"ಸತ್ಯ ಶಾಂತಿ ಮಾರ್ಗ ನಡೆಯೆ
ಸರ್ವರುದಯ ತಿಳಿಯೆಯಾ ?"

ಬಿ. ಚೆನ್ನಬಸವಯ್ಯ
ದೊಡ್ಡ ಎಣ್ಣೇಗೆರೆ, ಚಿಕ್ಕನಾಯ್ಕನ ಹಳ್ಳಿ, ತುಮಕೂರು ಜಿಲ್ಲೆ

# ಸಮಾಜ ಸೇವಕ ಎಂಕಟದಾಸ

ಪ್ರಿಯ ಯಜಮಾನಪ್ಪನವರಿಗೆ ನಮಸ್ಕಾರಗಳು.

ಕಳೆದ ವಾರ ಗುಲ್ಲೂರಿಗೆ ಹೋಗಿದ್ದೆ. ಅಕಸ್ಮಾತ್ ನಮ್ಮೂರ ಎಂಕಟದಾಸ ಸಿಕ್ಕಿದ. ಆತನನ್ನು ನೋಡಿ ಎಷ್ಟೋ ವರ್ಷವಾಗಿತ್ತು. ಗೊಂದಲಪುರದಿಂದ ಕೆಟ್ಟು ಪಟ್ಟಣ ಸೇರಿದ್ದ ಎಂಕಟದಾಸನ ಪತ್ತೆಯೇ ಇರಲಿಲ್ಲ. ಬದುಕುವ ಛಾತಿ ಇರುವವನು ಎಂದುಕೊಂಡು ನಾವು ತೆಪ್ಪಗಿದ್ದೆವು. ಎಂಕಟದಾಸ ಸಿಕ್ಕಿದ್ದರಿಂದ ನನಗಾದ ಸಂತೋಷ ಅಷ್ಟಿಷ್ಟಲ್ಲ.

ಗುಲ್ಲೂರಿನಂಥ ದೊಡ್ಡ ಪಟ್ಟಣದಲ್ಲಿ ಕಳೆದು ಹೋಗದೆ, ಎಂಕಟದಾಸನೆಂಬ ಪಾಕಡಾ ಗೊಂದಲಪುರದ ಕೀರ್ತಿ ಹಬ್ಬಲೂ ಕಾರಣವಾಗಿದ್ದಾನೆ.

ಮೊದಲಿಗೆ ಅವನಿದ್ದ ಬಡಾವಣೆಯಲ್ಲಿ ಗೃಹಿಣಿಯರಿಗೆ, ವೃದ್ಧೆಯರಿಗೆ ಸಣ್ಣಪುಟ್ಟ ಸಹಾಯ ಮಾಡುವುದರೊಂದಿಗೆ ಆತನ ಸಮಾಜಸೇವೆ ಪ್ರಾರಂಭವಾಯಿತಂತೆ. ಪ್ರತಿ ತಿಂಗಳು ಕರೆಂಟ್ ಬಿಲ್ ಕಟ್ಟಲು ತಿಣುಕಾಡುವ ನಿವೃತ್ತರ ಮನಸ್ಸು ಗೆದ್ದನಂತೆ. ಬಡಾವಣೆಯ ಮಕ್ಕಳ ಪಾಲಿಗೆ ಪ್ರೀತಿಯ ಅಂಕಲ್ ಆದನಂತೆ. ಆಗ ಆತನದೇ ಪ್ರಾಯದ ಮತ್ತೆ ಕೆಲವು ಉಂಡಾಡಿಗಳು ಎಂಕಟದಾಸನ ನೇತೃತ್ವ ಒಪ್ಪಿಕೊಂಡರಂತೆ. ಮುಂದೆ 'ನಿರ್ಮಲ ಬಡಾವಣೆ'ಯ ಆಂದೋಳನ ಪ್ರಾರಂಭಿಸಿದರಂತೆ. ಜನರಲ್ಲಿ ಜಾಗೃತಿ ಮೂಡಿಸಲು ಬೀದಿ ನಾಟಕ ಆಡಿದರಂತೆ. ಮನೆಯ ಮುಂದೆ ಬೇಕಾಬಿಟ್ಟಿ ಕಸ ಎಸೆಯುವ, ಮಕ್ಕಳನ್ನು ಬೀದಿ ಬೀದಿಯಲ್ಲಿ ಕುಳ್ಳಿರಿಸಿ ಎಲ್ಲರ ಮನೆಯ ದೋಸೆಯಲ್ಲಿ ತೂತು ಹುಡುಕುವ ಗೃಹಿಣಿಯರು ಪಟಾಲಮಿನ ಕೈಗೆ ಸಿಕ್ಕಿ ಬೀಳದಂತೆ ಎಚ್ಚರಿಕೆ ವಹಿಸುವಂತಾಯಿತಂತೆ. ಅಕಸ್ಮಾತ್ ಯಾರಾದರೂ ತಪ್ಪಿ ಬೀದಿಗೆ ಕಸ ಎಸೆದರೆ, ಪಟಾಲಂ ಅದನ್ನು ತಿಪ್ಪೆಗೆ ಸಾಗಿಸಿ ಸಮಾಜದ ಮೇಲೆ ಸೇಡು ತೀರಿಸಿಕೊಳ್ಳುತ್ತಿತ್ತಂತೆ !

ಎಂಕಟದಾಸನ ಸಮಾಜಸೇವೆ ಕವಲೊಡೆಯಿತಂತೆ. ಕನ್ನಡ ರಾಜ್ಯೋತ್ಸವ ಮತ್ತು ಗಣೇಶನ ಹಬ್ಬದ ಸಂದರ್ಭಗಳಲ್ಲಿ ಎಂಕಟದಾಸನ ಚಂದಾ ವಸೂಲಿಯ ಚೆಂದ ವರ್ಣನೆಗೆ ನಿಲುಕದಾಯಿತಂತೆ. ಆತನ ನೇತೃತ್ವದಲ್ಲಿ ಉತ್ಸವಗಳು ವಿಜೃಂಭಣೆಯಿಂದ ನಡೆದು, ಜನರು ಮೈಕಾಸುರನ ಹಾವಳಿಯಿಂದ ತಪ್ಪಿಸಿಕೊಳ್ಳಲು ಕಿವಿಗಳಿಗೆ ಬೆಣೆ ಹಾಕಿಕೊಳ್ಳುತ್ತಿದ್ದರಂತೆ ! ಅಂಥ ಸಂದರ್ಭದಲ್ಲಿಯೇ ಆರ್ಕೆಸ್ಟ್ರಾದೊಂದಿಗೆ ಹಾಡಲು ಬಂದ ಪೀಚಲು ಹುಡುಗಿಯೊಂದಿಗೆ ಎಂಕಟದಾಸನಿಗೆ ಮೊದಲ ನೋಟದಲ್ಲೇ ಪ್ರೇಮ ಅಂಕುರಿಸಿತಂತೆ !

ನೆರೆಹಾವಳಿ, ಬರಗಾಲ, ಭೂಕಂಪದಂಥ ಪ್ರಕರಣಗಳಲ್ಲಿ 'ಎಂಕಟದಾಸ ಪಟಾಲಂ' ಸೇವೆಗೆ ಟೊಂಕ ಕಟ್ಟಿಕೊಂಡು ನಿಂತಿರುತ್ತದಂತೆ. ಇತ್ತೀಚಿನ ಗುಜರಾತ್ ಭೂಕಂಪದ ಸಂದರ್ಭದಲ್ಲಿ ಪಟಾಲಂ ಅತ್ಯಂತ ಹುರುಪಿನಿಂದ ಸೇವಾ ಕಾರ್ಯದಲ್ಲಿ ತೊಡಗಿ ಜನರಿಂದ ಸಾಕಷ್ಟು ಹಣ, ಬಟ್ಟೆ ಬರೆ ಸಂಗ್ರಹಿಸಿತಂತೆ. ಪಟಾಲಮಿನ ಸೇವೆ ಗುಜರಾತಿನ ಯಾವ ಮೂಲೆಗೆ ತಲುಪಿತು ಎಂಬ ಬಗ್ಗೆ ಮಾಹಿತಿ ಬರಬೇಕಾಗಿದೆಯಂತೆ.

ಅಷ್ಟು ಮಾತ್ರವಲ್ಲದೆ, ಮತ್ತಷ್ಟು ದಿಢೀರ್ ಹಣವಂತನಾಗಲೂ ಯೋಜನೆ ಹಾಕಿದ್ದಾನಂತೆ. ಯಾವುದಾದರೂ ಪಾಳು ಜಾಗದಲ್ಲಿ ರಾತ್ರೋರಾತ್ರಿ ಒಂದು ದೇವಸ್ಥಾನ ಕಟ್ಟುವುದು. ಆ ದೇವರು ಯಾರೂ ಆಗಿರಬಹುದು. ಆದರೆ ಆತನ ಅಪಾರ ಮಹಿಮೆಯನ್ನು ಪ್ರಚಾರಗೊಳಿಸಲು ಸಾಕಷ್ಟು ಭಕ್ತರನ್ನು ನೇಮಿಸುವುದು. ಮಾತುಬಾರದವನೊಬ್ಬನನ್ನು ಪೂಜಾರಿ ಮಾಡುವುದು. ಎಂಕಟದಾಸನೇ ದೇವಸ್ಥಾನದ ಮೊಕ್ತೇಸರ ! ಏನು ತಲೆ !



ಈ ಮಧ್ಯೆ ಎಂಕಟದಾಸನ ಸೇವೆಯನ್ನು ಸಹಿಸದ ಕೆಲವರು ಆತನ ಬಗ್ಗೆ ನಿರಾಧಾರ ಸುಳ್ಳು ವದಂತಿ ಹರಡತೊಡಗಿದ್ದಾರಂತೆ. ಇವರಲ್ಲಿ ಪಟಾಲಮಿನ ಕೆಲವು ಅತೃಪ್ತರ ಕೈವಾಡವೂ ಇದೆಯೆಂದು ಎಂಕಟದಾಸನ ಅನುಮಾನವಂತೆ. ರಾಜ್ಯೋತ್ಸವ, ಗಣೇಶನ ಹಬ್ಬಕ್ಕೆಂದು ವಸೂಲು ಮಾಡುವ ಹಣದ ಮುಕ್ಕಾಲು ಪಾಲನ್ನು ಎಂಕಟದಾಸನೇ ಗುಳುಂ ಮಾಡುತ್ತಾನಂತೆ. ಗುಜರಾತ್ ಸಂತ್ರಸ್ತರಿಗೆಂದು ಸಂಗ್ರಹಿಸಿದ ಬಟ್ಟೆಬರೆಗಳನ್ನು ಹಳೆಬಟ್ಟೆ ವ್ಯಾಪಾರಿಗೆ ಮಾರಿ ಇಡೀ ಹಣವನ್ನು ಆತ ಜೇಬಿಗಿಳಿಸಿದನಂತೆ. ಅಷ್ಟೇಕೆ, ಎಂಕಟದಾಸ ಸಮಾಜಸೇವೆ ಮಾಡಿ ಸ್ವಂತ ಮನೆ ಕಟ್ಟಿಸಿರುವುದಲ್ಲದೆ ಇತ್ತೀಚೆಗೆ ಅದಕ್ಕೊಂದು ಮಹಡಿಯನ್ನು ಏರಿಸಿದ್ದಾನಂತೆ !

ಎಲ್ಲ ಅಂತೆ ಕಂತೆ ! ಗೊಂದಲಪುರದ ಈ ಹೈದನ ಏಳ್ಗೆಯನ್ನು ಸಹಿಸದ ಕೆಲವರು ಹೀಗೆ ಹೊಟ್ಟೆ ಉರಿದುಕೊಳ್ಳಬಹುದು. ಆದರೆ, ಗೊಂದಲಪುರದವರಾದ ನಾವು ನಮ್ಮೂರ ಹೈದನ ಮೇಲೆ ಸುಳ್ಳು ಆರೋಪ ಹೊರಿಸುವುದನ್ನು ನೋಡುತ್ತ ಸುಮ್ಮನಿರಬಹುದೆ ?

ಯಜಮಾನಪ್ಪನವರೇ, ಇಂಥ ಕಿರಿಯ ಸಮಾಜ ಸೇವಕನ ಬಗ್ಗೆ ನಿಮ್ಮ ಪತ್ರಿಕೆಯಲ್ಲಿ ಸ್ವಲ್ಪ ಹೊಗಳಿ ಪ್ರಕಟಿಸಿ, ನಮ್ಮೂರ ಹೈದನ ಕೀರ್ತಿ ಇನ್ನೂ ಹೆಚ್ಚುವಂತೆ ಸಹಕರಿಸಬೇಕಾಗಿ ವಿನಂತಿ.

ನಮ್ಮೂರ ಕಡೆ ಮಳೆಯ ಸುಳಿವಿಲ್ಲ.

*- ಬೀರಣ್ಣ , ಗೊಂದಲಪುರ*



# ಯೋಗಪ್ರವೇಶ-೨೧

ಜಿ. ರಾಮಕೃಷ್ಣ

ಏಕಾಗ್ರತೆಯನ್ನು ಬೆಳೆಸಿಕೊಳ್ಳಲು ಧ್ಯಾನವು ಒಂದು ಉಪಯುಕ್ತ ಪದ್ಧತಿಯೆಂದು ಹಿಂದೆಯೇ ಚರ್ಚಿಸಿದ್ದೇವೆ. ಆ ಸಂಬಂಧದಲ್ಲಿ ಬಂಧಗಳ ಪ್ರಸ್ತಾಪ ಮಾಡಲಿಲ್ಲ. ಆಸನಗಳನ್ನು ಸ್ಥೂಲವಾಗಿ ವಿವರಿಸಿಯಾದ ಮೇಲೆ ಈಗ ಅದರತ್ತ ದೃಷ್ಟಿ ಹೊರಳಿಸೋಣ.

ಉಡ್ಡಿಯಾನ, ಜಾಲಂಧರ, ಮೂಲ ಮತ್ತು ಜಿಹ್ವಾ ಬಂಧಗಳು ಯೋಗಾಭ್ಯಾಸದಲ್ಲಿ ಸಾಕಷ್ಟು ಪ್ರಮುಖ ಪಾತ್ರಗಳನ್ನು ನಿರ್ವಹಿಸುತ್ತವೆ. ಉಡ್ಡಿಯಾನವು ವಪೆ ಮತ್ತು ಪಕ್ಕೆಲುಬುಗಳಿಗೆ ವ್ಯಾಯಾಮ ಒದಗಿಸುತ್ತದೆ. ಅದನ್ನು ಕುಳಿತು ಅಥವಾ ನಿಂತು ಮಾಡಬಹುದು. ಕೈಗಳನ್ನು ಮಂಡಿಗಳ ಅಥವಾ ತೊಡೆಯ ಮೇಲಿರಿಸುವುದರಿಂದ ಒತ್ತಡ ಹೇರುವುದು ಸುಲಭ. ಹೊಟ್ಟೆಯನ್ನು ಒಳಕ್ಕೆ ಎಳೆದುಕೊಂಡು ಎಷ್ಟು ಸಾಧ್ಯವೋ ಅಷ್ಟು ಉಸಿರನ್ನು ಹೊರಬಿಡುವುದು ಅಗತ್ಯ. ಅಂದರೆ, ಮೊದಲಿಗೆ ಹೊಟ್ಟೆಯ ಮುಂಭಾಗದ ಮಾಂಸಖಂಡಗಳಿಗೆ ವ್ಯಾಯಾಮ. ಎದೆಯೂ ಸ್ವಲ್ಪ ಕುಗ್ಗಿದಂತಾಗುತ್ತದೆ. ಈಗ ಕುತ್ತಿಗೆಯ ಮತ್ತು ಭುಜಗಳ ಮಾಂಸಖಂಡಗಳನ್ನು ಗಡುಸಾಗಿಸಿ, ಉಸಿರನ್ನು ಒಳಕ್ಕೆ ತೆಗೆದುಕೊಳ್ಳುತ್ತಿದ್ದೇವೋ ಎಂಬಂತೆ (ಅಂದರೆ ನಿಜಕ್ಕೂ ಉಸಿರನ್ನು ಒಳತೆಗೆದುಕೊಳ್ಳುವುದಿಲ್ಲ) ಪಕ್ಕೆಲುಬುಗಳನ್ನು ಮೇಲಕ್ಕೆ ಸೆಳೆದುಕೊಳ್ಳಬೇಕು. ಜೊತೆಜೊತೆಗೆ, ಹೊಟ್ಟೆಯ ಮುಂಭಾಗದ ಮಾಂಸಖಂಡಗಳನ್ನು ಸಂಪೂರ್ಣವಾಗಿ ಸಡಿಲಿಸಬೇಕು. ಒಟ್ಟಿನಲ್ಲಿ ಮೂರು ಕ್ರಿಯೆಗಳು : ಕುತ್ತಿಗೆ - ಭುಜಗಳ ಗಡುಸಾಗುವಿಕೆ, ಉಸಿರಾಟವಿಲ್ಲದ ಉಸಿರು ತೆಗೆದುಕೊಳ್ಳುವುದು, ಮತ್ತು ಹೊಟ್ಟೆಯ ಮಾಂಸಖಂಡಗಳ ಸಡಿಲಿಸುವಿಕೆ.

ಉಡ್ಡಿಯಾನ ಬಂಧವನ್ನು ಕುರಿತಂತೆ ಶರೀರಶಾಸ್ತ್ರದ ದೃಷ್ಟಿಯಿಂದ ಸ್ವಾಮಿ ಕುವಲಯಾನಂದರು ನೂರಾರು ಪ್ರಯೋಗಗಳನ್ನು ನಡೆಸಿದ್ದಾರೆ, ಹತ್ತಾರು ಎಕ್ಸ್-ರೇ ಅಧ್ಯಯನಗಳನ್ನು ಮಾಡಿದ್ದಾರೆ. ಅವರ ಪ್ರಯೋಗಗಳಿಂದ ಸಿದ್ಧವಾಗಿರುವಂತೆ ಈ ಬಂಧದಿಂದ ವಪೆಯು ಸಹಜವಾಗಿ, ಅಪ್ರಯತ್ನಪೂರ್ವಕವಾಗಿ, ಮೇಲಕ್ಕೆ ಎತ್ತಿದಂತಾಗುತ್ತದೆ. ಅದರಿಂದ ಹೊಟ್ಟೆಯಲ್ಲಿ ಗಮನಾರ್ಹವಾದ ಕುಗ್ಗುವಿಕೆ ಕಂಡುಬರುತ್ತದೆ. ಮುಂದಕ್ಕೆ ಸ್ವಲ್ಪ ಬಾಗಿ ಕುಳಿತರೆ ಅಥವಾ ನಿಂತರೆ ಈ ಕುಗ್ಗುವಿಕೆಯು ಚೆನ್ನಾಗಿ ತೋರ್ಪಡುತ್ತದೆ. ಇನ್ನು ಉಸಿರನ್ನು ತಡೆಹಿಡಿಯುವುದು ವಿಪರೀತ ಶ್ರಮವಾಗುತ್ತದೆ ಎನಿಸಿದಾಗ ಕುತ್ತಿಗೆ - ಭುಜಗಳನ್ನು ಸಡಿಲಿಸಿ, ಪಕ್ಕೆಲುಬುಗಳನ್ನು ಕೆಳಕ್ಕಿಳಿಸಿ, ನಿಧಾನವಾಗಿ ಉಸಿರಾಟ ಆರಂಭಿಸಬಹುದು. ಹೊಟ್ಟೆಯ ಕುಗ್ಗುವಿಕೆಯು ಕ್ರಮೇಣ ಸಹಜ ಸ್ಥಿತಿಗೆ ಬರುತ್ತದೆ. ಹೀಗೆ ಮೂರು - ನಾಲ್ಕು ಬಾರಿ ಉಡ್ಡಿಯಾನ ಬಂಧವನ್ನು ಅಭ್ಯಾಸ ಮಾಡಬಹುದು. 'ಉಡ್ಡಿಯಾನ'ವೆಂದರೆ ಮೇಲಕ್ಕೆತ್ತುವುದು (ಪಕ್ಕೆಲುಬು ಮತ್ತು ವಪೆಯನ್ನು), 'ಬಂಧ' ಎಂದರೆ ಶರೀರದ ನಿಗದಿತವಾದ ಅಂಗಾಂಗಗಳನ್ನು ಕುಗ್ಗಿಸಿ ಅಥವಾ ಸಂಕುಚಿಸಿ ಹಿಡಿಯುವುದು ಎಂದರ್ಥ.





ಉದರೇ ಪಶ್ಚಿಮಂ ತಾನಂ ನಾಭೇರೂರ್ಧ್ವಂ ಚ ಕಾರಯೇತ್ ।
ಉಡ್ಡೀಯಾನೋ ಹ್ಯಸೌ ಬಂಧೋ ಮೃತ್ಯು ಮಾತಂಗಕೇಸರೀ ॥

– ಇದು ಹಠಪ್ರದೀಪಿಕೆಯು (೩.೫೭) ಈ ಬಂಧವನ್ನು ವಿವರಿಸಿರುವ ಕ್ರಮ.

ಮಲಬದ್ಧತೆ, ಪಿತ್ತಜನಕಾಂಗದ ತೊಂದರೆ ಮುಂತಾದುವಕ್ಕೆ ಇದು ಸಿದ್ಧೌಷಧವೆನ್ನುತ್ತಾರೆ. ರಕ್ತಸಂಚಾರದಲ್ಲಿ ಮುಗ್ಗಟ್ಟಿರುವವರು ಹಾಗೂ ಉದರಬಾಧೆ ಇರುವವರು ಇದನ್ನು ಅಭ್ಯಾಸ ಮಾಡದಿರುವುದು ಲೇಸು. ಬೇಕಾದಷ್ಟು ನೀರು ಕುಡಿದು ಅದನ್ನು ಸತತವಾಗಿ ಸಣ್ಣ ಹೊಳೆಯಂತೆ ಹೊರತರಲು ಈ ಬಂಧವು ಸಹಕಾರ ನೀಡುತ್ತದೆ. ಅಂತೆಯೇ ಬಾಯಿ ಮೂಲಕ ಒಂದು ಸಣ್ಣ ಪೈಪನ್ನು ಹೊಟ್ಟೆಯವರೆಗೆ ಇಳಿಸಿ ಉಡ್ಡಿಯಾನ ಬಂಧ ಮಾಡಿದರೆ ಒಳಗಿನ ನೀರು, ಪಿತ್ತ ಮುಂತಾದವೆಲ್ಲಾ ನಿಧಾನವಾಗಿ ಹೊರಬರುತ್ತವೆ. ಗುದದ್ವಾರದ ಮೂಲಕ ಪೈಪನ್ನು ತೂರಿಸಿಕೊಂಡು ಪೈಪಿನ ಹೊರತುದಿಯನ್ನು ನೀರಿನಲ್ಲಿರಿಸಿ ಉಡ್ಡಿಯಾನ ಬಂಧ ಮಾಡಿದರೆ ನೀರು ಒಳಹೋಗುತ್ತದೆ. ಗುದನಾಳವನ್ನು ಸ್ವಚ್ಛಗೊಳಿಸಲು ಇದರ ಅಭ್ಯಾಸ ಮಾಡುವುದುಂಟು. ಅದನ್ನು 'ಶಂಖ ಪ್ರಕ್ಷಾಳನ' ಎನ್ನುತ್ತಾರೆ. ಒಟ್ಟಿನಲ್ಲಿ, ಉಡ್ಡಿಯಾನ ಬಂಧದಿಂದ ಹೊಟ್ಟೆಯಲ್ಲಿ ಒತ್ತಡವನ್ನು ಹೆಚ್ಚು-ಕಮ್ಮಿ ಮಾಡಲು ಸಾಧ್ಯವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ವಪೆಯ ಕೆಳಭಾಗದಲ್ಲಿ ಶೂನ್ಯತೆ ಉಂಟಾಗುತ್ತದೆಂದು ಕುವಲಯಾನಂದರ ಅನೇಕ ಪ್ರಯೋಗಗಳಿಂದ ಸಾಧಿಸಲಾಗಿದೆ. ಅವರ ಗುರುಗಳ ಗೌರವಾರ್ಥ ಅದನ್ನವರು 'ಮಾಧವದಾಸ್ ವ್ಯಾಕ್ಯೂಮ್' ಎಂದು ಕರೆದಿದ್ದಾರೆ. ಯೋಗ-ಪ್ರಯೋಗಶಾಸ್ತ್ರದ ಶಾಖೆಯಲ್ಲಿ ಅದೇ ಹೆಸರು ಬಳಕೆಯಲ್ಲಿದೆ.

ಮಿಕ್ಕ ಮೂರು ಬಂಧಗಳನ್ನು ಮುಂದಿನ ಭಾಗದಲ್ಲಿ ಪರಿಚಯಿಸಿಕೊಳ್ಳೋಣ.



# ದೇಶಪ್ರೇಮ.... ವಾರಸುದಾರರು...?

'ರಾಜ್ಯ ವ್ಯವಸ್ಥೆ' 'ಪೊಲೀಸು ವ್ಯವಸ್ಥೆ' ಮನುಷ್ಯನ ಮೂಲಭೂತ ಅಗತ್ಯಗಳಲ್ಲ, ವರ್ಗಹಿತಾಸಕ್ತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಪರಿಕಲ್ಪನೆಗಳು ರಕ್ಷಣಾ ತಂತ್ರಗಳಷ್ಟೇ ! ಕೂಡಿ ದುಡಿಯುವುದರ ಮೂಲಕ, ಪರಸ್ಪರ ವಿನಿಮಯದ ಮೂಲಕ ಬಗೆಹರಿಯುತ್ತಿದ್ದ ಸಮಸ್ಯೆ - ಸರಕುಗಳೆಲ್ಲಾ 'ಪ್ರಭುತ್ವ' ರಚನೆಯ ಮೂಲಕ ನಿರ್ದಿಷ್ಟ ಚೌಕಟ್ಟಿಗೆ ಒಳಪಟ್ಟದ್ದು ಕಾಲಾನಂತರದಲ್ಲಿ! ಇದು ದೈಹಿಕವಾಗಿ ದುರ್ಬಲವಾದ ವ್ಯಕ್ತಿಯನ್ನು ಅತ್ಯಂತ ಬಲಿಷ್ಠಗೊಳಿಸುವ ಉದ್ದೇಶವನ್ನು ಹೊಂದಿರುವುದಲ್ಲದೆ ಬೌದ್ಧಿಕ ಕೀಳರಿಮೆಯನ್ನು ಪುಕ್ಕಟೆಯಾಗಿ ಹಂಚುವ ಕೆಲಸ, ಪ್ರಯತ್ನವನ್ನು ಭ್ರಮೆಯ ಮೂಲಕ ಕೆಳವರ್ಗದ ಜನರಲ್ಲಿ ಕಾಲಕಾಲಕ್ಕೆ ಮೂಡಿಸುವ ಆಶಯವನ್ನು ಹೊಂದಿದೆ. 'ಜೋಳವಾಳಿ (ಅನ್ನದ ಋಣ) 'ಸೈನಿಕ ನಿಷ್ಠೆ' 'ವಿಧೇಯಕತನ'ವನ್ನು ಪದೇ ಪದೇ ಮೌಲ್ಯವೆಂದು ಸಾರಿ ದುಡಿಯುವ ವರ್ಗದಲ್ಲಿ 'ಉಸಿರಾಗಿಸಿ', ತಾವು ಸುರಕ್ಷಿತವಾಗಿ ಉಳಿದುಕೊಂಡ ನಿದರ್ಶನಗಳನ್ನು ನಮ್ಮ ಚರಿತ್ರೆಯ ಪುಟ ಪುಟಗಳಲ್ಲಿ ಕಾಣಬಹುದು. ಸತ್ತ ನಂತರ ಸೇವಕನ ಹೆಸರಿನಲ್ಲಿ ನೆಡುವ 'ವೀರಗಲ್ಲು'ಗಳು ಇಲ್ಲವೆ 'ಜೀವಂತ ಗೋರಿ'ಗಳನ್ನು ಚಿತ್ತಾರ ಮಾಡಿ ಆರಾಧನೆಗೆ ಒಳಪಡಿಸುವಲ್ಲಿ ಸೇವಾ ಪರಂಪರೆಯನ್ನು ಗಟ್ಟಿಗೊಳಿಸುವ ತಂತ್ರವಿದೆ'. 'ಯುದ್ಧ ಮತ್ತು ಶಾಂತಿ' ಇವೆರಡೂ ರಾಜ್ಯ ನಿರ್ಮಾಣದ ಪೋಷಕ ಅಂಶಗಳು. ಸೀಮಾರೇಖೆಯ ವಿಸ್ತರಣೆ, ಸೈನಿಕ ರಚನೆ, ವೈವಾಹಿಕ ಸಂಬಂಧಗಳು, ಇವೆಲ್ಲವೂ ವ್ಯಕ್ತಿಯ ಮಹತ್ವಾಕಾಂಕ್ಷೆಯ, ಶೋಷಣೆಯ, ಅಭದ್ರತೆಯ ಸಂಕೇತಗಳು. ಈ ಕಾರಣಕ್ಕಾಗಿ ನಮ್ಮಲ್ಲಿ ದಾಖಲಾದ 'ಸುವರ್ಣಯುಗ'ಗಳೆಲ್ಲವೂ ದಟ್ಟವಾದ ಕತ್ತಲೆಯ ಯುಗಗಳು ಎನ್ನುವ ಅನುಮಾನ ನಮಗೆ. ಆಯಾಕಾಲದ ಮೇಲುಸ್ತರದ ಧಾರ್ಮಿಕತೆ, ಆರ್ಥಿಕತೆಯನ್ನು ಮಾಪನವನ್ನಾಗಿಟ್ಟುಕೊಂಡು ಬಣ್ಣಿಸುವ ಸುವರ್ಣ ಲೇಪನದ ಮಾತುಗಳು ಇಡಿಯಾಗಿ 'ಮನುಷ್ಯ ಚರಿತ್ರೆ'ಯನ್ನು ಕಟ್ಟಿಕೊಡಲಾರವು. ಸಾವಿನಲ್ಲಿ, ನಿಯತ್ತಿನಲ್ಲಿ, ಸೇವೆಯಲ್ಲಿ ಸ್ವರ್ಗವನ್ನು ತೋರಿದ, ಕೆತ್ತಿದ ನಮ್ಮ ಪ್ರಭುಗಳು ಸತ್ತದ್ದು ಸೈನಿಕನ ನಂತರವೇ ! ಇದಕ್ಕೆ ಹೊರತಾದವರೆಂದರೆ ಅಹಿಂಸೆ, ವೈರಾಗ್ಯದ ಮೂರ್ತಿಗಳಾದ ಭರತ-ಬಾಹುಬಲಿಯರು ಮಾತ್ರ !

ನಮ್ಮ ಸಮಾಜ ಸಾಮಾನ್ಯನ ಕಾಯಕವನ್ನು ಸದಾ ಗೌರವಿಸದೇ ಅವನಿಗೆ 'ಕರ್ಮಸಿದ್ಧಾಂತ', 'ಜನ್ಮಾಂತರ', 'ವಿಧಿನಿಯಮ'ದ ನಂಬಿಕೆಯನ್ನು ಹುಟ್ಟಿಸಿ, ಮರಣದಲ್ಲಿ ಸುಖವಿದೆ ಎನ್ನುವ ಭಾವನೆಯನ್ನು ಮೂಡಿಸಿದ್ದು ಯಾವ ಕಾರಣಕ್ಕಾಗಿ ?

ದೇಶಪ್ರೇಮ, ದೇಶಭಕ್ತಿ ಎನ್ನುವ ಮೌಲ್ಯಗಳನ್ನು ಸಾಮಾನ್ಯನ ಹೃದಯದಲ್ಲಿಟ್ಟು, ಅದನ್ನು ಮೇಲಂಗಿಯನ್ನಾಗಿಸಿಕೊಂಡು, ಬೇಕಾದಾಗ ಹಾಕಿಕೊಳ್ಳುವುದು, ಬೇಡವಾದಾಗ ಕೊಡವಿಹಾಕುವುದು, ಇಲ್ಲವೆ ಸೀಜನ್‌ಗೆ ತಕ್ಕಂತೆ ಸುಲಭವಾಗಿ ಬದಲಾಯಿಸುವುದು ಯಾರ ಹಿತಕ್ಕಾಗಿ ?




ವ್ಯಕ್ತಿ ಸ್ವಾತಂತ್ರ್ಯವನ್ನು ನೀಡದ ಯಾವ ರಾಜ್ಯಗಳೂ ಪ್ರಭುತ್ವಗಳೂ ಸ್ಥಾಪನೆಗೊಳ್ಳುವ ಅವಶ್ಯಕತೆ ಇಲ್ಲ. ವ್ಯಕ್ತಿ-ಸಮಾಜದ ನಡುವೆ ಸಾಮರಸ್ಯ ತರುವ ಕಲ್ಪಿಸುವ ವ್ಯವಸ್ಥೆ ನಮಗೆ ಬೇಕಾಗಿದೆ. ಏಕೆಂದರೆ, ಉಪಜೀವನದ ನೆಪದಲ್ಲಿ ಸೈನಿಕನ ಸಾವು 'ಅಗ್ಗ' ಆಗಬಾರದು. ಅಧಿಕಾರಶಾಹಿಗೆ, ಶ್ರೀಮಂತ ಮನೆತನಗಳಿಗೆ ಇರದ ದೇಶ ಸೇವೆ, ಗಡಿರಕ್ಷಣೆಯ ಕಾಳಜಿ, ಹಳ್ಳಿಯ ಸೂರಪ್ಪನಿಗೆ ಮಾತ್ರ ವಹಿಸಿಕೊಟ್ಟಿದ್ದು ಯಾರು ? ಏಕೆ ?

ಕರ್ತವ್ಯ ಪಾಲನೆಯೆನ್ನುವಂತದು ಆಳುವ ವರ್ಗದ ಆರೋಪಿತ ಮೌಲ್ಯ. ಏಕೆಂದರೆ ಇದರ ಸಂರಚನೆಯಲ್ಲಿಯೇ ಅದರ ಹಿತವಿದೆ. ಇದಕ್ಕೆ ಉತ್ತಮ ಉದಾಹರಣೆ ಜಲಿಯನ್‌ವಾಲಾಬಾಗ್ ಹತ್ಯಾಕಾಂಡ. ಸುಮಾರು ಮೂರು ಸಾವಿರಮಂದಿಗೆ ಯಾವ ಮುನ್ಸೂಚನೆಯನ್ನು ಕೊಡದೆ ನಿರ್ದಾಕ್ಷಿಣ್ಯವಾಗಿ ಗುಂಡಿಟ್ಟು ಕೊಲ್ಲಿಸಿದ ರೆಜಿನಾಲ್ಡ್ ಇ. ಎಚ್. ಡಯರ್ ಕೂಡ ದೇಶಭಕ್ತನೆಂದು ಸನ್ಮಾನಗೊಂಡ. ಅಷ್ಟೇ ಅಲ್ಲ, ಈ ಘಟನೆಯ ಸೇಡನ್ನು ೨೧ ವರ್ಷಗಳ ನಂತರ ೧೬ ವರ್ಷದ ಬಾಲಕ 'ಉಧಂ ಸಿಂಗ್, ಡಯರ್‌ನನ್ನು ಕೊಲ್ಲುವುದರ ಮೂಲಕ ತೀರಿಸಿಕೊಂಡದ್ದು ದೇಶಭಕ್ತನಾಗಿಯೇ ! ಅಂದಲ್ಲಿ ಇಂಡಿಯಾದಲ್ಲಿ ಬರ್ಬರ ಹತ್ಯೆಗೆ ಕಾರಣನಾಗಿ ಬ್ರಿಟನ್ನಿನ ಪಾಲಿಗೆ ದೇಶಭಕ್ತನಾಗಿ ಸನ್ಮಾನಗೊಂಡ ಡಯರ್‌ಗೂ ಇಂಗ್ಲೆಂಡ್‌ನಲ್ಲಿ ಕೊಂದು ಭಾರತದಲ್ಲಿ ದೇಶಪ್ರೇಮಿಯಾಗಿ ಮೆರೆದ ಉಧಂ ಸಿಂಗ್‌ಗೂ ವ್ಯತ್ಯಾಸವನ್ನು ಎಲ್ಲರು ಸಮಾನವಾಗಿ ಕಾಣುತ್ತಾರೆಯೆ ? ಅವರಿಬ್ಬರ ದೇಶಭಕ್ತಿಯ ಸ್ವರೂಪದಲ್ಲಿ ಭಿನ್ನತೆ ಎಂಥದ್ದು ? ಇಲ್ಲಿ ಮಾನದಂಡವಾದ ಅಂಶ ಯಾವುದು ? ಸಾಮಾನ್ಯನಿಗೆ ಸ್ವಾತಂತ್ರ್ಯ, ಸಮಾನತೆಯನ್ನು ಕೊಡದ, ಗೌರವಿಸದ, ಪ್ರಭುತ್ವ ನಮ್ಮನಾಳುತ್ತಿರುವುದು ಇಷ್ಟೆಲ್ಲಾ ದುರಂತಕ್ಕೆ ಕಾರಣವಲ್ಲವೇ ? ತ್ಯಾಗ - ಬಲಿದಾನದ ಮೂಲಕ ಗಳಿಸಿಕೊಂಡ ಸ್ವಾತಂತ್ರ್ಯ ಹರಣವಾಗುತ್ತಿರುವುದು ಯಾರಿಂದ ? ಯಾರಿಗಾಗಿ ? ಇವು ನಮ್ಮನ್ನು ಕಾಡುತ್ತಿರುವ ಸಂಗತಿಗಳು. ಕನಸುಗಳನ್ನು ಹೊತ್ತು ಹೋದಾಗ ಸಿಕ್ಕಿದ್ದು ಹತಾಶೆ, ನಿರಾಶೆ, ನೋವು, ಆಕ್ರೋಶ, ಅಸಾಹಯಕತೆ. ಸಿದ್ಧ ಮಾದರಿಯ ಮೌಲ್ಯಗಳ ಸುಳಿಯಲ್ಲಿ ಸಿಕ್ಕು ನರಳುವುದು ಇನ್ನೆಷ್ಟು ಕಾಲ ? ಆಧುನಿಕತೆಯ ಸ್ವಾರ್ಥತನದ ಕರಿನೆರಳಲ್ಲಿ ಒಡಮೂಡಿರುವ ವಿಷ ವೃಕ್ಷಗಳ ನಾಶ ಯಾವ ರೀತಿಯದು ? ಬಹುಶಃ ಫಲ ನೀಡುವ, ನೆರಳಾಗುವ ಮರಗಳು ನಮ್ಮ ನಡುವೆ ಇರುವಂತೆ, ನೆಡುವಂತೆ ಮಾಡುವುದೇ ನಿಜವಾದ ದೇಶಭಕ್ತಿ, ಜನಸೇವೆ ಎನ್ನಬಹುದಲ್ಲವೆ ?

ಡಾ. ವೆಂಕಟಗಿರಿ ದಳವಾಯಿ
ಕನ್ನಡ ಉಪನ್ಯಾಸಕರು
ಎಸ್. ಇ. ಎಸ್. ಮಹಾವಿದ್ಯಾಲಯ
ಸಂಡೂರು-೫೮೩೧೧೯

RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14





# ಶ್ರೀಗಂಧದ ಶುದ್ಧ ಪರಿಮಳ




ಶ್ರೀಗಂಧದ ದಿವ್ಯ ಪರಿಮಳ ಮತ್ತು ನಿಸರ್ಗದ ಪರಿಶುಭ್ರತೆ
– ನಿಮ್ಮ ಅಚ್ಚುಮೆಚ್ಚಿನ ಮೈಸೂರ್ ಸ್ಯಾಂಡಲ್ ಟಾಲ್ಕ್
ಇದೀಗ ಅಚ್ಚುಕಟ್ಟಾದ ಹೊಸ ಪ್ಯಾಕ್‌ನಲ್ಲಿ ಲಭ್ಯ.

ಇದರ ತೆಳುವಾದ ಅಂದವಾದ ಆಕಾರ
ಇದರಲ್ಲಿ ಅಡಗಿದೆ ಚಂದದ ಸಾಕಾರ
ನಿಜವಾಗಿಯೂ ಇದು ಅಚ್ಚುಕಟ್ಟು!!

ಇದರ ಪರಿಶುಭ್ರ ಪರಿಮಳವು
ಹಿತವ ಕೊಡುವುದು ನಿಮಗೆ ಪ್ರತಿದಿನವು.




ದೊರೆಯುತ್ತದೆ 20ಗ್ರಾಂ, 50ಗ್ರಾಂ, 100ಗ್ರಾಂ, 300ಗ್ರಾಂನಲ್ಲಿ




**ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತ**
ಪಿ.ಬಿ.ನಂ.5531, ಬೆಂಗಳೂರು - ಪುಣೆ ಹೆದ್ದಾರಿ, ರಾಜಾಜಿನಗರ,
ಬೆಂಗಳೂರು - 560 055 ದೂರವಾಣಿ : **337 1106, 337 6922, 337 0469**
ಫ್ಯಾಕ್ಸ್ : **080337 0498,** ಈಮೇಲ್ : **sandal@giasbg01.vsnl.net.in**

ಶಾಖೆಗಳು : • ಕಲ್ಕತ್ತ • ಚೆನ್ನೈ • ಕಾನ್ಪುರ್ • ಮುಂಬೈ
• ನವದೆಹಲಿ • ಹೈದರಾಬಾದ್

ಪರಿಶುಭ್ರ
ಪರಿಮಳ ಪ್ರತಿನಿತ್ಯ.

CANCO • BLR • KSDL • 1101 • 2000


Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna